


ಡಿಸೆಂಬರ್ ೨೦೦೧
ಬೆಲೆ : ರೂ. ೧೦

# ಹೊಸತು

ನೆಮ್ಮದಿಯ ನಾಳೆ ನಮ್ಮದು

ಮುಂದಿನ ಸಂಚಿಕೆ
ವಾರ್ಷಿಕ ವಿಶೇಷಾಂಕ
ನಿಮ್ಮ ಪ್ರತಿಯನ್ನು
ಕಾದಿರಿಸಿಕೊಳ್ಳಿ

# ಹೊಸತು

## ಒಳಗೇನಿದೆ.....




*ಚಿತ್ರಗಳು : ಪಿ. ಮಹಮ್ಮದ್, ಗುಜ್ಜಾರ್, ಸತೀಶ್ ಯಲ್ಲಾಪುರ, ಹರಿಣಿ,*
*ಜಿ. ಎಂ. ಬೊಮ್ನಳ್ಳಿ, ರವಿಕುಮಾರ್ ಅಜ್ಜೀಪುರ, ಬಿ. ವಿಲ್ಸನ್,*
*ಪ್ರದೀಪ್, ಶ್ರೀಹರಿ, ವಸಂತ ಹೊಸಬೆಟ್ಟು*
*ಮುಖಚಿತ್ರ : ಕೆ. ಪಿ. ಸ್ವಾಮಿ*
*ವಿನ್ಯಾಸ : ನವಕರ್ನಾಟಕ ವಿನ್ಯಾಸ*
*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಈ ತಿಂಗಳು

ಅಲ್ಲಿ ಪೋಟೋ, ಇಲ್ಲಿ ಪೊಲೀಸ್ ಎಂಬಂತಾಗಿದೆ ಕರ್ನಾಟಕದ ಪರಿಸ್ಥಿತಿ. ಅದ್ವಾನಿ ಪ್ರಕಾರ ದೇಶದ ಪತ್ರಿಯೊಬ್ಬನೂ ರಾಕ್ಷಸ ಭಯೋತ್ಪಾದಕನಾಗುವ ಚಿಹ್ನೆಯುಳ್ಳವನು. ಆದ್ದರಿಂದ ಅವರನ್ನು ನಿಗ್ರಹಿಸಲು ಗೃಹಮಂತ್ರಿಗೆ ಒಂದು ಮುಳ್ಳಿನ ಗದೆ ಬೇಕು. ಕರ್ನಾಟಕದ ಪೊಲೀಸು ಮಹಾನಾಯಕರು ಬೆಂಗಳೂರಿನ ಜನಸಾಮಾನ್ಯರನ್ನು ತೊಟ್ಟಿಯ ಕಸ ಎಂಬಂತೆ ನಡೆಸಿಕೊಳ್ಳುವುದು ಪೋಟೋದಷ್ಟೆ ಹೀನಾಯವಾದದ್ದು. ಬಲಿಷ್ಠ ಶ್ರೀಮಂತರನ್ನುಳಿದು ಬೇರೆಯವರೆಲ್ಲಾ ಅಸಹ್ಯ ಪ್ರಜೆಗಳು ಎಂಬ ಹುಳು ಸಾಂಗ್ಲಿಯಾನಾ ತಲೆಯನ್ನು ಹೊಕ್ಕಿದೆ. ಅದಕ್ಕೆ ಅವರು ಸೈಕಲ್ ಸವಾರರನ್ನು ನಿಕೃಷ್ಟರನ್ನಾಗಿ ಕಂಡು ದಂಡಿಸುತ್ತಾರೆ, ಮರಗಳನ್ನು ಕಡಿಸುತ್ತಾರೆ ಮತ್ತು ಶ್ರೀಮಂತರ ಮಕ್ಕಳಿಗೆ ಆಟವಾಡಲು ತಿಂಗಳಿಗೊಮ್ಮೆ ಗಾಂಧಿ ರಸ್ತೆಯನ್ನು ಬಿಟ್ಟುಕೊಡುತ್ತಾರೆ! ಇದು ಮಾನಸಿಕ ವಿಕೃತಿಗೆ ಮತ್ತು ಸಮಾಜವನ್ನು ಒಡೆದು ಛಿದ್ರಗೊಳಿಸುವ ಪ್ರವೃತ್ತಿಗೆ ಉದಾಹರಣೆ. ಅದ್ವಾನಿ ಭಯೋತ್ಪಾದಕರನ್ನು ಹತ್ತಿಕ್ಕಬೇಕೆನ್ನುತ್ತಾರೆ, ಸಾಂಗ್ಲಿಯಾನಾ ಭಯೋತ್ಪಾದಕರನ್ನು ಸೃಷ್ಟಿಸುತ್ತಾರೆ. ದೇಶಕ್ಕೆ ಅಮೆರಿಕಾದಿಂದ ಒದೆತ, ಮತ್ತು ಜನಕ್ಕೆ ನಮ್ಮ ಮಂತ್ರಿಗಳಿಂದ – ಪೊಲೀಸು ಮಹಾಧಿಕಾರಿಗಳಿಂದ ತುಳಿತ! ಆದರೂ ಸಾಂಗ್ಲಿಯಾನಾ ಅಂತಹವರಿಗೆ ಎಂತಹ ಪ್ರಜ್ಞೆ ಆವರಿಸಿದೆಯೆಂಬುದು ಹೇಸಿಗೆಯನ್ನುಂಟುಮಾಡುವ ವಿಷಯ. ಅವರಿಗೆಲ್ಲಾ ಮನೋವೈಕಲ್ಯದ ಬಾಧೆ ಇದೆ. ಯಾವನೋ ಬಿಳಿತೊಗಲಿನ ವಿದೇಶಿ ಪ್ರವಾಸಿಗ ಗಾಂಧಿ-ಬ್ರಿಗೇಡ್ ರಸ್ತೆಗೆ ಬರುತ್ತಾನೆಂದರೆ ನಾವಲ್ಲಿ ಹೋಗಬಾರದೆನ್ನುವ ಆಜ್ಞೆ ಖಂಡನೀಯ. ಸೈಕಲ್ ಸವಾರರನ್ನು ನೋಡಿ ಅವನ ಕಣ್ಣು ಕುಕ್ಕುತ್ತದಾದರೆ ಅವನು ಅಲ್ಲಿಗೆ ಹೋಗುವುದು ಬೇಡ. ನಮ್ಮ ದೇಶದಲ್ಲಿ ನಮಗಿಲ್ಲದ ಸ್ವಾತಂತ್ರ್ಯ ಅವನಿಗೆ ಕೊಡಬೇಕೆ? ಇದು ದೇಶಾಭಿಮಾನದ ಕೊರತೆಯೆಂದರೆ ತಪ್ಪಲ್ಲ.

ಈ ಮಧ್ಯೆ ಜನಗಳ ಉದ್ಧಾರಕ್ಕೆಂದೇ ಹುಟ್ಟಿದ ಅವತಾರ ಪುರುಷನಂತೆ ದೇವೇಗೌಡರು ರಭಸದಿಂದ ನಡೆದು, ಬೆಂಗಳೂರನ್ನು ಮುಟ್ಟಿ, ವ್ರತ ಮುಗಿಯಿತೆಂದು ನಿರಾಳದಿಂದ ಕೂತರೆ. ಚನ್ನಪಟ್ಟಣ, ವಿಠಲೇನಹಳ್ಳಿ ಮುಂತಾದ ಊರುಗಳ ಜನ ಎಳನೀರು ಕುಡಿದು ಹಾಯಾಗಿರಬಹುದು ! ಇನ್ನೆಲ್ಲಿ ಹಾಗೆ ಭಾವಿಸಿ ಜನ ನೆಮ್ಮದಿಯಿಂದ ಉಸಿರಾಡಿ ಬಿಡುತ್ತಾರೋ ಎಂದು ಕೃಷ್ಣ ಧಾವಿಸಿ ಅವರ ಮನಸ್ಸನ್ನು ಹಿಂಡುತ್ತಾರೆ. ನಮ್ಮ ಪಟ್ಟು ಕಡಿಮೆ ಇಲ್ಲವೆಂದು ಒಂದು ಡಜನ್ ಮಂತ್ರಿಗಳು ಕೃಷ್ಣರ ಹಿಂದೆ ನಿಂತು ತಮಟೆ ಹೊಡೆಯುತ್ತಾರೆ. ಇದು ನಮ್ಮ ರಾಜಕೀಯದ ಉನ್ನತ ಮಾದರಿ ! ಒಂದು ಸಾಮಾನ್ಯ ಸರ್ಕಾರಿ ಸಮಾರಂಭಕ್ಕೆ ಐದು ಲಕ್ಷ ಚೆಲ್ಲುವ ಈ ಮಂದಿಗೆ ಸಾರ್ವಜನಿಕರ ಶ್ರಮ ಮತ್ತು ಹಣ ಇವುಗಳ ಬಗ್ಗೆ ಲಕ್ಷ್ಯವಿಲ್ಲ. ಚನ್ನಪಟ್ಟಣದಲ್ಲಿ ರೈತರನ್ನು ಸೇರಿಸಿದ ಕಾಂಗ್ರೆಸ್ ಧುರೀಣರು ಬೆಂಗಳೂರು-ಮೈಸೂರು ಹೆದ್ದಾರಿಯ ರಚನೆಗೂ ರೈತರ ಬೆಂಬಲವಿದೆಯೆಂದು ನಾಳೆಯೆ ಅರಚಲು ಆರಂಭಿಸುತ್ತಾರೆ, ಜೇಬು ತುಂಬಿಸಿಕೊಳ್ಳುತ್ತಾರೆ. ಆನಂದದಿಂದ ಮುಟ್ಟಿನೋಡಿಕೊಳ್ಳುತ್ತಾರೆ. ಆಗ ಬೆಂಗಳೂರು-ಮೈಸೂರು ನಡುವಣ ಹಳ್ಳಿಗಳ ರೈತರ ಕಣ್ಣೀರು ಒರೆಸಲು ಗೌಡರೂ ಇರುವುದಿಲ್ಲ, ಕೃಷ್ಣ ಮಹಾಶಯರೂ ಇರುವುದಿಲ್ಲ. ಈ ಎಚ್ಚರ ಇರಬೇಕಾದ್ದು ನಮ್ಮ ರೈತಬಾಂಧವರಿಗೆ ಅತಿಮುಖ್ಯ.

**ಮುಖಪುಟದಲ್ಲಿ**

ಬೆಂಗಳೂರಿನ ಕಲಾಮಾಧ್ಯಮ ಸಂಸ್ಥೆ ಮತ್ತು ಚಿತ್ರಕಲಾ ಪರಿಷತ್ ಸಂಘಟಿಸಿದ್ದ ಜಾನಪದ ಮೇಳ ನವೆಂಬರ್ ೧ ರಿಂದ ೪ ರವರೆಗೆ ಚಿತ್ರಕಲಾ ಪರಿಷತ್ತಿನ ಆವರಣದಲ್ಲಿ ಯಶಸ್ವಿಯಾಗಿ ಜರುಗಿತು. ತಮಿಳ್ನಾಡು, ಆಂಧ್ರಪ್ರದೇಶ, ಹೊಸದಿಲ್ಲಿ, ರಾಜಾಸ್ತಾನ, ಅಸ್ಸಾಂ - ಮುಂತಾದ ಕಡೆಗಳಿಂದ ಬಂದಿದ್ದ ಜನಪದ ಕಲೆಗಾರರಲ್ಲದೆ, ಕರ್ನಾಟಕದಿಂದ ಕಂಸಾಳೆ ತಂಡದವರು ಸಹ ಪ್ರದರ್ಶನ ನೀಡಿ ಪ್ರೇಕ್ಷಕರನ್ನು ರಂಜಿಸಿದರು. ಬೇರೆ ಬೇರೆ ಪ್ರಾಂತಗಳ ಜನಪದ ಕಲಾವಸ್ತುಗಳ ಪ್ರದರ್ಶನ - ಮಾರಾಟ ಸಹ ನಡೆಯಿತು.

ಚಿತ್ರದಲ್ಲಿ : ರಾಜಸ್ತಾನಿ ಜನಪದ ಕಲಾವಿದರು.




ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೩ ಸಂಚಿಕೆ - ೫ ಡಿಸೆಂಬರ್ ೨೦೦೧

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಚಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೮೨೬

*ಹೊಸತು ಕಚೇರಿಯ ವಿಳಾಸ*






**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**


## ಸಂಪಾದಕೀಯ

**ಕಾ**ತಾರ್ ದೇಶದ ದೋಹಾದಲ್ಲಿ ಈಗಷ್ಟೆ ವಿಶ್ವವಾಣಿಜ್ಯ ಸಂಸ್ಥೆಯ ನಾಲ್ಕನೆಯ ಅಧಿವೇಶನ ಮುಗಿಯಿತು. ಇದಕ್ಕೆ ಹಿಂದಿನ ಮೂರು ಅಧಿವೇಶನಗಳಲ್ಲಿ ಇನ್ನಷ್ಟು ವಿಷಯಗಳನ್ನು ಚರ್ಚಿಸಲು ಮುಂದುವರಿಯಲಾಗದ ಸ್ಥಗಿತ ಪರಿಸ್ಥಿತಿ ಉಂಟಾಗಿತ್ತು. ಸಿಯಾಟಲ್‌ನಲ್ಲಿ ನಡೆದ ಗಲಭೆ ಮಾತ್ರ ಕಾರಣವಲ್ಲದೆ, ಸಂಸ್ಥೆಯ ಒಳಗೆ ಮುಂದುವರಿದ, ಅಭಿವೃದ್ಧಿಶೀಲ ಮತ್ತು ತೀರಾ ಹಿಂದುಳಿದ ಬಣಗಳ ನಡುವಿನ ತೀವ್ರ ಭಿನ್ನಾಭಿಪ್ರಾಯವೇ ಈ ಪರಿಸ್ಥಿತಿಗೆ ಕಾರಣವಾಗಿತ್ತು. ಆಫಘನ್ ಯುದ್ಧ ಪರಿಸ್ಥಿತಿ, ಅಂತರರಾಷ್ಟ್ರೀಯ ಭಯೋತ್ಪಾದಕ ಸಮಸ್ಯೆ, ವಿಶ್ವದಾದ್ಯಂತ ಆರ್ಥಿಕ ಪ್ರಗತಿಯಲ್ಲಿ ಹಿನ್ನಡೆ - ಈ ಹಿನ್ನೆಲೆಯಲ್ಲಿ ದೋಹಾದ ಸಭೆಯೇ ಸೇರಲಾರದೆಂಬ ಸಂದೇಹವೂ ಇತ್ತು. ಅದೂ ಮುಸ್ಲಿಂ ಪ್ರದೇಶದಲ್ಲಿ. ಅದೇ ಕಾಲದಲ್ಲಿ ವಿಶ್ವಸಂಸ್ಥೆಯ ಬಹುಮುಖ್ಯ ಬಿಸಿಬಿಸಿ ವಾತಾವರಣದ ಸಭೆಯ ಹಿನ್ನೆಲೆಯಲ್ಲಿ ದೋಹಾದ ಸಭೆ, ಗೊತ್ತಾದ ಸಮಯಕ್ಕಿಂತ ಒಂದು ದಿನ ಹೆಚ್ಚಾಗಿಯೇ ತೆಗೆದುಕೊಂಡು, ಸಭೆಯನ್ನು ಜಯಪ್ರದವಾಗಿಸಿಕೊಂಡಿತು. ಇದು ಅಂತರರಾಷ್ಟ್ರೀಯ ವಣಿಕ ಸಂಬಂಧಗಳ, ಸರ್ಕಾರಗಳನ್ನೂ ಮೀರಿದ ಬಲಾಢ್ಯತೆಯ ಒಂದು ಪ್ರದರ್ಶನವೆನ್ನಬೇಕು.

ಸಭೆ ಜಯಪ್ರದವಾಯಿತು ಅಂದರೆ ಭಾರತದ ದೃಷ್ಟಿಯಿಂದ ಎಂದು ಅರ್ಥೈಸಬೇಕಿಲ್ಲ. ಕಾರಣ ಇತ್ತೀಚಿಗೆ ಸ್ಪಷ್ಟವಾಗುತ್ತಿರುವ ವಿಷಯವೆಂದರೆ ವಿಶ್ವವಾಣಿಜ್ಯ ಸಂಸ್ಥೆ ಎಲ್ಲ ಸರ್ಕಾರಗಳಿಗೂ ಮೀರಿದ, ತಾನೇ ಒಂದು ಶಕ್ತಿಶಾಲಿ ಸರ್ಕಾರವೆಂಬಂತೆ ಸರ್ಕಾರಗಳ ಸ್ವಾಯತ್ತತೆಗೆ ಬೆಲೆ ಕೊಡದಂತೆ ವರ್ತಿಸುತ್ತಿದೆ. ಸಭೆಗೆ ಬಂದಿರುವ ವಾಣಿಜ್ಯ ಮಂತ್ರಿ ತನ್ನ ದೇಶದ ಮಂತ್ರಿ ಸಂಪುಟಕ್ಕೂ, ಶಾಸನ ಸಭೆಗೂ ಅಧೀನವೆಂಬುದನ್ನು ಪರಿಗಣಿಸದೆ, ಅಲ್ಲೇ ತಮ್ಮ ಒಪ್ಪಿಗೆಯನ್ನೂ ಸೂಚಿಸುವ ಒತ್ತಡ ಹೇರುತ್ತದೆ. ಬಲಾಢ್ಯ ಹತ್ತಿಪ್ಪತ್ತು ರಾಷ್ಟ್ರಗಳು ತೆರೆಯಹಿಂದೆ ಸಭೆ ಸೇರಿ ತೀರ್ಮಾನಿಸಿ, ಆ ತೀರ್ಮಾನವನ್ನು ಇತರ ರಾಷ್ಟ್ರಗಳ ಮೇಲೆ, ಆಮಿಷ, ಬೆದರಿಕೆ ಹಾಕಿ ಬಗ್ಗು ಬಡಿದು, ಒಪ್ಪಿಸುತ್ತವೆ, ಇಲ್ಲವೆ, ಸುತ್ತು ಬಳಸಿ ಹಾರಿಕೆಯ ಮಾತು ಬಳಸಿ, ತೀರ್ಮಾನದ ಪ್ರಣಾಳಿಕೆಗಳನ್ನು ರಚಿಸಿ, ಸದ್ಯದ ವಿರೋಧವನ್ನು ಪರಿಹರಿಸಿಕೊಳ್ಳುವುದು, ಹೀಗೆ ಈ ಸಂಸ್ಥೆಯ ಪ್ರವೃತ್ತಿ ದೋಹಾದ ಸಭೆಯಲ್ಲಿ ಬಲು ಜಾಣ್ಮೆಯಿಂದ ಚಾಕಚಕ್ಯತೆಯಿಂದ ಕಂಡುಬಂತು. ಸಭೆ ಸೇರಲು ಕೆಲವೇ ದಿವಸಗಳ ಮುಂಚೆ ಬರಲಿರುವ ತೀರ್ಮಾನಗಳ ಕರಡೆಂಬಂತೆ ಚರ್ಚೆಗೆಂಬಂತೆ ಒಂದು ಹೇಳಿಕೆಯನ್ನು ಪ್ರಕಟಿಸಿದ್ದು ಈಗ ಅದರ ಬಹುಭಾಗ ತೀರ್ಮಾನವಾಗಿ ಹೊರಬಂದಿರುವುದು ಈ ಸರ್ವಾಧಿಕಾರೀ ಪ್ರವೃತ್ತಿಯ ಸೂಚಕವಾಗಿದೆ.

ಮಂತ್ರಿ ಮಾರನ್‌ರ ಮುರಸೊಲಿ ಉಲಿದ ಬಹುಮುಖ್ಯ ವಿಷಯವೆಂದರೆ ಈಗಾಗಲೇ ಉರುಗ್ವೆ ಸುತ್ತಿನಲ್ಲಿ ತೀರ್ಮಾನವಾಗಿರುವ ವಿಷಯಗಳನ್ನೂ ಕಾರ್ಯಗತಗೊಳಿಸುವುದರಲ್ಲಿ ತವಕ ತೋರಿಸದೆ, ಹೊಸ ಹೊಸ ವಿಷಯಗಳನ್ನು ಮುಂದೆ ತಂದು ಹೊಸ ಸುತ್ತಿನ ಮಾತುಕತೆಗೆ ಒತ್ತಡ ತರುವುದನ್ನು ವಿರೋಧಿಸಿದ್ದು. ಈಗ ತೀರ್ಮಾನಿಸಿದ್ದು ಹಿಂದಿನ ತೀರ್ಮಾನಗಳನ್ನು ಅಭಿವೃದ್ಧಿಶೀಲ ರಾಷ್ಟ್ರಗಳ ಸಮಸ್ಯೆಯನ್ನು, ಅದರಲ್ಲೂ ವ್ಯವಸಾಯೋತ್ಪನ್ನ ಮಾರುಕಟ್ಟೆಯ ಸಮಸ್ಯೆಗಳನ್ನು, ಗಮನದಲ್ಲಿಟ್ಟು ಕೊಂಡು ತ್ವರಿತವಾಗಿ ಕಾರ್ಯಗತಗೊಳಿಸಲು ಚರ್ಚಿಸುವುದು ಮತ್ತು ಒಮ್ಮತ ಪಡೆದು ಹೊಸದಾಗಿ ಸೇರಿಸಬಹುದಾದ ವಿಷಯಗಳ ಬಗ್ಗೆ ಅಧ್ಯಯನಕ್ಕಾಗಿ ಒಂದು ಕಾರ್ಯಕ್ರಮವನ್ನು ಹಾಕಿಕೊಳ್ಳುವುದು. ಇದು ಸುತ್ತು ಬಳಸು ಮಾತಿನ ಒಂದು ಛಾಪು. ಅಳಿಯ. ಅಲ್ಲ ಮಗಳ ಗಂಡ ಅಂದಂತೆ. ನಾವು ಮಾಡುವುದನ್ನು ಹೇಗೂ ನೀವು ನಡೆಯಲಾರಿರಿ ಎಂಬ ಧೋರಣೆ

ಈಗಾಗಲೇ ಚರ್ಚಿತವಾಗುತ್ತಿರುವ ಅದರಲ್ಲೂ ವ್ಯವಸಾಯ ಮತ್ತು ಸೇವಾ ಕ್ಷೇತ್ರ ವಾಣಿಜ್ಯದ ವಿಷಯದಲ್ಲಿ ಉದ್ದೇಶಗಳ ಹೆಚ್ಚು ಸ್ಪಷ್ಟನೆ ಮತ್ತು ಒಂದು ಕಾಲಮಿತಿಯೊಳಗೆ ಒಪ್ಪಂದ ಚರ್ಚೆಯನ್ನು ಮುಗಿಸುವುದು ಅಗತ್ಯವೆಂದು ಒಪ್ಪಲಾಗಿದೆ. ಕೈಗಾರಿಕಾ ಕರಗಳು, ವ್ಯಾಪಾರ ಮತ್ತು ಹೂಡಿಕೆ, ವ್ಯಾಪಾರ ಮತ್ತು ಪೈಪೋಟಿ ನೀತಿ, ವ್ಯಾಪಾರ ಮತ್ತು ಪರಿಸರಕ್ಕೆ ಸಂಬಂಧಪಟ್ಟ ಕೆಲವು ವಿಷಯಗಳ ಬಗೆಗೆ ಸಾಧ್ಯವಾದ ಒಂದಿಷ್ಟು ಚರ್ಚೆಯನ್ನು ಪ್ರಾರಂಭಿಸುವುದು. ಇನ್ನು ಮುಂದೆ ಸಾಧ್ಯವಾಗಬಹುದು. ಒಂದಿಷ್ಟು ವಿನಾಯಿತಿ ದೊರಕಿರುವ ಕ್ಷೇತ್ರಗಳೆಂದರೆ ಹೂಡಿಕೆಯ ಕ್ಷೇತ್ರದಲ್ಲಿ, ಪೈಪೋಟಿಯಲ್ಲಿ, ಸರ್ಕಾರಗಳು ಸ್ವಂತಕ್ಕಾಗಿ ಕೊಳ್ಳುವ ವ್ಯವಹಾರದಲ್ಲಿ, ವ್ಯಾಪಾರಕ್ಕೆ ಅನುಕೂಲ ಕಲ್ಪಿಸುವಲ್ಲಿ. ಆಂತರಿಕ ಆಹಾರ ಪರಿಸ್ಥಿತಿಯ ಆರಕ್ಷಣೆ, ಜೀವನಾವಶ್ಯಕತೆಗಳು, ಹಳ್ಳಿಗಾಡಿನ ಅಭಿವೃದ್ಧಿ ಮುಂತಾದ ಕ್ಷೇತ್ರಗಳಲ್ಲಿ ಸರ್ಕಾರಗಳು ಒಂದಿಷ್ಟು ಸ್ವತಂತ್ರವನ್ನು ತೋರುವ ಅಗತ್ಯವನ್ನು ಈಗ ಗುರುತಿಸಲಾಗಿದೆ ! ದೇಶದ ಹದಗೆಟ್ಟ ಆರೋಗ್ಯದ ತುರ್ತು ಪರಿಸ್ಥಿತಿಗಳಿಂದಾಗಿ ಸರ್ಕಾರಗಳು ಜೀವರಕ್ಷಕ ಔಷಧಿಗಳಲ್ಲಿ ಪೇಟೆಂಟ್ ನಿಯಮಗಳನ್ನು ಲೆಕ್ಕಿಸದೆ, ರಾಷ್ಟ್ರದ ಹಿತದೃಷ್ಟಿಯಿಂದ ನೀತಿ ರೂಪಿಸಬಹುದೆಂಬುದು ಒಂದು ಸಡಿಲಗೊಂಡ ನೀತಿ.

ಇಷ್ಟಾದರೂ ವಿಶ್ವಸಂಸ್ಥೆ ಆರಂಭವಾದಂದಿನಿಂದ ಅದರೊಳಗಿನ ಗ್ಯಾಟ್ ಹೇಳುತ್ತಾ ಬಂದಿರುವ ಮುಂದುವರಿದ ರಾಷ್ಟ್ರಗಳ ಮಾರುಕಟ್ಟೆಯನ್ನು ಉದಾರವಾಗಿ ಹಿಂದುಳಿದ ರಾಷ್ಟ್ರಗಳ ಸರಕುಗಳಿಗೆ ತೆಗೆಯುವ ಉದ್ದೇಶ ಇನ್ನೂ ಮರೀಚಿಕೆಯಾಗಿಯೇ ಉಳಿದಿದೆ. ಹಿಂದುಳಿದ ರಾಷ್ಟ್ರಗಳ ಪ್ರಗತಿಗೆ ಮಾರುಕಟ್ಟೆಯ ಈ ಉದಾರೀಕರಣ ಮಾರ್ಗವೆಂದೂ ಇದು ವಿಶ್ವಶಾಂತಿಯ ಏಕೈಕ ಮಾರ್ಗವೆಂದೂ ಹೇಳಲಾಗಿತ್ತು. ಮುಂದುವರಿದ ರಾಷ್ಟ್ರಗಳು ತಮ್ಮ ರಾಷ್ಟ್ರಾದಾಯದ ಶೇ. ೧ರಷ್ಟನ್ನಾದರೂ ಹಿಂದುಳಿದವರಿಗೆ ಸಹಾಯವಾಗಿ ಕೊಡಬೇಕೆಂದು ಒಪ್ಪಿಕೊಂಡು ಈಗ ಆ ಜವಾಬ್ದಾರಿಯಿಂದ ನುಣಿಚಿಕೊಳ್ಳಲು ಮುಕ್ತ ವ್ಯಾಪಾರದ ನೀತಿಯನ್ನು ವಿಶ್ವ ವ್ಯಾಪಾರ ಸಂಸ್ಥೆಯ ರೂಪದಲ್ಲಿ ಮುಂದಿಟ್ಟವರು, ಐವತ್ತು ವರ್ಷಗಳ ಚರ್ಚೆಯಾದರೂ ಈ ಯಾವುದನ್ನೂ ಕಾರ್ಯಗತಗೊಳಿಸಿಲ್ಲ. ದಿನೇ ದಿನೇ ಮುಂದುವರಿದ ರಾಷ್ಟ್ರಗಳು ಹಿಂದುಳಿದವರ ಸರಕುಗಳನ್ನು ತಡೆಗಟ್ಟಲು ಹೊಸ ಹೊಸ ತಂತ್ರಗಳನ್ನು ಬಳಸುತ್ತಿದ್ದಾರೆ. ಇವೆಲ್ಲವನ್ನೂ ವಿಶ್ವವಾಣಿಜ್ಯ ಸಂಸ್ಥೆಯ ನಿಯಮಗಳನ್ನು ಬಳಸಿಯೇ ಅವುಗಳನ್ನು ವ್ಯಾಖ್ಯಾನಿಸಿಯೇ ನಡೆಸುತ್ತಿರುವುದು ವಿಪರ್ಯಾಸ ! ಈ ನಿಯಮಗಳನ್ನು ವ್ಯಾಖ್ಯಾನಿಸಿ, ಕಟ್ಟಳೆ ನಡೆಸಿ, ಗೆಲ್ಲುವುದಕ್ಕೆ ತಗಲುವ ಖರ್ಚು ಮತ್ತು ಸಮಯ ತುಂಬಾ ದುಬಾರಿಯೆಂದು ತಮ್ಮಿಂದ ನಿಭಾಯಿಸಲು ಸಾಧ್ಯವಿಲ್ಲವೆಂದು ದುರ್ಬಲ ರಾಷ್ಟ್ರಗಳು ಗೋಳಿಡುತ್ತಿವೆ. ದೋಹಾದ ಸಭೆಯಲ್ಲಿ ಇವು ಯಾವುವೂ ಚರ್ಚೆಗೆ ಬರಲಿಲ್ಲ.

ವಾಸ್ತವ ವಿಷಯವೆಂದರೆ ಒಂದು ನೂರು ಕೋಟಿ ಜನಸಂಖ್ಯೆಯ ಭಾರತದ ಆರ್ಥಿಕ ವ್ಯವಸ್ಥೆ ಎಷ್ಟು ಚಿಕ್ಕದೆಂದರೆ, ವಿಶ್ವವ್ಯಾಪಾರದ ಮೊತ್ತದಲ್ಲಿ ಇದರ ಪಾಲು ಶೇ. ೧ರಷ್ಟೂ ಇಲ್ಲ. ಆದುದರಿಂದ ಭಾರತದ ಅನಿಸಿಕೆಗಳು ಅಂತರರಾಷ್ಟ್ರೀಯ ವಾಣಿಜ್ಯ ಲೋಕದಲ್ಲಿ ಯಾವ ಪ್ರಭಾವವನ್ನೂ ಬೀರಲಾರದು. ಮುಂದುವರಿದ ರಾಷ್ಟ್ರಗಳು ಭಾರತವನ್ನು ತಮ್ಮ ಸರಕುಗಳನ್ನು ಮಾರಲು ಮಾರುಕಟ್ಟೆಯಾಗಿ, ತಮ್ಮ ಬಂಡವಾಳ ಹೂಡಲು ಕ್ಷೇತ್ರವಾಗಿ, ಅರ್ಥಾತ್, ನೇರ ಇಲ್ಲಿಯ ಆರ್ಥಿಕ ಕ್ಷೇತ್ರದಲ್ಲಿ ಮುಕ್ತವಾಗಿ ಪ್ರವೇಶಿಸಿ, ಅದನ್ನು ತನಗೆ ಬೇಕಾದಂತೆ ಬಳಸಿ, ತಮಗೆ ಬೇಕಾದ ಮಾರುಕಟ್ಟೆಯನ್ನು ತಾವೇ ಸೃಷ್ಟಿ ಮಾಡಿಕೊಳ್ಳಬೇಕಾಗುತ್ತದೆ.

ಭಾರತದ ಸರ್ಕಾರಗಳೇ ಆಗಲೀ, ಇಲ್ಲಿಯ ಉದ್ಯೋಗಪತಿಗಳೇ ಆಗಲೀ ತಾವಾಗೇ ಈ ಕಾರ್ಯವನ್ನು ನಿರ್ವಹಿಸಲಾರದಷ್ಟು ದುರ್ಬಲರೂ, ಉತ್ಸಾಹವಿಲ್ಲದವರೂ ಆಗಿದ್ದಾರೆ. ಇಂಥ ಪರಿಸ್ಥಿತಿಯಲ್ಲಿ ಭಾರತದ ಮಂತ್ರಿಗಳ ಆರ್ಭಟ ಹಾಸ್ಯಾಸ್ಪದವಾಗಿ ಕಂಡಿದ್ದರೆ ಆಶ್ಚರ್ಯವಿಲ್ಲ. ಅಧ್ಯಕ್ಷ ಬುಷ್, ಟಿಲಿವಿಷನ್ ಕ್ಯಾಮರಾ ಮುಂದೆಯೇ ನಮ್ಮ ಪ್ರಧಾನಿಯವರಿಗೆ ನೀಡಿದ ಸೂಚನೆ - ದೋಹಾದಲ್ಲಿನ ನಿಮ್ಮ ಮಂತ್ರಿಗೆ ಸಹಕರಿಸಲು ಹೇಳಿ ಎಂದು. ಮುರಸೊಲಿ ಮಾರನ್ ಸಮಸ್ಯೆಯ ಎಲ್ಲಾ ಮುಖಗಳನ್ನು ಚೆನ್ನಾಗಿ ಅರಿತವರು. ಆದರೆ ಅವರ ಪಕ್ಷದ ತತ್ವಹೀನ ನೀತಿಯಿಂದಾಗಿ, ಭಾಜಪದ ಸಹಭಾಗಿಗಳಾಗಿ, ಅವರಿಗೆ ತಮ್ಮ ಅಂತಃಸಾಕ್ಷಿಯಂತೆ ವರ್ತಿಸುವ ಸ್ವಾತಂತ್ರ್ಯವಿಲ್ಲ. ಅವರು ತತ್ವನಿಷ್ಠರಾದರೆ, ದೋಹಾದಲ್ಲಿನ ವೈಫಲ್ಯಕ್ಕಾಗಿ ಹೊಣೆಗಾರಿಕೆ ಹೊರಬೇಕು. ಕಾಂಗ್ರೆಸ್ ಪಕ್ಷ ಭಾಜಪ ಮೈತ್ರಿಕೂಟವನ್ನು ಇದಕ್ಕಾಗಿ ತರಾಟೆಗೆ ತೆಗೆದುಕೊಳ್ಳುವ ನಾಟಕ ಆಡುತ್ತದೆ. ಆದರೆ ಲೋಕಸಭೆಗೂ ತಿಳಿಸದೆ ವಿಶ್ವವಾಣಿಜ್ಯ ಸಂಸ್ಥೆಯ ಪ್ರಣಾಳಿಕೆಗೆ ಸಹಿ ಹಾಕಿ ಬಂದವರು ಅವರೇ ಎಂಬುದನ್ನು ಮರೆಯುವಂತಿಲ್ಲ.

ಉದಾರ ವಾಣಿಜ್ಯ ನೀತಿ, ಮುಂದುವರಿದ ರಾಷ್ಟ್ರಗಳ ಮಾರುಕಟ್ಟೆಯಲ್ಲಿ ಹಿಂದುಳಿದವರ ಸರಕುಗಳಿಗೆ ಉಚಿತ ಪ್ರವೇಶ ಮತ್ತು ಬೆಲೆ, ಇವು ಅರ್ಧಶತಮಾನದ ಬಯಕೆ. ದೋಹಾದಲ್ಲಿ ಈ ದೋಹದಕ್ಕೆ ಒಂದಿಷ್ಟೂ ತೃಪ್ತಿ ದೊರೆತಿಲ್ಲ.

*- ಕೆ. ಎಸ್. ಪಾರ್ಥಸಾರಥಿ*

## ನ್ಯಾಯಾಲಯದ ಸಿಟ್ಟು

ನಮ್ಮ ನ್ಯಾಯಾಂಗ ಎಷ್ಟು ಚುರುಕೆಂದರೆ ಕೇವಲ ಹತ್ತೊಂಭತ್ತು ವರ್ಷಗಳ ನಂತರ ಕಾಶ್ಮೀರದ ಒಂದು ಕಾನೂನಿನ ಬಗ್ಗೆ ಯಾವ ಅಭಿಪ್ರಾಯವನ್ನೂ ನೀಡದೆ ಪ್ರಸ್ತಾವವನ್ನು ಹಿಂದಿರುಗಿಸಿದೆ. ಇದರ ತಕ್ಷಣದ ಪರಿಣಾಮ ತೀವ್ರವಾಗಿರಲು ಸಾಧ್ಯವಿದೆ. ಜಮ್ಮುವನ್ನೋ ಕಾಶ್ಮೀರವನ್ನೋ ಬಿಟ್ಟು ಯಾರೋ ಒಬ್ಬರು ಪಾಕಿಸ್ತಾನಕ್ಕೆ ಐವತ್ತು ವರ್ಷಗಳ ಹಿಂದೆ ತೆರಳಿದ್ದು, ಈಗ ಮರಳಿಬರಬೇಕೆಂದು ತೀರ್ಮಾನಿಸಿ ಹಾಗೆ ಬಂದರೆ ಆತನಿಗೆ ಅವನ ಅಂದಿನ ಆಸ್ತಿಯನ್ನು ಬಿಟ್ಟುಕೊಡಬೇಕೆ ಎಂಬುದು ಪ್ರಶ್ನೆ. ಅದೇ ಆಸ್ತಿಯನ್ನು ಅಂದು ಪಾಕಿಸ್ತಾನದಿಂದ ಭಾರತಕ್ಕೆ ಬಂದವನೊಬ್ಬ ರೂಢಿಸಿಕೊಂಡಿದ್ದರೆ ಏನು ಮಾಡಬೇಕು ? ಹಾಗೆ ಬರಲು ಅವಕಾಶವಿಲ್ಲ, ಏಕೆಂದರೆ ಅವನು ಈಗ ಭಾರತದ ಪ್ರಜೆಯಲ್ಲ ಎಂಬುದು ಸ್ಪಷ್ಟ ಉತ್ತರ. ನ್ಯಾಯಾಲಯವು ಅದನ್ನು ಹೇಳದಿದ್ದರೂ ಅದರ ಬಗ್ಗೆ ತಕರಾರು ಸಾಧ್ಯವಿಲ್ಲ. ಆದರೆ ಈ ತೀರ್ಮಾನಕ್ಕೆ ಹತ್ತೊಂಭತ್ತು ವರ್ಷ ಬೇಕಾಗಿತ್ತೆ ಎಂದು ಟೀಕೆ ಮಾಡಿದರೆ ನ್ಯಾಯಾಲಯಕ್ಕೆ ಸಿಟ್ಟು ಬರುತ್ತದೇನೋ ತಿಳಿಯದು. ಯಾವಾಗ, ಎಷ್ಟು ಸಿಟ್ಟು ಅಂಗೀಕಾರಾರ್ಹ ಎಂಬುದಕ್ಕೆ ನಿರ್ದಿಷ್ಟ ಮಾಪಕಗಳಿಲ್ಲದಿರುವುದು ಸಾಮಾನ್ಯ ಪ್ರಜೆಗಳಿಗೆ ಕಷ್ಟವೆನಿಸುತ್ತದೆ.

ಅರುಂಧತಿ ರಾಯ್ ಎಂಬ ದಿಟ್ಟ ಮಹಿಳೆ ಇದನ್ನೇ ಸರ್ವೋಚ್ಚ ನ್ಯಾಯಾಲಯಕ್ಕೆ ತಾನು ಸಲ್ಲಿಸಿರುವ ಪ್ರಮಾಣಿತ ಹೇಳಿಕೆಯಲ್ಲಿ ತಿಳಿಸಿದ್ದಾಳೆ. ನ್ಯಾಯಾಲಯದ ವರ್ಚಸ್ಸಿಗೆ ಭಂಗ ತರಬೇಕೆಂಬ ಯಾವ ಉದ್ದೇಶವೂ ಇಲ್ಲದೆ ಒಂದು ತೀರ್ಪನ್ನು ವಿಶ್ಲೇಷಣೆ - ವಿಮರ್ಶೆಗಳಿಗೆ ಗುರಿಪಡಿಸುವಾಗ ಭಾರತದ ಪ್ರಜೆಗೆ ಲಕ್ಷ್ಮಣರೇಖೆ ಯಾವುದು ಮತ್ತು ಎಲ್ಲಿದೆ, ಎಂದು ಆಕೆ ಅವಲೋಕನ ಮಾಡಹೊರಟಿರುವುದು ಎಲ್ಲರಿಗೂ ಪ್ರಸ್ತುತವಾಗುವಂತಹ ಸಂಗತಿ. ಮೂರು ನ್ಯಾಯಮೂರ್ತಿಗಳು ಒಂದು ತೀರ್ಪನ್ನು ನೀಡಿ, ಬೇರಿಬ್ಬರು ಬೇರೆಯೇ ತೀರ್ಪು ನೀಡಿದ್ದರೆ, ವ್ಯವಹಾರದಲ್ಲಿ ಅನ್ವಯವಾಗುವುದು ಮೂರು ಜನರು ನೀಡಿದ ತೀರ್ಪೇ. ಹಾಗಿದ್ದರೆ ಕಾನೂನನ್ನು ಅರ್ಥೈಸುವುದರಲ್ಲಿ ದ್ವಂದ್ವಕ್ಕೆ ಮಾನ್ಯತೆ ಇರಬೇಕೇ ? ಆ ಇಬ್ಬರು ನೀಡಿರುವ ತೀರ್ಪನ್ನು ಸಮರ್ಥಿಸಿ ಹೇಳಿಕೆ ಕೊಟ್ಟರೆ ಉಳಿದ ಮೂವರನ್ನು ಅವಹೇಳನ ಮಾಡಿದಂತಾಗುವುದಿಲ್ಲವೆ ? ಇಂತಹ ಅರ್ಥ ಬರುವ ಅನೇಕ ವಿಷಯಗಳನ್ನು ಅರುಂಧತಿ ರಾಯ್ ಪ್ರಖರವಾಗಿ ಎತ್ತಿದ್ದಾರೆ. ಅವರ ಹೇಳಿಕೆಯ ಒಂದು ಭಾಗವನ್ನು ಮನನ ಮಾಡುವುದು ಯೋಗ್ಯವಾಗಿರುತ್ತದೆ. ಆ ಭಾಗವನ್ನು ಹೀಗೆ ಸಂಗ್ರಹಿಸಬಹುದು; ಒಬ್ಬ ವ್ಯಕ್ತಿ ಇದ್ದಾನೆ. ಅವನು ಅಥವಾ ಅವಳು ಯಾರೇ ಇರಲಿ, ಅವರು ನ್ಯಾಯಾಲಯವನ್ನು ಟೀಕಿಸಿ ಒಂದು ಮಾತು ಹೇಳಿಬಿಟ್ಟಾಕ್ಷಣ ನ್ಯಾಯಾಲಯದ ಗೌರವಕ್ಕೆ ಕುಂದುಂಟಾಗುವುದಿಲ್ಲ. ನಮ್ಮ ಸರ್ವೋಚ್ಚ ನ್ಯಾಯಾಲಯದ ಗುರುತ್ವ ಆ ಮಟ್ಟದ್ದು. ಟೀಕೆಯು ಆಧಾರವಿಲ್ಲದ್ದೋ ಅಸಂಗತವಾದ್ದೋ ಆಗಿದ್ದರೆ ಆ ಟೀಕೆಯನ್ನು ಮಾಡಿದವನ ಗೌರವಕ್ಕೆ ಅದು ಹಾನಿಯುಂಟುಮಾಡುತ್ತದೆ. ಇದರಲ್ಲಿ ಸಂಶಯವೇ ಇಲ್ಲ. ಅದೇ ಟೀಕೆಯು ಸರಿಯಾದದ್ದೇ ಆಗಿದ್ದರೆ, ನ್ಯಾಯಾಲಯವು ತನ್ನ ಗೌರವವನ್ನು ರಕ್ಷಿಸಿಕೊಳ್ಳಲು ಟೀಕಾಕಾರನನ್ನು ಶಿಕ್ಷೆಗೆ ಗುರಿಮಾಡಬಾರದು. ಹಾಗೆ ಮಾಡುವುದರಿಂದ ಅದು ಖಂಡಿತ ಕಳೆದುಹೋದ ಗೌರವವನ್ನು ಪಡೆದುಕೊಳ್ಳುವುದಿಲ್ಲ. ಅದರ ಬದಲು ಅದಕ್ಕೆ ತದ್ವಿರುದ್ಧವಾದ ಪರಿಣಾಮವೇ ಉಂಟಾಗುತ್ತದೆ. ಗೌರವ, ಅಧಿಕಾರಯುತ ವಾಣಿ ಮತ್ತು ಮಹತ್ವ ಇರುವುದು ನ್ಯಾಯಮೂರ್ತಿಗಳ ನಡೆವಳಿಕೆಯ ಆಧಾರದ ಮೇಲೆ ಮತ್ತು ಅವರು ನೀಡುವ ತೀರ್ಪುಗಳ ಗುಣಾತ್ಮಕ ಲಕ್ಷಣದಿಂದ. ಅರ್ಧ ಶತಮಾನದ ಕಾಲ ಹೀಗೆ ಗೌರವವನ್ನು ಕಾಯ್ದುಕೊಂಡು ಬಂದಿರುವ ನ್ಯಾಯಾಲಯದ ಘನತೆಯು ಒಬ್ಬ ಟೀಕಾಕಾರನ ಹೇಳಿಕೆಯಿಂದ ಕಳೆದುಹೋಗುತ್ತದೆಂದು ಭಾವಿಸಲಾಗದು.

ಈ ಮಾತುಗಳನ್ನು ಅರುಂಧತಿ ರಾಯ್ ಹೇಳಿರುವುದು ಆಕೆಯ ಎರಡನೆಯ ಪ್ರಮಾಣಿತ ಹೇಳಿಕೆಯಲ್ಲಿ. ತನ್ನ ಕ್ರಿಯೆ ಮತ್ತು ಮಾತುಗಳಿಂದ ಸರ್ವೋಚ್ಚ ನ್ಯಾಯಾಲಯದ ಘನತೆಗೆ ಚ್ಯುತಿಯುಂಟುಮಾಡಿದ್ದಾಳೆಂಬ ಆರೋಪವನ್ನು ತಳ್ಳಿಹಾಕುತ್ತಾ ಆಕೆ ಹೇಳಿರುವ ಮಾತುಗಳು ಏಕೆ ಪ್ರಮುಖವಾಗುತ್ತವೆಂದರೆ ಪ್ರಜಾಪ್ರಭುತ್ವದಲ್ಲಿ ಪ್ರತಿಯೊಂದು ಅಂಗಸಂಸ್ಥೆಯ ಎಲ್ಲೆಗಳೂ ನಿಶ್ಚಿತವಾದ ರೂಪದಲ್ಲಿ ಇರಬೇಕಾಗಿರುವುದರಿಂದ, ನಮ್ಮ ಪ್ರಜಾಪ್ರತಿನಿಧಿಗಳು ಹೇಗೆ ಸಂವಿಧಾನದತ್ತವಾದ ಅಧಿಕಾರವನ್ನು ಮೀರಿ ಸರ್ವಾಧಿಕಾರಿಗಳಾಗಕೂಡದೋ ಹಾಗೆ ಬೇರೆ ಅಂಗಸಂಸ್ಥೆಗಳಿಗೂ ಅನ್ವಯವಾಗುವ ಸೀಮಾ ರೇಖೆಗಳು ಇರಬೇಕಾದ್ದು ಸ್ವಾಭಾವಿಕ. ಹಾಗಾದರೆ ಆ ರೇಖೆ ಯಾವುದು ? ನ್ಯಾಯಾಲಯಕ್ಕೆ ಸಂಬಂಧಿಸಿದಂತೆ ಈವರೆಗೆ ಆ ರೇಖೆಯನ್ನು ನಿಖರವಾಗಿ ಗುರುತುಹಾಕಿ ತೋರಿಸಿಲ್ಲ. ಆದ್ದರಿಂದ ಅದನ್ನು ಈಗಲಾದರೂ ಸ್ಪಷ್ಟಗೊಳಿಸಬೇಕಾದ್ದು ಅತ್ಯವಶ್ಯಕ. ನರ್ಮದಾ ಆಂದೋಲನದಲ್ಲಿ ಅರುಂಧತಿಯವರು ತಾಳಿರುವ ನಿಲುವನ್ನು ಸಮರ್ಥಿಸದಿರುವವರು ಸಹ ಆಕೆ ನ್ಯಾಯಾಲಯದ ನಿಂದನೆಯ ಆರೋಪವನ್ನು ಎದುರಿಸುತ್ತಿರುವಾಗ ಆಕೆ ಎತ್ತಿರುವ ಕೆಲವು ಮೂಲಭೂತ ಪ್ರಶ್ನೆಗಳನ್ನು ಉಪೇಕ್ಷಿಸುವಂತಿಲ್ಲ. ಆಕೆಯ ಕೃತ್ಯ ನಿಂದನೆಯೇ ಎನಿಸಿಕೊಳ್ಳುತ್ತದೆಂದು ನ್ಯಾಯಾಲಯವು ತೀರ್ಮಾನಿಸಿದರೂ ಆಕೆಯ ಪ್ರಶ್ನೆಗಳು ಅಪ್ರಸ್ತುತವಾಗುವುದಿಲ್ಲ. ಇತರರು ನಿಂದನೆಯ ಆರೋಪಕ್ಕೆ ಗುರಿಯಾಗದಿರಬೇಕಾದರೆ ಯಾವುದು ನಿಂದನೆ ಎಂಬುದನ್ನಾದರೂ ಇದಮಿತ್ಥಂ ಎನ್ನುವ ರೀತಿಯಲ್ಲಿ ವಿಶದಗೊಳಿಸಬೇಕಾಗುತ್ತದೆ.

*- ಜಿ. ರಾಮಕೃಷ್ಣ*


ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ✆ : ೨೨೫೧೩೮೭
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ✆ : ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ✆ : ೪೪೧೦೦೧೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ✆ : ೪೨೪೦೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ✆ : ೨೪೩೦೨




ನವೆಂಬರ್ ೨೦೦೧ರ ಸಂಚಿಕೆಯ ಶ್ರೀ ಚಕ್ರಪಾಣಿಯವರ 'ಸೆಕ್ಯುಲರಿಸಂ ಒಂದು ಚರ್ಚೆ'ಯೆಂಬ ಬರಹವನ್ನು ಕುತೂಹಲದಿಂದ ಮೊದಲಿಗೆ ಓದಿದೆ. ಮೊದಲನೇ ವಾಕ್ಯವೃಂದದಲ್ಲಿ ನಮ್ಮ ಸಂವಿಧಾನದ ಮೂಲ ಘೋಷಣೆ (ಪ್ರಿಯಾಂಬಲ್)ಯಲ್ಲಿ 'ಜಾತ್ಯಾತೀತ' ಎಂಬ ಪದವು ೨೬-೧೧-೧೯೪೯ ರಂದು ಅಂಗೀಕರಿಸಲಾಯ್ತು ಎಂಬ ಅರ್ಥವನ್ನು ನೀಡುತ್ತದೆ.

ಮೂಲಘೋಷಣೆ (ಪ್ರಿಯಾಂಬಲ್)ಯಲ್ಲಿ ೧೯೪೯ರಲ್ಲಿ ಅಂಗೀಕೃತವಾದಾಗ SOVEREIGN, DEMOCRATIC, REPUBLIC ಎಂಬ ಮೂರೇ ಗುಣವಾಚಕಗಳಿದ್ದುದು.

೧೯೭೬ರಲ್ಲಿ ಅಂತಂದರೆ ಮೂಲರೂಪದ ಸಂವಿಧಾನ ಅಂಗೀಕೃತವಾದ ನಂತರ ಇಪ್ಪತ್ತೇಳು ವರ್ಷಗಳು ಕಳೆದಮೇಲೆ ಹಾಗೂ ಎಮರ್ಜನ್ಸಿ ಕಾಲದಲ್ಲಿ ಈ ಮೂರು ಪದಗಳ ಬದಲಿಗೆ SOVEREIGN, SOCIALIST, SECULAR, DEMOCRATIC REPUBLIC ಎಂಬ ವಿಸ್ತರಿತ ವಿಶೇಷಣ ಪದಪುಂಜವು ಸಂವಿಧಾನದ ನಲ್ವತ್ತೆರಡನೇ ತಿದ್ದುಪಡಿಯಿಂದ ಸೇರಿಕೊಂಡಿದೆ.

*ಬೆಳಗಾವಿ* — ***ಅನಂತ ಕಲ್ಲೋಳ***

ನವೆಂಬರ್ ೨೦೦೧ರ 'ಹೊಸತು'ವಿನಲ್ಲಿ ಆರ್. ವಿ. ಭಂಡಾರಿಯವರ "ಬಂಡಾಯ ಸಾಹಿತ್ಯ ಸಂಘಟನೆ ಮತ್ತು ಪ್ರಸ್ತುತ ಸಂದರ್ಭ" ಓದಿದೆ. ಬಹಳ ಆಳವಾದ ಅಧ್ಯಯನಶೀಲ ಲೇಖನವಾಗಿದೆ. ಬಂಡಾಯವೆಂದರೆ ಕೇವಲ ಬೇರೆಯವರನ್ನು ಬಹಿಷ್ಕರಿಸಿ ತುಚ್ಛೀಕರಿಸಿ ಹಕ್ಕು ಪಡೆದುಕೊಳ್ಳುವ ಕ್ರಿಯೆಯಲ್ಲ. ಬಂಡಾಯವೆಂಬುವುದು ಹತ್ತು ತಲೆಮಾರಿನಿಂದ ಬಂದು, ಪ್ರಗತಿ ಸಾಧಿಸಲು ಬಳಸುವ ಹುಟ್ಟಾಗಬೇಕೆ ವಿನಃ ಕತ್ತಿಯಾಗಬಾರದು.

ಆದರೆ ಇತ್ತೀಚಿನ ಹೊಸ ಬಂಡಾಯ ನಾಯಕರು ಹೆಸರಿಗಾಗಿ ಸಂಘಟಿತರಾಗಿ ಸರಕಾರದ ಗದ್ದುಗೆಗೇರುವ ಆಶಯ ಇರಿಸಿಕೊಳ್ಳುತ್ತಾರೇನೋ ಎಂಬ ಸಂಶಯ ಮೂಡಿಬರುತ್ತಿದೆ. ಹಾಗಾಗಬಾರದು. ಮೂಲೋದ್ದೇಶವನ್ನು ಗಾಳಿಗೆ ತೂರಿದರೆ ಬಂಡಾಯ ಎಲ್ಲಿಯದು!

*ಗಲಗಲಿ* — ***ಶಂಕರ ಮುತ್ತಣ್ಣವರ***

### ಏಜೆಂಟರುಗಳ ಗಮನಕ್ಕೆ

ಜನವರಿ ೨೦೦೨ರ 'ಹೊಸತು' ವಿಶೇಷ ಸಂಚಿಕೆಯಾಗಿ ಹೊರಬರಲಿದೆ. ಸುಮಾರು ೨೦೦ ಪುಟಗಳ ವೈವಿಧ್ಯಮಯ ಸಚಿತ್ರ ಲೇಖನಗಳು, ಕಥೆ, ಕವನ, ಪ್ರಬಂಧಗಳ ಸಂಗ್ರಹ. ಬೆಲೆ ರೂ. ೨೫. ಮುಂಗಡ ಹಣ ಕಳಿಸಿ ನಿಮಗೆ ಅಗತ್ಯವಾದಷ್ಟು ಪ್ರತಿಗಳನ್ನು ಕಾಯ್ದಿರಿಸಿಕೊಳ್ಳಿ.

***– ವ್ಯವಸ್ಥಾಪಕ, ಹೊಸತು***

ಶ್ರೀ ಗುಂಡೂರಾವ್ ಹೆಬ್ರಿಯವರ 'ನಾಸ್ತಿಕ ಕೃತಿಗಳು ಹಾಗೂ ನಾಸ್ತಿಕತೆಯ ಅಗತ್ಯ' ಲೇಖನ ಉತ್ತಮವಾಗಿತ್ತು. ಚಿಂತನೆಗೆ ಪ್ರೇರಣೆ ನೀಡುವ ಇಂಥ ಲೇಖನಗಳು ಪ್ರಕಟಗೊಳ್ಳಲಿ.

'ಹೊಸತು' ನಮ್ಮ ವಿಚಾರಗಳಿಗೆ ಒರೆಗಲ್ಲಾಗುತ್ತಿದೆ. ಅನನ್ಯ ಪತ್ರಿಕೆ.

*ಗಳತಗಾ* — ***ಗಾಯತ್ರಿನಂದನ***

ಗುಂಡೂರಾವ್ ಹೆಬ್ರಿಯವರ 'ನಾಸ್ತಿಕ ಕೃತಿಗಳು ಹಾಗೂ ನಾಸ್ತಿಕತೆಯ ಅಗತ್ಯ' ಎಂಬ ಲೇಖನ ಚಿಕ್ಕದಾದರೂ ಅರ್ಥಪೂರ್ಣವಾಗಿದೆ. ಅವರು ಹೆಸರಿಸುವ ಪುಸ್ತಕಗಳಲ್ಲಿ ಡಾ|| ಶಿವರಾಮ ಕಾರಂತರ 'ಬಾಳ್ವೆಯೇ ಬೆಳಕು' ಕೂಡ ಸೇರಬೇಕು.

*ಆರೆಭಯಂಗಡಿ* — ***ಆರ್. ವಿ. ಭಂಡಾರಿ***




'ಸಾಮಾಜಿಕ ವಿಪ್ಲವದಲ್ಲಿ ಕಾವ್ಯದ ಪಾತ್ರ' ಲೇಖನ ಡಾ|| ಎ. ವೃಷಭೇಂದ್ರಾಚಾರ್‌ರವರ ಅಂತರಾಳದಿಂದ 'ಹೊಸತು'ದಲ್ಲಿ ಬೆಳಕು ಮೂಡಿತ್ತು. ಒಂದು ವೇಳೆ ಇಂಥ ಸಾಹಿತ್ಯಕ ಪರಂಪರೆ ಇಲ್ಲದಿದ್ದರೆ ಕನ್ನಡಿಗರ ಜನಜೀವನ ಸಂಸ್ಕೃತಿಗಳು ಎಷ್ಟು ಬರಡಾಗಿರುತ್ತಿತ್ತು.

*ಗಲಗಲಿ* — ***ಮಲ್ಲಿಕಾರ್ಜುನ ಗಂಗಪ್ಪ ಗಾಣಗೇರ***

'ಹೊಸತು' ನಿಧಾನವಾಗಿ ಓದುತ್ತೇನೆ. ತಮ್ಮ ವಿಚಾರಗಳತ್ತ ಬಹಳ ಗಾಂಭೀರ್ಯದಿಂದ ಅಭ್ಯಾಸ ಮಾಡುತ್ತೇನೆ. ಪ್ರತಿ ಸಂಚಿಕೆ ವೈಶಿಷ್ಟ್ಯಮಯವಾಗಿರುತ್ತದೆ.

ನಮ್ಮೀರ್ವರ ವಿಚಾರಗಳಲ್ಲಿ ತಾರತಮ್ಯ ಇರಬಹುದು. ಅದೇನೂ ಹೊಸತಲ್ಲ; ಆದರೆ ನಾವಿಬ್ಬರೂ ಸಾಧಿಸಬೇಕಾದ ಗುರಿ ಹೊಸತು; ಚಿಂತನೆ ಹೊಸತು.

ಶ್ಯಾಮಪ್ರಸಾದ ಮುಖರ್ಜಿಯವರ ಕುರಿತಾದ ಲೇಖನ ವಿದ್ವತ್ಪೂರ್ಣವಾಗಿದೆ. ಅವರ ಜೀವನದ ಹೊಳಪನ್ನು ಎತ್ತಿ ತೋರಿಸಿರುವಿರಿ. ಆದರೆ ಒಂದು ಮಾತು.... 'ಹಿಂದುತ್ವ'ದ ವಿಷಯ ಪ್ರಸ್ತಾವನೆಗೆ ಬಂದಾಗಲೆಲ್ಲ ಮುಚ್ಚಿಹಾಕಲು ಪ್ರಯತ್ನಿಸಿರುವಿರಿ. ನೀವು ಮುಚ್ಚಬೇಕೆಂದೆಷ್ಟೋ ಪ್ರಯತ್ನ ಮಾಡಿದರೂ ಅದು ಅರ್ಥಗರ್ಭಿತವಾಗಿ ಹೊರಬಂದಿದೆ.

*ಬೆಳಗಾವಿ* — ***ಪಿ. ವಿಜಯಕುಮಾರ***

### ಚಂದಾದಾರರಿಗೆ ಉಚಿತ !

ಜನವರಿ ೨೦೦೨ರ 'ಹೊಸತು' ವಿಶೇಷ ಸಂಚಿಕೆಯನ್ನು ಚಂದಾದಾರರಿಗೆ ಉಚಿತವಾಗಿ ನೀಡಲಿದ್ದೇವೆ.

ಪ್ರಿಯ ಚಂದಾದಾರರೇ ! ನಿಮ್ಮ ಮಿತ್ರರು 'ಹೊಸತು' ಪತ್ರಿಕೆಗೆ ಚಂದಾದಾರರಾಗಲು ಸಹಕರಿಸುವ ಮೂಲಕ ಸುಮಾರು ೨೦೦ ಪುಟಗಳ 'ಹೊಸತು' ವಿಶೇಷ ಸಂಚಿಕೆಯನ್ನು ಪಡೆಯಲು ಅವಕಾಶ ಕಲ್ಪಿಸಿಕೊಡಬಹುದಲ್ಲವೆ ?

೨೦೦೧ರ ಡಿಸೆಂಬರ್ ೩೧ರವರೆಗೆ ಚಂದಾ ನೀಡುವವರಿಗೂ ಈ ಅವಕಾಶ ಲಭಿಸುತ್ತದೆ. ನಿಮ್ಮ ಚಂದಾ ಅವಧಿ ೨೦೦೨ ಜನವರಿಗೆ ಮುಂಚೆಯೇ ಮುಕ್ತಾಯವಾಗುವುದಿದ್ದಲ್ಲಿ ನೀವೂ ಕೂಡಲೇ ಚಂದಾ ನವೀಕರಿಸಿ.

ವಾರ್ಷಿಕ ಚಂದಾ ರೂ. ೧೦೦, ಎರಡು ವರ್ಷಗಳಿಗೆ ರೂ. ೧೮೦ ಹಾಗೂ ಮೂರು ವರ್ಷಗಳಿಗೆ ರೂ. ೨೫೦.

***– ವ್ಯವಸ್ಥಾಪಕ, ಹೊಸತು'***

**ನಮ್ಮೂರ ಮುದುಕಿ**

ಡಾ|| ಎಂ. ಎನ್. ಕೇಶವರಾಯರ ಪದ್ಯದ ಕೊನೆಯ ಸಾಲುಗಳು :

ಕೊನೆಯಲ್ಲಿ ಆ ಮುದುಕಿ ನುಂಗಿದಳು ಪರಮಾಣು
ಬಾಂಬನ್ನೆ ! ಆ ಗಳಿಗೆ ಘಟಿಸಿತೊಂದಾಸ್ಫೋಟ
ಆನೆ-ಕುದುರೆ-ನಾಯಿ-ಬೆಕ್ಕು-ಕೋಳಿ-ಜೇಡ-ನೊಣಗಳ
ಜೊತೆಗೆ ವಿಶ್ವವೇ ನಿರ್ನಾಮ
ಉಳಿಯಿತು ಪರಂಧಾಮ !

*ಮೈಸೂರು* — ***ಜಿ. ಟಿ. ನಾರಾಯಣರಾವ್***

'ನಮ್ಮೂರ ಮುದುಕಿ' ಎಂಬ ಹೆಸರಿನಲ್ಲಿ ನವೆಂಬರ್ ಸಂಚಿಕೆಯಲ್ಲಿ ಪ್ರಕಟವಾದ ನನ್ನ ಕವಿತೆಗೆ ನಾನು ಕೊಟ್ಟಿದ್ದ ಶೀರ್ಷಿಕೆ 'ಯಾರೆಲ್ಲ ಈ ಮುದುಕಿ !' ಹೆಸರೇ ಸೂಚಿಸುವಂತೆ, ಈ ಕವನ ಜನಪದ ಕತೆಯೊಂದರ ಆಧಾರದ ಮೇಲೆ ಬರೆದ ಒಂದು ವಿಡಂಬನಾತ್ಮಕ ಪ್ಯಾರೊಡಿ.

ನನಗೆ ಅಪರಿಚಿತರಾದ, ತಮ್ಮ ಪತ್ರಿಕೆಯ ಓದುಗರೊಬ್ಬರು ಪತ್ರಿಕೆ ತಲುಪಿದ ದಿನವೇ ಈ ಕವನ ಓದಿ, ಪ್ಯಾರೊಡಿಯ ಲಕ್ಷಣಗಳನ್ನು ಗುರುತಿಸಿ,

### ಹಾಸ್ಯಕವಿಗಳೇ ಗಮನಿಸಿ !

"ಹಾಸ್ಯ ಪ್ರಶ್ನೋತ್ತರಗಳು" ಎಂಬ ಸಂಕಲನ: ಪ್ರಶ್ನೆಗಳನ್ನು ತಾವೇ ಕೇಳಿಕೊಂಡು ತಾವೇ ಉತ್ತರ ಬರೆದು ಕಳುಹಿಸಬೇಕು. ಪ್ರಶ್ನೆ - ಉತ್ತರ ಎರಡೂ ಸೇರಿ ಆರು ಸಾಲು ಮೀರಬಾರದು. ಪ್ರಶ್ನೋತ್ತರಗಳು ಹಾಸ್ಯಮಯವಾಗಿರಬೇಕು. ಹತ್ತಾರು ಬಹುಮಾನಗಳಿವೆ.

*ವಿಳಾಸ :*

**ಗುರುರಾಜ ಪ್ರಕಾಶನ**
ಸಿ-೨, ಗೇಟ್ ನಂ. ೨,
ಸಿ.ಪಿ.ಡಬ್ಲ್ಯೂ.ಡಿ. ಕಾಲೋನಿ, ವಿಜಯನಗರ,
ಬೆಂಗಳೂರು - ೪೦, ದೂರವಾಣಿ : ೩೪೦೭೮೭೬

ಆಫ್ಘನ್-ಅಮೆರಿಕನ್ ಹಾವಳಿಯನ್ನು ಕಂಡುಕೊಂಡು ಕಾಗದ ಬರೆದಿದ್ದಾರೆ.

*ಬೆಂಗಳೂರು* **ಕೇಶವರಾವ್**

**ಬೆಳಗಲಿ ನೆನಪಿನ ಕಥಾ ಸ್ಪರ್ಧೆ**

ಬನಹಟ್ಟಿಯ 'ದು. ನಿಂ. ಬೆಳಗಲಿ ಸಾಹಿತ್ಯ ಪ್ರತಿಷ್ಠಾನ'ದ ವತಿಯಿಂದ ರಾಜ್ಯ ಮಟ್ಟದ ಕಥಾ ಸ್ಪರ್ಧೆಯೊಂದನ್ನು ಏರ್ಪಡಿಸಿದ್ದಾರೆ. ಅಪ್ರಕಟಿತ ಕಥೆಗಳ ಹಸ್ತ ಪ್ರತಿಗಳನ್ನು ಆಹ್ವಾನಿಸಲಾಗಿದೆ. ಒಬ್ಬರು ಒಂದು ಕಥೆಯನ್ನು ಮಾತ್ರ ಕಳುಹಿಸಬಹುದು. ಆಯ್ಕೆಯಾದ ಮೂರು ಕಥೆಗಳಿಗೆ ಪ್ರಥಮ ಬಹುಮಾನ-೩೦೦೦, ದ್ವಿತೀಯ-೨೦೦೦ ಹಾಗೂ ತೃತೀಯ-೧೦೦೦ ರೂ. ನೀಡಲಾಗುವುದು. ಬಹುಮಾನಿತ ಕಥೆಗಳು ಸೇರಿದಂತೆ, ಮೆಚ್ಚುಗೆ ಪಡೆದ ಕಥೆಗಳನ್ನು ಸಹ ಸಂಕಲಿಸಿ, ಪ್ರಕಟಿಸಲಾಗುವುದು.

ಆಸಕ್ತರು ತಮ್ಮ ಕಥೆಗಳನ್ನು ಡಿಸೆಂಬರ್, ೧೦ ರ ಒಳಗಾಗಿ ಶ್ರೀ ಮಧುರೇಶ್ವರ ಬೆಳಗಲಿ, 'ಕಾದಂಬರಿ' ಸೋಮವಾರ ಪೇಟೆ, ಬನಹಟ್ಟಿ - ೫೮೭ ೩೧೧ ಜಿಲ್ಲಾ: ಬಾಗಲಕೋಟೆ, ಈ ವಿಳಾಸಕ್ಕೆ ಕಳುಹಿಸಲು ಕೋರಲಾಗಿದೆ.

'ಹೊಸತು' ಪತ್ರಿಕೆಯ ವೈಚಾರಿಕ ದೃಷ್ಟಿಕೋನವನ್ನು ಇಷ್ಟಪಡುವ ಓದುಗರು ಕರ್ನಾಟಕದ ಎಲ್ಲ ಭಾಗದಲ್ಲೂ ಇದ್ದಾರೆ. ರಂಜನೆಯ ಹೆಸರಿನಲ್ಲಿ ಅನೇಕ ಪತ್ರಿಕೆಗಳು ತುಳಿಯುವ ದಾರಿಯನ್ನು ಬಿಟ್ಟು ಸಾಮಾಜಿಕ ಬದ್ಧತೆಯ ನೆಲೆಯಿಂದ ಆಚೀಚೆ ಸರಿಯದ ಪತ್ರಿಕೆ ಇದೇ ರೀತಿ ಮುಂದುವರಿಯಲಿ ಎಂದು ಹಾರೈಸುತ್ತೇನೆ.

*ಮಂಗಳೂರು* **ಭುವನೇಶ್ವರಿ ಹೆಗಡೆ**

ನವೆಂಬರ್ ತಿಂಗಳ ಸಂಚಿಕೆಯಲ್ಲಿ ಪ್ರಕಟಗೊಂಡ 'ಸಂಕುಲಜೀವ'ರವರ 'ತಾಯ್ತನವೆಂಬ ವಿಸ್ಮಯ' ಓದಿ ನಿಜಕ್ಕೂ ಸಂತೋಷದಿಂದ ಕಣ್ಣು ತುಂಬಿಬಂದಿತು. ತಾಯ್ತನ, ಶಿಶು ಹಾಗೂ ಹೆರಿಗೆಯ ಬಗ್ಗೆ ಅಷ್ಟರಮಟ್ಟಿಗಾದರೂ ತಿಳಿದುಕೊಂಡು ವರ್ಣಿಸಿದ ಲೇಖಕರ ಅಭಿಪ್ರಾಯ ಪ್ರಶಂಸನೀಯ. ಆದರೆ ಲೇಖಕರೇ ಹೇಳಿದಂತೆ ಹೆರಿಗೆಯ ನೈಜತೆ ಅದನ್ನು ಅನುಭವಿಸಿದ ತಾಯಂದಿರಿಗೆ ಮಾತ್ರ ಗೊತ್ತು. ಹೆರಿಗೆಯ ಸಮಯದಲ್ಲಿ ತನ್ನ ಜೀವನವನ್ನೇ ತ್ಯಾಗ ಮಾಡಿ ಸತ್ತು ಬದುಕಿಬರುವ ತಾಯಿ, ಮಗುವಿನ ಮುಖವನ್ನು ನೋಡಿದೊಡನೆಯೇ ಎಲ್ಲಾ ಕಷ್ಟ, ನೋವುಗಳನ್ನು ಮರೆತು ಅದರ ಲಾಲನೆ, ಪಾಲನೆಯಲ್ಲಿ ಸಂತೋಷವನ್ನು ಪಡೆಯುತ್ತಾಳೆ. ಅದಕ್ಕೆ ಪ್ರತಿಯಾಗಿ ತಾಯಿ ಬಯಸುವುದು ಆ ಮಗುವಿನ ಪ್ರೀತಿಯನ್ನು ಮಾತ್ರ ! ಆದರೆ ಎಲ್ಲಾ ತಾಯಂದಿರಿಗೂ ಅದು ಸಿಗುವುದೇ ?

*ಬೆಂಗಳೂರು* **ಶೋಭಾ ಉಡುಪ**

## ಬಿ.ಜೆ.ಪಿ. ರಕ್ತಬೀಜಾಸುರ

ಎಲ್. ಕೆ. ಅದ್ವಾನಿ ಜನಸಂಘದ ಸುವರ್ಣ ಮಹೋತ್ಸವದ ಸಭೆಯಲ್ಲಿ ಪಾಲ್ಗೊಂಡ ಪ್ರತಿನಿಧಿಗಳನ್ನು ಕುರಿತು ಮಾತನಾಡುತ್ತಾ ಜನಸಂಘದಲ್ಲಿ ದುಡಿಯುತ್ತಿದ್ದ ನಾವು ನೀವೆಲ್ಲ ಪ್ರಾರಂಭದಲ್ಲಿ ಬರಿಗಾಲಲ್ಲಿ ನಡೆದೆವು. ನಂತರ ದೆಹಲಿಯ ಪಹರೆಗಂಜ್ - ಅಜ್ಮೀರ್ ಗೇಟ್ ಸುತ್ತ ಸೈಕಲ್‌ಗಳಲ್ಲಿ ಓಡಾಡಿದೆವು. ನಂತರ ಸ್ಕೂಟರ್ ಬೈಕ್‌ಗಳಲ್ಲಿ ತಿರುಗಿದೆವು. ನಂತರ ಅಯೋಧ್ಯೆಯಲ್ಲಿ ನಡೆಸಿದ [ರಕ್ತ ಸಿಕ್ತ] ಪ್ರಕರಣದ ಫಲವಾಗಿ ಇಂದು ನಡೆಯುತ್ತಿರುವ ಸಭೆಯ ಆಚಿನ ಅಶೋಕ ರಸ್ತೆಯ ಇಕ್ಕೆಲಗಳಲ್ಲಿ ನಮ್ಮ ನಿಮ್ಮ ಕಾರುಗಳನ್ನು ನಿಲ್ಲಿಸಲು ಜಾಗ ಇಲ್ಲದೆ ಇರುವುದು ದೊಡ್ಡ ಸಾಧನೆಯಲ್ಲವೇ ಎಂದಿರುವುದನ್ನು ವಾರೆವ್ವಾ ಕಲ್ಚರಲ್ ನ್ಯಾಷನಲಿಜಂ ಎನ್ನಬಹುದಲ್ಲವೇ? ಬಿಜೆಪಿಯವರ ಈ ವಿಕೃತ ಸಾಧನೆಗಳಿಂದ ತುಳಿತಕ್ಕೆ ಒಳಗಾದ ಜನ ಮೇಲೆ ಬರಲು ನಡೆಸುವ ಪ್ರಯತ್ನಗಳ ಸಾಮರ್ಥ್ಯವನ್ನು ಕುಗ್ಗಿಸಿ ದೇಶದ ಒಟ್ಟಾರೆ ಪ್ರಗತಿಗೆ ಕಡಿವಾಣ ಹಾಕಲಾಗಿದೆ. ಹೀಗಿದ್ದಾಗ್ಯೂ ರಾಮ್, ರಾಮ್, ರಾಮ್, ರಾಮ್ ಎನ್ನಲು ಪ್ರಾರಂಭಿಸಿ ಪ್ರಧಾನ ಮಂತ್ರಿಗಳ ಕಛೇರಿಯಲ್ಲಿ ಅಯೋಧ್ಯೆ ಸೆಲ್ ಪ್ರಾರಂಭಿಸಿದ್ದಾರೆ. ಸೆಲ್ ಅಂದರೆ ಮೃಗಾಲಯಗಳಲ್ಲಿ ಕ್ರೂರ ಪ್ರಾಣಿಗಳನ್ನು ಬಂಧಿಸಿಡುವ ಕಬ್ಬಿಣದ ಕೃತಕ ಬಂಕರ್‌ಗಳು. ಈ ಕ್ರೂರ ಪ್ರಾಣಿಗಳನ್ನು ಕೂಡಿಹಾಕುವ ಬಂಕರಿನ ಕಲ್ಪನೆಯನ್ನು ಹೊಂದಿರುವ ''ಪ್ರಧಾನ ಮಂತ್ರಿ ಕಛೇರಿಯ ಅಯೋಧ್ಯೆ ಸೆಲ್'' ದೆಹಲಿ ಜಮಾ ಮಸೀದಿಯ ಸೈಯದ್ ಅಹಮದ್ ಬುಕಾರಿಯನ್ನು ಕೂಡಿ ಹಾಕುವುದೋ ಅಥವಾ ಸಂಘ ಪರಿವಾರದ ಭಂಗಿ ಬಾಬಾಗಳನ್ನು ಕೂಡಿ ಹಾಕುವುದೋ ಎಂಬುದನ್ನು ಕಾದು ನೋಡಬೇಕಿದೆ.

*ಬೆಂಗಳೂರು* **ಎಸ್. ಸುಧಾಕರ್**

## ಸಮಾಜ ಸೇವೆ

ವ್ಯಕ್ತಿ-ಸಮಾಜಗಳ ಗಂಟು ಕಗ್ಗಂಟಾಗಿಯೇ ಉಳಿದಿದೆ. ಸಮಾಜದಿಂದ ವ್ಯಕ್ತಿಯು ಯಾವ ಪೋಷಣೆಯನ್ನು ಪಡೆಯಬಲ್ಲ ? ಸಮಾಜಕ್ಕೆ ಏನನ್ನು ಕೊಡಬಲ್ಲ ?

ಸಮಾಜಕ್ಕೆ ಏನನ್ನು ಕೊಡಬಲ್ಲನೆಂಬುದನ್ನು ವ್ಯಕ್ತಿಯು ತನ್ನಲ್ಲಿ ಕೊಡಲು ಏನಿದೆಯೆಂಬುದರ ಮೇಲೆ ನಿರ್ಣಯಿಸಬೇಕು. ಇದಕ್ಕಾಗಿ ವ್ಯಕ್ತಿಯು ಮೊದಲು ತನ್ನನ್ನು ತಾನು ಕಂಡುಕೊಳ್ಳಬೇಕು. ತನ್ನ ಗುಣ-ದೋಷಗಳನ್ನು ಕನ್ನಡಿಯಲ್ಲಿಯಂತೆ ಸ್ಪಷ್ಟವಾಗಿ ನೋಡಿರಬೇಕು. ಕೊಡುವುದೆಂದರೆ ಅದೊಂದು 'ಕರುಣೆ'ಯ ವಿಷಯವಲ್ಲ. ತನ್ನ ವಿಕಾಸಕ್ಕೆ ಬೇಕಾದ ವಿಧಾನಗಳಲ್ಲಿ ಇದೂ ಒಂದೆಂದು ಅವನು ಸ್ಪಷ್ಟವಾಗಿ ತಿಳಿದಿರಬೇಕು.

ದೋಷಗಳನ್ನು ಆಂತರಿಕ ಮನೋಮಂದಿರದಲ್ಲಿಯೇ ಕಳೆಯುವ ಹವಣಿಕೆ ಬೇಕು. ಅವು ಮನೆ ಇಲ್ಲವೆ ಸಮಾಜದ ತಾಂಡವವಾಡಿ ಅಗ್ನಿಯನ್ನೆರಚಿರಬಾರದು. ಕ್ರೋಧ, ತರ್ಕಪ್ರಿಯತೆ, ವಾದಪ್ರಿಯತೆ, ನಿಷ್ಠುರ ವಿಮರ್ಶೆ, ಆತ್ಮವಿಶ್ವಾಸ, ಆತ್ಮಗೌರವ ಇವು ಸಮಾಜದಲ್ಲಿ ವಿರಸವನ್ನು ಬೆಳೆಸುವಂತೆ ಮುಂದುವರೆದಿರಬಾರದು. ನಮ್ಮಲ್ಲಿದ್ದ ಕಿಲ್ಬಿಷವನ್ನು ನಾವೇ ಅರಗಿಸಿಕೊಳ್ಳಬೇಕು. ಸರ್ಪದಂತೆ ಇನ್ನೊಬ್ಬರನ್ನು ಅದರಿಂದ ಘಾಸಿಪಡಿಸಿರಬಾರದು.

ಇದ್ದ ಗುಣಗಳ ಅರಳುವಿಕೆಯಲ್ಲಿಯೇ ಆ ಗುಣ ಮಂಡಿತನ ಸಫಲತೆಯಿದೆ. ಹೀಗೆ ಅರಳಿದ ಗುಣಗಳ ಕಂಪನ್ನು ಸವಿಯುವುದರಲ್ಲಿಯೇ ಸಮಾಜದ ಶಕ್ತಿ ಸ್ಫೂರ್ತಿಗಳ ಸಾಮಗ್ರಿ ಇದೆ. ಒಂದು ತೋಟದಲ್ಲಿ ಹೋದಾಗ ಅನೇಕ ಮರ-ಬಳ್ಳಿಗಳ ನರುಗಂಪು ಬಂದು ನಮ್ಮನ್ನು ಸಂತವಿಸುತ್ತದೆ. ಇದು ಗುಲಾಬಿ, ಇದು ಮಲ್ಲಿಗೆ ಎಂದು ನಾವು ವಿಂಗಡಿಸುತ್ತೇವೆ. ಆದರೆ ಈ ವಿಂಗಡಿಕೆಯೇ ಒಂದು ಶಾಸ್ತ್ರವಾಗಿ ನಡೆದು ವಾದವಾಗಿ ಪರಿಣಮಿಸಿ ಆ ಹೂಂಗಂಪನ್ನು ಮರೆಯಿಸಬಾರದು. ಈ ದೃಷ್ಟಿಯಿಂದಲೂ ಋಷಿಯ ಕುಲ-ಗೋತ್ರಗಳನ್ನೂ ಕೇಳುವ ಕಾರಣವಿಲ್ಲ. ಸಮಾಜವು ವಿವಿಧ ಪುಷ್ಪರಂಜಿತ ಉದ್ಯಾನವನವಾಗಬೇಕು. ಅದು ಮುಂದೊಮ್ಮೆ ನಂದನವೂ ಆದೀತು.

ನಿನ್ನಲ್ಲಿರುವ ಗುಣಗಳು ಯಾವವು ? ಒಂದು ಸಂಸ್ಥೆಗಾಗಿ ಉತ್ತಮವಾಗಿ ಬಿಕ್ಕೆ ಬೇಡಬಲ್ಲೆಯಾ ? ಅವಶ್ಯವಾಗಿ ಬೇಡು. ಸಂಸ್ಥೆಯನ್ನು ಕಟ್ಟಬಲ್ಲೆಯಾ ? ಕಟ್ಟು. ಇಲ್ಲವೆ ಬರಿ ನಿನ್ನ ಸ್ವಂತದ ಸಂಸಾರವನ್ನೇ ಚೊಕ್ಕಟವಾಗಿ ಸಾಗಿಸಿ ತೋರಬಲ್ಲೆಯಾ ? ತೋರಿಸು. ಇದೆಲ್ಲವೂ ಬೇಕು. ಅದು ಹೆಚ್ಚು, ಇದು ಕಡಿಮೆಯೆಂದು ದೇವರ ರಾಜ್ಯದಲ್ಲಿ ವಿಂಗಡಿಸುವ ಕಾರಣವಿಲ್ಲ. ಎಲ್ಲವೂ ಹೆಚ್ಚು, ಎಲ್ಲವೂ ಕಡಿಮೆ ಅಣುಮಹತ್ತುಗಳ ಮಾನದಂಡದಿಂದ ಅವುಗಳನ್ನು ತೂಗಿ ನೋಡಿದಾಗ.

ಸಾಹಿತ್ಯ, ರಾಜಕಾರಣ, ಸಾಮಾಜಿಕ ಜೀವನ, ವಿದ್ಯಾಕ್ರಮ, ಔದ್ಯೋಗಿಕ ಜೀವನ ನೆಲದ ಕ್ಷೇತ್ರಗಳು ನೂರೆಂಟು. ನಿನಗೆ ಒಗ್ಗಿದ ಕ್ಷೇತ್ರದಲ್ಲಿ ನೀನು ನೇಗಿಲವನ್ನು ಹಿಡಿದು ನಿಲ್ಲು. ಹಾಗೆ ಮಾಡಿದೊಡನೆ ಸುತ್ತಲೂ ಲೋಕವು ನಿಂತು ಕೈ ತಟ್ಟುವುದೆಂದು ಮಾತ್ರ ತಿಳಿಯಬೇಡ. ಕೈ ತಟ್ಟುವುದರ ಬದಲು ಅದು ಕಲ್ಲೆಸೆಯಬಹುದು. ನೀನು ಕಾರ್ಯ ಪ್ರವೃತ್ತನಾದೆಯೆಂದು ಸೂಚಿಸಲು ಅದು ಒಂದು ಪೂರ್ವ ಚಿಹ್ನವೆಂದು ತಿಳಿದುಕೊ. ಒಮ್ಮನದಿಂದ ಮುಂದುವರಿ. ಬೇರೆ ಯಾವ ಮನ್ನಣೆ ಏತಕ್ಕೆ ಬೇಕು ? ನಿನ್ನ ಆತ್ಮವು ನಿನ್ನನ್ನು ಮನ್ನಿಸಿದರೆ ಸಾಕು.

ಆ ಘನತೆಯ ಮುಂದಿನ ಘನತೆಯಿಲ್ಲ. ಅದೇ ಪರಮ ಪದವಿ. ಹೀಗಿದ್ದೂ ಸಮಾಜವು ನಿನ್ನನ್ನು ತಬ್ಬಿಕೊಂಡಲ್ಲಿ, ಎತ್ತಿ ಗೌರವಿಸಿದಲ್ಲಿ ಆ ಸಂತಸವನ್ನೂ ಬರಮಾಡಿಕೊಳ್ಳು. ಅದು ದೇವನಿತ್ತ ಸುಖ- ಅದನ್ನು ಕೃತಜ್ಞತೆಯಿಂದ ಸ್ವೀಕರಿಸು. ಅದು ನಿನ್ನ ಗಳಿಕೆಯೆಂದು ಮಾತ್ರ ತಿಳಿಯಬೇಡ. ಹಾಗೆ ತಿಳಿದೊಡನೆ ನಿನ್ನ ಶಕ್ತಿಪಾತವಾಯಿತೆಂದು ತಿಳಿ.

ಮುಖ್ಯವಾಗಿ ನೀನು ಸಮಾಜದಲ್ಲಿ ದುಡಿದರೂ, ಅದರಿಂದ ಸಮಾಜದ ಕಲ್ಯಾಣ ಸಾಧಿಸಿದರೂ, ನೀನು ಸಮಾಜಕ್ಕಾಗಿ ದುಡಿದುದು ನಿನ್ನ ವ್ಯಕ್ತಿತ್ವ-ವಿಕಾಸವನ್ನು ಸಾಧಿಸುವುದಕ್ಕಾಗಿ ಎಂಬುದನ್ನು ಯಾವಾಗಲೂ ನೆನಪಿಡು.

(ಡಾ|| ವಿ. ಕೃ. ಗೋಕಾಕ್‌ರವರ 'ಜೀವನ ಪಾಠಗಳು' ಎಂಬ ಪುಸ್ತಕದಿಂದ ಸಂಗ್ರಹ)

**ಎಮ್. ಎಸ್. ಶೆಟ್ಟರ್**

ಹಳೇ ಬಜಾರ, 'ಸಂಗಮೇಶ್ವರ ನಿಲಯ', ಯಲಬುರ್ಗಾ - ೫೮೩೨೩೬, ಕೊಪ್ಪಳ ಜಿಲ್ಲೆ

# ವಸುಧೈವ ಕುಟುಂಬಕಂ ಮತ್ತು ಹಿಂದುತ್ವ

ಎಂ. ಎನ್. ಕೇಶವರಾವ್

**ಹ**ಲವು ಸಹಸ್ರಮಾನಗಳ ಮಹಾ ವಿಸ್ತಾರದ ಭಾರತೀಯ ಸಂಸ್ಕೃತಿಯ ಹೊಸತೊಂದು ಉಪಯೋಗವನ್ನು ನಮ್ಮ ದೇಶದ ರಾಜಕೀಯ ಪಕ್ಷವೊಂದು ಈಚೆಗೆ ಕಂಡುಕೊಂಡಿದೆ. ಆ ಅಪಾರ, ಕಲಬೆರೆತ ರಾಶಿಯಿಂದ ಕೆಲವು ಅಸದೃಶ ತುಂಡು ತುಣುಕುಗಳನ್ನು ಆರಿಸಿಕೊಂಡು, ಒಂದು ಜಿಂಕೆ ಚರ್ಮದ ಪವಿತ್ರ ಚೀಲದಲ್ಲಿ ತುಂಬಿ, ಹಿಂದೂತ್ವ ಎನ್ನುವ ಶುಭನಾಮವೊಂದನ್ನಿಟ್ಟು ಬೇಕಾದ್ದನ್ನು ಬೇಕಾದಾಗ ಹೊರದೆಗೆವ, ಬೇಡದ್ದನ್ನು ಮರೆಮಾಚುವ, ಯಕ್ಷಿಣಿ ಚೀಲವನ್ನಾಗಿ ಬಳಸುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ಚೀಲದಲ್ಲಡಗಿರುವ ವಸ್ತು, ವಿಚಾರಗಳ ಸಮಗ್ರ ಗುಣದೋಷಗಳು ಇವರಿಗೆ ಮುಖ್ಯವಲ್ಲ. ಈ ಚೀಲವಂತರ ಪ್ರಸ್ತುತ ಪ್ರಣಾಳಿಕೆಗೆ ಅನುಕೂಲವಾಗಿರುವ ವಿಷಯಗಳನ್ನು ಮಾತ್ರ ಹೊರದೆಗೆದು, ಅವುಗಳ ಹೊರ ಮುಖಗಳನ್ನು ಮಾತ್ರ ವಿಜೃಂಭಿಸುವುದಷ್ಟೇ ಇವರ ತಂತ್ರ. ಭಾರತೀಯ ಸಂಸ್ಕೃತಿಯಂತಹ ಅಸಂಖ್ಯಾತ ವಿಚಾರಗಳ ಭಂಡಾರಕ್ಕೆ ಈ ಚೀಲದ ಸಂಕುಚನವೇಕೆ ಬೇಕು ? ಒಂದು ಸತ್ಯನಿಷ್ಠ ಕೆಲಸಕ್ಕಾದರೆ ಚೀಲದ ಮುಚ್ಚುಮರೆಗಳೇಕೆ ? ದೀರ್ಘ ಪರಿಚಿತ ವಸ್ತುವೊಂದಕ್ಕೆ ಹೊಸ ಹೆಸರಿಟ್ಟು ಪ್ರದರ್ಶಿಸಿದಾಗ ಇದು ಒಂದು ಜಾಹಿರಾತು ಇರಬೇಕು ಎನ್ನಿಸುವುದು ಸಹಜ. ಈ ಯಕ್ಷಿಣಿಯಿಂದ ಇದುವರೆಗೂ ಹೊರಗೆಳೆದ ವಿಷಯಗಳು ಅತೀತ ಅತಿಶಯಗಳೇ: ವೇದ ಸ್ಮೃತಿಗಳ ವೈಭವೀಕರಣ, ಜ್ಯೋತಿಷ್ಯದಂತಹ ಅಸತ್ಯಗಳನ್ನು ವಿಜ್ಞಾನವೆನ್ನುವ ಹಠ, ಜಪ, ತಪ, ವ್ರತ, ಯಜ್ಞ, ಯಾತ್ರೆ, ಸ್ಥಳ, ಪೂಜೆ ಮತ್ತಿತರ ಕರ್ಮಕಾಂಡಗಳ ಉನ್ಮಾದಕತೆಯ ಲಾಭ ಪಡೆಯುವ ಅವಕಾಶವಾದ, ತನ್ನ ದೇಶವೇ ಮತ್ತು ತನ್ನ ಪುರಾತನ ಸಂಸ್ಕೃತಿಯೇ ಸರ್ವೋತ್ಕೃಷ್ಟವೆನ್ನುವುದಕ್ಕೆ ಚರಿತ್ರೆ ಮತ್ತು ವಿಜ್ಞಾನಗಳನ್ನೇ ತಿರುಚಿಡುವಂತಹ ದುರಭಿಮಾನ, ಇತ್ಯಾದಿ ಚಟುವಟಿಕೆಗಳು ಗತಿಶೀಲ ಭಾರತೀಯರೆಲ್ಲರಿಗೂ ಸವಾಲನ್ನು ಒಡ್ಡಿವೆ.

ಇಂತಹ ಸಂದಿಗ್ಧ ಸಂದರ್ಭದಲ್ಲಿ, ಹೀಗೆ ಉಪಯೋಗವಾಗುತ್ತಿರುವ ಎಲ್ಲಾ ವಸ್ತು ವಿಚಾರಗಳನ್ನು ಎಂದಿಗಿಂತ ಹೆಚ್ಚು ಸೂಕ್ಷ್ಮವಾಗಿ ಪರೀಕ್ಷಿಸುವುದು ಅಗತ್ಯವಾಗುತ್ತದೆ. ಈ ಸವಾಲನ್ನು ಒಡ್ಡಿದವರೂ ಇದನ್ನು ಒಪ್ಪಿಕೊಳ್ಳಬೇಕು. ಸತ್ಯ ಪರೀಕ್ಷೆ ಯಾರಿಗೆ ಬೇಡ ? ಸತ್ಯವೇನಿದ್ದರೂ ಜಯಿಸಿಯೇ ಜಯಿಸುತ್ತದೆ. ಹಾಗೆಯೇ ಪುರಾತನ ಸಂಸ್ಕೃತಿಗಳ ಅನೇಕ ಅವಶೇಷಗಳ, ಕಳೇಬರಗಳ ದಹನವಾಗಿ ಶುದ್ಧೀಕರಣವಾದರಂತೂ ಸರ್ವರಿಗೂ ಸಂತೋಷವೇ. ಜೊತೆಗೆ ಧರ್ಮಪರೀಕ್ಷೆ, ಶುದ್ಧೀಕರಣಗಳು ಯುಗೇ ಯುಗೇ ಆಗುವುದಕ್ಕೆ ಕಾಯದೆಯೆ, ಪದೇಪದೇ ಮಾಡುವುದಕ್ಕೆ ಪ್ರೇರಣೆ ಕೊಡುತ್ತಿರುವ ಹಿಂದೂತ್ವವಾದಿಗಳಿಗೆ, ಜಾಗೃತಗೊಂಡ ವಿಚಾರವಾದಿಗಳು ಆಭಾರ ಮನ್ನಿಸಿ ಕಾರ್ಯವನ್ನು ಆರಂಭಿಸಬೇಕು.

ಸುಮಾರು ಮೂರುಸಾವಿರ ವರ್ಷಗಳಿಗೂ ಹಿಂದೆ, ಭಾರತದಲ್ಲಿ ಒಂದು ಧರ್ಮಾತ್ಮಕ, ನ್ಯಾಯಬದ್ಧ, ಸರ್ವರಿಗೂ ಸುಖಮಯ, ಬಂಧನರಹಿತ, ವಿಶ್ವ ಪ್ರೇಮಿ ಸಮಾಜವೊಂದಿತ್ತೆಂದು ಘೋಷಿಸಿ, ಅದನ್ನು ಪುಷ್ಟೀಕರಿಸುವುದು ಹಿಂದೂತ್ವವಾದಿಗಳ ಒಂದು ಮುಖ್ಯ ಕಾರ್ಯಕಲಾಪ. ಅಷ್ಟು ಕಾಲ ಹಿಂದೆ ಸರಿದು, ಆಗಿದ್ದಿತು ಎಂದುಕೊಂಡಂತಹ ಸಮಾಜದ ಪುನರ್ನಿರ್ಮಾಣ ಮಾಡಿ, ವಿಶ್ವದ ಸರ್ವೋತ್ಕೃಷ್ಟ ರಾಷ್ಟ್ರವೆನ್ನಿಸಿಕೊಳ್ಳುವ ಉತ್ಕಟ ಆಕಾಂಕ್ಷೆ ಇವರಿಗಿದೆ. ಇದಕ್ಕಾಗಿ ಹೆಕ್ಕಿ ತೆಗೆದಿಟ್ಟುಕೊಂಡಿರುವ ಧ್ಯೇಯ ಮಂತ್ರ (ಸ್ಲೋಗನ್)ಗಳಲ್ಲಿ 'ವಸುಧೈವ ಕುಟುಂಬಕಂ' ಎನ್ನುವುದು ಸಾಕಷ್ಟು ಮುಖ್ಯವಾದುದು. ನಮ್ಮ ಅಪರಿಮಿತ ಶ್ರುತಿಗಳಲ್ಲಿ ಈ ಉದಾತ್ತ ನೀತಿಯ ಸಮರ್ಥನೆ ಸಾಕಷ್ಟು ಸಿಕ್ಕಿಲ್ಲ. ಸಿಕ್ಕಬೇಕಾಗಿಯೂ ಇಲ್ಲವೇನೋ ! ಇದನ್ನೇ ಎಲ್ಲದಕ್ಕು ಬಳಸಿಕೊಂಡರೆ ತಪ್ಪೇನು ? ಹೀಗಾಗಿ ಈ ಮಂತ್ರ, ಭಾಷಣಗಳಲ್ಲಿ, ಲೇಖನಗಳಲ್ಲಿ, ಫಲಕವಾಗಿ, ಭವನಗಳ ಮುಂದೆ, ಅಂತರ್ರಾಷ್ಟ್ರೀಯ ಸೆಮಿನಾರ್‌ಗಳಲ್ಲಿ ವಿಜೃಂಭಿಸುತ್ತದೆ. ಕೇಳಿದವರ, ಕಂಡವರ ಮನಸ್ಸನ್ನು ಸೂರೆಗೊಳ್ಳುತ್ತದೆ. ಈ ಮಂತ್ರದ ತಾತ್ಪರ್ಯವಾದ ವಿಶ್ವಮಾನವ ಪ್ರೇಮ ಮತ್ತು ಸರ್ವಧರ್ಮ ಸಮದರ್ಶಿತ್ವಗಳು ಪುರಾತನ ಭಾರತೀಯ ಸಂಸ್ಕೃತಿಯ ಮುಖ್ಯ ನೀತಿಗಳಾಗಿದ್ದವು ಎನ್ನುವ ಇವರ ಮಾತು ಸಾಬೀತಾದರೆ, ಎಲ್ಲರಿಗೂ ಇದು ಬಹಳ ಸಂತೋಷದ ವಿಷಯ. ಆದ್ದರಿಂದ ಈ ನೀತಿ ಮಂತ್ರದ ಸತ್ಯಪರೀಕ್ಷೆ ಒಂದು ಉತ್ತಮ ಅವಕಾಶ.

ಹೀಗಿದ್ದರೂ ಒಂದು ಪ್ರಶ್ನೆಯೇನೋ ಉಳಿದೇ ಹೋಗುತ್ತದೆ. ಈ ಭಾರತೀಯ ಸಂಸ್ಕೃತಿಗೆ 'ಭಾರತೀಯತ್ವ' ಎನ್ನುವುದನ್ನು ಬಿಟ್ಟು ''ಹಿಂದೂತ್ವ'' ಎನ್ನುವ ಸ್ವಾರ್ಥಮಗ್ನ ನಾಮಕರಣ, ಇಂಗ್ಲಿಷಿನಲ್ಲಿ ಚಿರಪರಿಚಿತವಾದ ''ಕ್ಯಾಚ್ ೨೨'' (catch 22) ತರಹೆಯ ಕುತರ್ಕವನ್ನು ನೆನಪಿಗೆ ತರುತ್ತದೆ; ಹಾಗೆಯೇ, ವೇಮನನ 'ಅನ್ನಮೇಮಿ, ಸುನ್ನಮೇಮಿ' ಕಟಕಿಯನ್ನು ಸಹ.

**ಸುಭಾಷಿತದ ವಿಚಾರ**

'ವಸುಧೈವ ಕುಟುಬಕಂ' ಎನ್ನುವ ಸುಭಾಷಿತದ ಶ್ಲೋಕ ಹೀಗಿದೆ :

*''ಅಯಂ ನಿಜಃ ಪರೋ ವೇತಿ ಗಣನಾ ಲಘುಚೇತಸಾಂ*
*ಉದಾರಚರಿತಾನಾಂ ತು ವಸುಧೈವ ಕುಟುಂಬಕಂ.''*

ಇದರ ಸರಳ ಅರ್ಥ ಹೀಗಿದೆ:

'ಇವನು ನಮ್ಮವನು, ಅವನು ಬೇರೆಯವನು ಎಂದು ಲೆಕ್ಕ ಹಾಕುವವರು ಹುಲು ಮನಸ್ಸಿನವರು. ಉದಾರಗುಣವುಳ್ಳವರು ಪ್ರಪಂಚದವರೆಲ್ಲರನ್ನು ತಮ್ಮದೇ ಕುಟುಂಬದವರನ್ನಾಗಿ ಕಾಣುತ್ತಾರೆ.'

ಈ ಆದರ್ಶಪ್ರಾಯ ಸುಭಾಷಿತವನ್ನು ಧ್ಯೇಯ ಮಾತ್ರವಾಗಿಟ್ಟುಕೊಂಡಿದ್ದರೆ, ಇದರ ಉಗ್ರ ಪರೀಕ್ಷೆಯ ಅಗತ್ಯವಿರಲಿಲ್ಲ. ಆದರೆ ಇದನ್ನು ಹಿಂದೂ ಮತಧರ್ಮದ ಲಕ್ಷಣವೆಂದಾಗಲಿ, ನೀತಿಯೆಂದಾಗಲಿ ಹೇಳುವುದಕ್ಕೆ ಪುರಾವೆಯಾಗಿ ಉಪಯೋಗಿಸಬಾರದು. ಈ ಶ್ಲೋಕದ ಮೂಲವಾಗಲಿ, ಸಂದರ್ಭ, ಸನ್ನಿವೇಶ, ಪ್ರಸಂಗಗಳೇ ಆಗಲಿ, ಈ ಘನಕಾರ್ಯಕ್ಕೆ ಅನುಗುಣವಾಗದಿರುವುದಷ್ಟೇ ಅಲ್ಲ, ಪ್ರತಿಕೂಲವಾಗಿಯೂ ಇವೆ.

ಈ ಶ್ಲೋಕ, ಪುರಾಣ ಅಥವಾ ವೇದಗಳದ್ದಲ್ಲ; ಉಪನಿಷತ್, ಭಗವದ್ಗೀತೆ ಅಥವಾ ಬ್ರಹ್ಮ ಸೂತ್ರಗಳಂತಹ ಪ್ರಸ್ಥಾನತ್ರಯದ್ದಲ್ಲ. ಕಡೆಗೆ ಭಾಗವತ, ರಾಮಾಯಣ, ಮಹಾಭಾರತಗಳಂತಹ ಮಹಾಕಾವ್ಯಗಳಿಂದ ಆರಿಸಿದ್ದಲ್ಲ. ಯಾಜ್ಞವಲ್ಕ್ಯ, ಪರಾಶರ, ಮನು ಮತ್ತಿತರರ ಸ್ಮೃತಿಗಳಲ್ಲಿ ಇದರ ಉಲ್ಲೇಖವಿಲ್ಲ. ತ್ರಿಮತಾಚಾರ್ಯರ ಭಾಷ್ಯಗಳಲ್ಲಿ ಇದರ ವ್ಯಾಖ್ಯಾನವಿಲ್ಲ. ಇದನ್ನು ಹೇಳಿದವರು ಬ್ರಹ್ಮ, ವಿಷ್ಣು, ಮಹೇಶ್ವರರಂತಹ ಭಗವಂತರಲ್ಲ. ಋಷಿ, ಮುನಿ, ಧರ್ಮಗುರುಗಳೂ ಅಲ್ಲ. ವಾಲ್ಮೀಕಿ ವ್ಯಾಸರಂತಹ ಮಹಾಕವಿಗಳಲ್ಲ. ಕಡೆಗೆ ಇದು ಶ್ರುತಿ ಸ್ಮೃತಿಗಳ ಕಾಲದ್ದೂ ಅಲ್ಲ. ಹಾಗಾದರೆ ಇದು ಹೇಗೆ ಹಿಂದೂ ಧರ್ಮದ ಗುಣಸೂಚಕವಾಗುತ್ತದೆ ?

ಈ ಶ್ಲೋಕ 'ಹಿತೋಪದೇಶಂ' ಎನ್ನುವ ಸಂಸ್ಕೃತ ಗದ್ಯಕೃತಿಯಲ್ಲಿದೆ. ಇದರಲ್ಲಿ ಪಂಚತಂತ್ರದಂತಹ ಕತೆಗಳನ್ನು ಸಾರವತ್ತಾಗಿ ಬರೆದು ಪೋಣಿಸಿಟ್ಟಿರುವ ಕವಿ, ನಾರಾಯಣ. ಇವನ ಕಾಲ ಸುಮಾರು ಕ್ರಿ.ಶ. ೧೦೦೦ರಿಂದ ೧೨೦೦ರ ಮಧ್ಯದಲ್ಲಿ. ಅಂದರೆ ಹಿಂದೂ ಮತನೀತಿಗೆ ಬುನಾದಿಯಾಗುವ ಕಾಲಕ್ಕೆ ಮಿತಿಮೀರಿದ್ದು. ಈ ಕತೆಗಳಲ್ಲಿಯೂ ಈ ಶ್ಲೋಕವನ್ನು ಹೇಳಿದವರು ಋಷಿ, ಮುನಿ, ರಾಜ, ಗುರು, ಕಡೆಗೆ ವಿಪ್ರನೂ ಅಲ್ಲ. ಇದನ್ನು ಕವಿ ನಾರಾಯಣ ಹೇಳಿಸಿರುವುದು ಒಂದು ನರಿಯ ಬಾಯಲ್ಲಿ. ಪ್ರಾಚೀನ ಕಥಾಲೋಕದಲ್ಲಿ ನರಿ ಯಾವಾಗಲೂ ಒಂದು ಕುತಂತ್ರಿಯ ಪಾತ್ರವನ್ನೇ ನಿರ್ವಹಿಸುತ್ತಿದ್ದ ಪ್ರಾಣಿ. ಈ ಜಂಬುಕವೂ ಆ ಪಾತ್ರಕ್ಕೆ ಅಪವಾದವಾಗಿಲ್ಲ. ಈ ನರಿಗೆ ಕವಿಯಿಟ್ಟ ಹೆಸರು ಕ್ಷುದ್ರಬುದ್ಧಿ. ಅನ್ವರ್ಥವಾಗಿದೆ ಈ ಹೆಸರು. ಈ ಕತೆಯಲ್ಲಿಯೂ, ಸಾಧು ಚಾರಿತ್ರ್ಯದ ಪ್ರತೀಕವಾದ ಜಿಂಕೆಯೊಂದನ್ನು ಮೋಸಗೊಳಿಸುವುದಕ್ಕಾಗಿಯೇ ಸ್ನೇಹವನ್ನು ನಟಿಸುತ್ತ, ಕ್ಷುದ್ರಬುದ್ಧಿ ಹೇಳಿದ ಶ್ಲೋಕ ಇದು. ಸಂಕ್ಷಿಪ್ತವಾಗಿ ಹೀಗಿದೆ ಈ ಕತೆ:

ಒಂದು ಜಿಂಕೆ, ಒಂದು ಕಾಗೆ ಪರಮಮಿತ್ರರು. ಪುಷ್ಟವಾಗಿ ಬೆಳೆದ ಆ ಜಿಂಕೆಯನ್ನು ನೋಡಿದ ಒಂದು ನರಿ, ಹೇಗಾದರೂ ಈ ಜಿಂಕೆಯನ್ನು ಸಾವಿಗೀಡುಮಾಡಿ ಅದರ ಮಾಂಸವನ್ನು ತಿನ್ನುವ ಆಸೆಯಿಂದ ಆ ಜಿಂಕೆಯ ಸ್ನೇಹ ಕೋರಿ ಮಾತನಾಡಿತು. ಕಾಗೆ ಜಿಂಕೆಯನ್ನು ಎಚ್ಚರಿಸುತ್ತ, ಮಾರ್ಜಾಲವೊಂದು ಸಂನ್ಯಾಸಿಯಂತೆ ಮಾತನಾಡಿ ಹಕ್ಕಿಯ ಮರಿಗಳನ್ನೆಲ್ಲ ತಿಂದುಹಾಕಿದ ಕತೆಯನ್ನು ಹೇಳಿತು. ಆಗ ಕ್ಷುದ್ರಬುದ್ಧಿ 'ವಸುಧೈವ ಕುಟುಂಬಕಂ' ಶ್ಲೋಕವನ್ನು ಹೇಳಿ ಜಿಂಕೆಯನ್ನು ಮರುಳುಗೊಳಿಸಿತು. ಆಮೇಲೆ ರೈತನೊಬ್ಬ ಹರಡಿದ್ದ ಬಲೆಯಲ್ಲಿ ಜಿಂಕೆ ಸಿಕ್ಕಿಹಾಕಿಕೊಳ್ಳುವ ಹಾಗೆ ನರಿ ಸಂಚುಮಾಡಿತು. ಆಗ ಜಿಂಕೆ ನರಿಯ ಸಹಾಯ

ಕೇಳಿದಾಗ ನರಿ ಹೇಳಿದ ಮಾತೂ ಗಮನಾರ್ಹವಾಗಿದೆ. "ಇಂದು ಪವಿತ್ರ ಭಾನುವಾರ. ಈ ಬಲೆಯ ಚಕ್ಕಳಕ್ಕೆ ನಾನು ಬಾಯಿ ಹಾಕುವುದು ಧರ್ಮವಲ್ಲ. ನಾಳೆ ಬೆಳಗಿಗೆ ಕತ್ತರಿಸಿಹಾಕಿಬಿಡುತ್ತೇನೆ." ಹೀಗೆ ಹೇಳಿ ಕಾಯುತ್ತ ಕುಳಿತಿತು ಆ ನರಿ. ಕಡೆಗೆ ಕಾಗೆಯ ಸಹಾಯದಿಂದ ಜಿಂಕೆ ಹೇಗೋ ಉಳಿಯಿತು. ಓಡುವ ಜಿಂಕೆಯತ್ತ ರೈತ ಬೀಸಿದ ದೊಣ್ಣೆ ನರಿಗೆ ತಗುಲಿ, ಅದು ಸತ್ತುಹೋಯಿತು.

ಕತೆ ಯಾವುದಾದರೇನು ? ಯಾರದಾದರೇನು ? ನೀತಿ ಕಲಿಯುವುದು ಮುಖ್ಯ. ಈ ಕತೆಯಿಂದ ನಾವು ಕಲಿಯುವ ನೀತಿ ಹೀಗಿರಬೇಕು: 'ವಸುಧೈವ ಕುಟುಂಬಕಂ' ಎಂದು ಹೇಳಿಕೊಂಡು ಸ್ನೇಹ ಬಯಸಿ ಬರುವ ಕಪಟಿಗಳನ್ನು ದೂರವಿಟ್ಟು ಪ್ರಾಣ ಉಳಿಸಿಕೊಳ್ಳಬೇಕು.

**ಮತಧರ್ಮಗಳು ಮತ್ತು ವಿಶ್ವಮಾನವಧರ್ಮ**

'ವಸುಧೈವ ಕುಟುಂಬಕಂ' ಒಂದು ಉತ್ತಮ ವಿಶ್ವಮಾನವಧರ್ಮದ ಮಾತು. ಇಲ್ಲಿ ಪ್ರಶ್ನಿಸುತ್ತಿರುವುದು ಅದನ್ನು ಉಪಯೋಗಿಸುವ ಸಂದರ್ಭವನ್ನಷ್ಟೆ. ಮೊದಲನೆಯದಾಗಿ, ಇಂತಹ ಮಾತು ಹೀಗೆ ವಿಶಾಲವಾಗಿ, ಹಿಂದೂ ಮತಗ್ರಂಥಗಳಲ್ಲಿ ಎಲ್ಲಿಯೂ ಹೇಳಿದಹಾಗಿಲ್ಲ. ಕೆಲವೆಡೆಗಳಲ್ಲಿ ಅಲ್ಪ ಸ್ವಲ್ಪ ವಿಶಾಲ ಮನೋಭಾವವೇನಿದ್ದರೂ ಅದು ಒಂದು ರಾಜ್ಯ, ಒಂದು ಜಾತಿ, ಒಂದು ವಂಶ, ಒಂದು ಕುಲ ಅಥವಾ ಒಂದು ವರ್ಗಕ್ಕಷ್ಟೆ ಸೀಮಿತವಾದದ್ದು: 'ನಾವೆಲ್ಲರೂ ಸೇರಿ ಶತ್ರುಗಳನ್ನು ಎದುರಿಸಿ ನಿರ್ನಾಮ ಮಾಡೋಣ' ಎನ್ನುವ ನೀತಿಗೆ ಕೂಡಿಕೊಂಡು ಬಂದದ್ದು.

ಇಂತಹ ಸಂಕುಚಿತ ಮನೋಭಾವ ಹಿಂದೂ ಮತದ್ದಷ್ಟೇ ಅಲ್ಲ. ಇದು ಎಲ್ಲಾ ಮತಧರ್ಮಗಳಲ್ಲಿಯೂ ಬೇರೂರಿರುವ ಮಹಾದೋಷ. ಮಾನವ ಪ್ರೇಮಕ್ಕೆ ಹೊರತಾದ ಸ್ವಾರ್ಥ ಪ್ರವೃತ್ತಿ ಎಲ್ಲ ಮತಧರ್ಮಗಳ ಮುಖ್ಯ ಲಕ್ಷಣ. ಎಲ್ಲ ಅನುಯಾಯಿಗಳನ್ನು ಹಿಡಿತದಲ್ಲಿಟ್ಟುಕೊಂಡಿದ್ದು, ಅವರ ಸಂಖ್ಯೆಯನ್ನು ಹೆಚ್ಚಿಸುವ ಸ್ವಾರ್ಥಪರ ಮಹದಾಶೆ ಎಲ್ಲಾ ಮತನಾಯಕರುಗಳಲ್ಲೂ ಅತಿಯಾಗಿದ್ದುದರಿಂದ ಅನ್ಯಮತೀಯರಿಗೂ ಶುಭವನ್ನು ಕೋರುವ ಮಾತೂ ಅವರಿಗೆ ಸಾಧ್ಯವಿರಲಿಲ್ಲ.

**ಮಾನವತಾವಾದದ ಅಭಾವ**

ವಿಶ್ವಬಂಧುತ್ವದ ನಿರ್ಮಾಣಕ್ಕೆ ಅತ್ಯಗತ್ಯವಾದ ಪ್ರಜಾಪ್ರಭುತ್ವ ಮತ್ತು ಧರ್ಮನಿರಪೇಕ್ಷತಾವಾದಗಳಿಗೂ ಸಹ ತಳಹದಿಯಾದ ಮಾನವತಾವಾದ ಯಾವ ಪ್ರಾಚೀನ ಮತಪೋಷಿತ ಸಂಸ್ಕೃತಿಯಲ್ಲೂ ಬೇರೂರಲಿಲ್ಲ. ಮತೀಯ ಸಂಸ್ಕೃತಿಗಳು ಮಾನವತಾವಾದಕ್ಕೆ ಪ್ರತಿಕೂಲವಾಗಿದ್ದವೆನ್ನುವುದಕ್ಕೆ ಸಾಕ್ಷ್ಯಗಳಾಗಿ ವಿಶ್ವದ ಇತಿಹಾಸದಲ್ಲಿ ಜ್ವಲಂತ ನಿದರ್ಶನಗಳಿವೆ. ಇವುಗಳಲ್ಲಿ ಮುಖ್ಯವಾಗಿ ಮೇಲೆದ್ದು ಕಾಣುವುವು ಈ ಹಲವು :

೧. ಮತೀಯ ಕಾರಣಗಳಿಗಾಗಿಯೇ ನಡೆದ ಯುದ್ಧಗಳು ಮತ್ತು ನರಹತ್ಯೆಗಳು;
೨. ದಾಸ್ಯಪದ್ಧತಿ, ಗುಲಾಮಗಿರಿಗಳಿಗೆ ಮತಗಳ ಒಪ್ಪಿಗೆ ಮತ್ತು ವ್ಯಕ್ತಿಸ್ವಾತಂತ್ರ್ಯದ ನಿರಾಕರಣೆ;
೩. ಮತಗಳೊಳಗಣ ಕಲಹಗಳು, ಜಾತಿಭೇದ ಮತ್ತು ದುರ್ಬಲರ ಶೋಷಣೆ.

ಸಾವಿರಾರು ಸಂಘರ್ಷಗಳು ಮತ್ತು ನೂರಾರು ಯುದ್ಧಗಳು ಮತಗಳನ್ನು ಹರಡುವುದಕ್ಕಾಗಿಯೇ ನಡೆದಿವೆ. ಬೇರೆ ಕಾರಣಗಳಿಗಾಗಿ ಯುದ್ಧ ಪ್ರಾರಂಭವಾದಾಗಲೂ, ಮತ ಧರ್ಮನೀತಿಗಳು ಯುದ್ಧೋತ್ಸಾಹವನ್ನು ಕಡಿಮೆ ಮಾಡಲು ಪ್ರಯತ್ನಿಸಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಮತವೇ ಯುದ್ಧಗಳನ್ನು ಹುಟ್ಟುಹಾಕಿದ, ಯುದ್ಧ ಬೇಡವೆಂದವರಿಗೂ ಅದು ಒಂದು ಕರ್ತವ್ಯವೆಂದು ಧರ್ಮಾದೇಶ ನೀಡಿ ಬೋಧಿಸಿದ, ಎಂತಹ ಪಾಪಿಗೂ ರಣರಂಗದಲ್ಲಿ ಸತ್ತರೆ ವೀರಸ್ವರ್ಗ ಖಚಿತವೆಂದು ದೇವರು ಮತ್ತು ಪ್ರವಾದಿಗಳಿಂದ ಹೇಳಿಸಿದ, ದಾಖಲೆಗಳು ಎಲ್ಲ ಮತಗಳ ಇತಿಹಾಸಗಳಲ್ಲಿಯೂ ಹೇರಳವಾಗಿವೆ.

ಬಹಳಷ್ಟು ಪ್ರಾಚೀನ ಮತಗಳ ಉಗಮವಾದದ್ದು ಬುಡಕಟ್ಟು ಜನತಂಡಗಳ ಮಧ್ಯೆ ನಡೆದ ಕಲಹಗಳ ಹಿನ್ನೆಲೆಯಲ್ಲಿ. ತಮ್ಮ ಮತ್ತು ತಮ್ಮ ಇಷ್ಟಗಳ ರಕ್ಷಕ ದೇವನ ಮತ್ತು ತಮ್ಮ ಶತ್ರುಗಳ ಖಳನಾಯಕ ಸೈತಾನನ ನಡುವೆಯ ಸಂಘರ್ಷಗಳ ಪುರಾಣ ಕಥನಗಳು ಈ ಮತಗಳ ಕಲ್ಪನೆಗೆ ತಳಹದಿಯಾದವು. ಈ ರೀತಿಯಲ್ಲೇ ವೈದಿಕ ಮತವು ಬೆಳೆದುಬಂದದ್ದು ದೇವದಾನವ ಯುದ್ಧ ಒಂದು ಮಹಾ ಧರ್ಮ ಕಾರ್ಯ ಎಂದು ವಿಧವಿಧವಾಗಿ ರಂಜಕವಾಗಿ ಘೋಷಿಸುವುದರ ಮೂಲಕ. ಈ ಮತದ ಬಹಳಷ್ಟು ದೇವತೆಗಳು ಮತ್ತು ದೇವರುಗಳು ಕಲ್ಪಿತರಾದದ್ದು ಕರುಣಾರಸದಿಂದಲ್ಲ; ವಿರಸ ಜನಿತವಾದ ವೀರರಸದಿಂದಲೇ. ಅನಿಷ್ಟರ (ಇವರನ್ನು ತಾನೆ ಎಲ್ಲರೂ ದುಷ್ಟರೆನ್ನುವುದು !) ನಿಗ್ರಹಕ್ಕಾಗಿಯೇ ದೇವರುಗಳು ವಿಚಿತ್ರ, ಕುಟಿಲ (ರಂಜಕ !) ರೂಪಗಳನ್ನು ತಳೆದು ಸಫಲತೆ ಪಡೆಯಬಲ್ಲರೆಂದೆ ಭಕ್ತಿ, ಪೂಜೆಗಳಿಗೆ ಪ್ರಶಸ್ತರಾದವರು. ಈ ದೇವರುಗಳು ತಮ್ಮ ಆರಾಧಕರ ಸ್ತೋತ್ರ ಪೂಜೆಗಳನ್ನು ಅಳೆದು ವರಗಳನ್ನು ಕೊಟ್ಟವರೆ ಹೊರತು ಸತ್ಯ, ಅಸತ್ಯ, ನ್ಯಾಯ, ಅನ್ಯಾಯ, ಕರುಣೆ, ಕಡೆಗೆ ಪರಿಣಾಮಗಳನ್ನು, ವಿವೇಚಿಸಿಯೇ ಅನುಗ್ರಹ ಮಾಡುವವರಲ್ಲ. ಭಾಗವತ, ಮಹಾಭಾರತಗಳಂತು, ವಿಶ್ವಪ್ರೇಮದ ಮಾತಿರಲಿ, ಬಂಧು ನಾಶ ಮತ್ತು ನಿರಪರಾಧಿ ಜನಕೋಟಿಗಳ ವಿನಾಶವೂ ಧರ್ಮ ವಿರುದ್ಧಗಳಲ್ಲವೆಂದು ನೀತಿ ಸಾರುತ್ತವೆ.

ಎಲ್ಲಾ ಮತಗಳಲ್ಲಿಯೂ ಸಂಸ್ಕೃತಿಗಳ ಬೆಳವಣಿಗೆಯ ನಂತರವೂ, ಮತೀಯ ಜನಗಳ ಮೇಲೆ ಹೆಚ್ಚು ಪ್ರಭಾವ ಬೀರಿ ನೀತಿಗಳನ್ನು ನಿರ್ದೇಶಿಸುವುವು ಈ ಹಳೆಯ ಮತಕಥನಗಳೇ ಹೊರತು, ಆ ಮತ ಬೆಳೆಸಿಕೊಂಡ ತತ್ವರಾಶಿಗಳಲ್ಲ. ಇದು ಬಹು ಗಮನಾರ್ಹವಾದ ವಿಷಯ.

ಮಗಧ ರಾಜ್ಯದ ಬಿಂಬಿಸಾರ ಅಂಗದೇಶದ ಮೇಲೆ ಯುದ್ಧ ವಿಜಯಿಯಾದ ನಂತರವೇ ಬುದ್ಧನಿಂದ ಧರ್ಮದೀಕ್ಷೆ ಪಡೆದದ್ದು. ಅವನ ಮಗ ಅಜಾತಶತ್ರು, ವಯಸ್ಸಾದರೂ ಸಾಯದೇ ಹೋದ ಈ ತಂದೆಯನ್ನು ಕೊಂದ ಮೇಲೆಯೇ ಬುದ್ಧನಿಗೆ ಬೆಂಬಲ ಕೊಟ್ಟದ್ದು. ಮೊಮ್ಮಗ ಅಶೋಕ ಕಳಿಂಗದಲ್ಲಿ ಮಹಾ ನರಹತ್ಯೆಯನ್ನು ನಡೆಸಿದ ಮೇಲೆಯೇ ಬೌದ್ಧ ಧರ್ಮ ಪ್ರಸಾರ ಪ್ರಾರಂಭಿಸಿದ್ದು. ಹೀಗೆಯೇ ಹಲವು ಜೈನ ವೀರರುಗಳೂ ಪ್ರಾಯಶ್ಚಿತ್ತ, ಮನಸ್ಸಾಕ್ಷಿಗಳಿಂದ ಪ್ರೇರಿತರಾದವರೇ ಹೊರತು ಮತ ನೀತಿಯ ಪ್ರಭಾವಗಳಿಂದ ಅಲ್ಲ.

ಇನ್ನೊಂದು ಮಧ್ಯಯುಗದ ಮಹಾಯುದ್ಧ, ಕ್ರುಸೇಡ್ಸ್ ನಡೆದದ್ದು ಸುಮಾರು ಎರಡು ಶತಮಾನಗಳ ಕಾಲ, ಕ್ರಿ.ಶ. ೧೦೯೫ರಿಂದ ೧೨೯೦ರವರೆಗೆ, ಆರು ದೀರ್ಘ ಹಂತಗಳಲ್ಲಿ. ಕ್ರೈಸ್ತರ ಯಾತ್ರಾಸ್ಥಳವಾಗಿದ್ದ ಜೆರುಸಲೆಂ ಮುಸ್ಲಿಮರ ಆಡಳಿತದಲ್ಲಿರಬಾರದೆಂದು ಪೋಪ್ ಯೂರೋಪಿನ ಕ್ರೈಸ್ತ ರಾಜರುಗಳಿಗೆ ಧರ್ಮಾದೇಶ ನೀಡಿದಾಗ ಪ್ರಾರಂಭವಾಯಿತು ಈ ದೀರ್ಘ ಯುದ್ಧ. ಯಾವ ನೀತಿ ಕೆಟ್ಟರಲಿ, ಯಾವ ಪಾಪ ಮಾಡಿರಲಿ, ಈ ಧರ್ಮಯುದ್ಧದಲ್ಲಿ ಭಾಗವಹಿಸಿದ ಕ್ರೈಸ್ತರಿಗೆಲ್ಲ ಸ್ವರ್ಗ ಕೊಡಿಸುವ ಭರವಸೆಯನ್ನು ಪೋಪರು ಆಗಾಗ್ಗೆ ಘೋಷಿಸುತ್ತಿದ್ದುದರಿಂದಲೇ ಈ ಯುದ್ಧ ಇಷ್ಟು ದೀರ್ಘವಾದದ್ದು. ಯೂರೋಪಿನ ಸೇನೆಗಳು ದಾರಿಯಲ್ಲಿ ಸಿಕ್ಕುತ್ತಿದ್ದ ಯೆಹೂದಿ ಜನ, ಮುಸ್ಲಿಂ ಸಮೂಹಗಳನ್ನು ಸಂಹರಿಸಿದ್ದಲ್ಲದೆ, ಪೋಪರ ಆದೇಶಕ್ಕೆ ಬೆಂಬಲ ಕೊಡದಿದ್ದ ಕ್ರೈಸ್ತರನ್ನು ಸಾಮೂಹಿಕವಾಗಿ ಹತ್ಯೆ ಮಾಡಿದರು. ಕ್ರೌರ್ಯದಿಂದ ಲೂಟಿ ಮಾಡಿದರು. ಭಾರತದ ಅಶ್ವಮೇಧ ಯಾಗಗಳ ಯಾತ್ರೆಗಳಲ್ಲಿ



ನಡೆಯುತ್ತಿದ್ದಂತೆಯೆ. ಮುಸ್ಲಿಮರ ಶೌರ್ಯ ಕ್ರೌರ್ಯಗಳು ಇವರವುಗಳಿಗಿಂತ ಕಡಿಮೆಯಿರಲಿಲ್ಲ. ಅವರಿಗೂ ಇದು ಒಂದು ಧರ್ಮಯುದ್ಧ, ಜೆಹಾದ್. ಅವರ ಹತವೀರರುಗಳಿಗೂ ಕ್ರೈಸ್ತ ಸ್ವರ್ಗಕ್ಕಿಂತ ಹೆಚ್ಚು ಸುಂದರ, ರಮಣೀಯ ಸುಖಗಳ ಆಶ್ವಾಸನೆಯನ್ನು ಅವರ ಮತವೂ ಒದಗಿಸಿತ್ತು; ಈ ಸ್ವರ್ಗಸುಖಗಳು ವೈದಿಕ ಮತದಲ್ಲಿರುವವಕ್ಕಿಂತ ಕಿಂಚಿದೂನವಾದವುಗಳಷ್ಟೆ. ಕಡೆಗೆ ಕ್ರೈಸ್ತ ರಾಜರ್ಷಿಗಳು ಜೆರುಸಲೆಂ ಅನ್ನು ಆಕ್ರಮಿಸಿ ಕೊಂಡಾಗ, ಹೆಂಗಸರು ಮಕ್ಕಳೆನ್ನದೆ ಎಪ್ಪತ್ತು ಸಾವಿರದಷ್ಟು ಜನಗಳನ್ನು ಕತ್ತರಿಸಿಹಾಕಿ ಲೂಟಿ ಮಾಡಿದರು. ಹೀಗೆ ಕ್ರೈಸ್ತ ಧರ್ಮ ಉಳಿಸಿದ ವೀರರುಗಳೆಲ್ಲ ಪೋಪರ ಕೃಪಾ ಪಾತ್ರರಾದರು. ಇಷ್ಟಾದರೂ ಜೆರುಸಲೆಂ ಇವರ ಕೈಲಿ ಹೆಚ್ಚು ಕಾಲ ಉಳಿಯಲಿಲ್ಲ, ಬೇರೊಂದು ಮತಧರ್ಮಕ್ಕೆ ಅಂತಿಮ ಜಯವಾಗಿಹೋಯಿತು. ಇವೆಲ್ಲದರ ಪರಿಣಾಮ ವಾಗಿ ಪೋಪರ ಧರ್ಮವೂ ಒಡೆದುಹೋಗುವುದಕ್ಕೆ ಅನುವಾಗಿ ಸೀಳಿಕೊಂಡಿತು.

ಸಮಾಜ ಸಂಸ್ಕೃತಿಗಳ ಮೇಲೆ ಮತಗಳ ಅಧಿಕ ಸ್ವಾಮ್ಯ ನಡೆಯುತ್ತಿದ್ದ ಪ್ರಾಚೀನ ಮತ್ತು ಮಧ್ಯಯುಗಗಳಲ್ಲಿನ ಬಹಳಷ್ಟು ಯುದ್ಧಗಳಲ್ಲಿ ನರಹತ್ಯೆ, ಲೂಟಿ, ವಿನಾಶಗಳ ಜೊತೆಗೆ ಸೋತವರನ್ನು ದಾಸದಾಸಿಯರನ್ನಾಗಿ ಮಾಡಿಕೊಳ್ಳುವ ಪದ್ಧತಿಯು ಮತಮಾನ್ಯವಾಗಿತ್ತು. ವೇದ, ಪುರಾಣ, ಕಾವ್ಯ, ಇತಿಹಾಸಗಳ ಎಲ್ಲ ಧಾರ್ಮಿಕ ಶ್ರೀಮಂತ ವಿವಾಹಗಳಲ್ಲಿಯೂ ಕುದುರೆ, ಗೋವುಗಳ ಜೊತೆಗೆ ದಾಸ ದಾಸಿಯರನ್ನು ಬಳುವಳಿ ಕೊಡುವ ಧರ್ಮಾಚರಣೆಯ ಪ್ರಶಂಸೆಗಳಿವೆ. ಈಜಿಪ್ಟಿನ ಪಿರಮಿಡ್ಡುಗಳಿಂದ ಪ್ರಾರಂಭಿಸಿ ರೋಮನ್, ಇಸ್ಲಾಂ, ಯೂರೋಪಿಯನ್ ವಸಾಹತು ಶಾಹಿ ರಾಜ್ಯಗಳು, ಕಡೆಗೆ ಅಮೆರಿಕಾ ರಾಷ್ಟ್ರಗಳೂ ಸಹ, ಗುಲಾಮಗಿರಿಯನ್ನು ತಮ್ಮ ಸಾಮ್ರಾಜ್ಯಗಳ ಅಭ್ಯುದಯ ಕ್ಕಾಗಿ ಉಪಯೋಗಿಸಿಕೊಂಡರು. ಯಾವ ಮತಧರ್ಮ ಗಳೂ ಎಂದೂ ಇದನ್ನು ಧರ್ಮ ವಿರುದ್ಧವೆನ್ನಲಿಲ್ಲ. ಸಿಂಹವನ್ನು ಬೇಟೆಗೆ ಹುರಿದುಂಬಿಸಿ, ಕಾಯುತ್ತಿದ್ದು, ಕಡೆಗೆ ತಿಂದುಳಿದದ್ದನ್ನು ಕಬಳಿಸುವ ಇತರ ಪ್ರಾಣಿಗಳಂತೆ ಮಠಾಧೀಶರು ತಮ್ಮ ಮಹಾವೀರರ ಅತ್ಯಾಚಾರಗಳಿಂದ ಉಳಿದ ಜನಸಮೂಹಗಳಿಗೆ ತಮ್ಮ ಮತದೀಕ್ಷೆಗಳನ್ನು ಕೊಟ್ಟು ಕೃತಾರ್ಥರಾದರು. ಇಸ್ಲಾಂ ಮತ್ತು ಕ್ರೈಸ್ತ ಮತನಾಯಕರು ಯಾವ ಶೀಘ್ರಗತಿಯಲ್ಲಿ, ಎಷ್ಟು ಭೂಖಂಡಗಳಲ್ಲಿ, ಶೇಕಡಾ ಎಷ್ಟು ಹೆಚ್ಚಾಗಿ ತಮ್ಮ ಮತಗಳ ಜನಸಂಖ್ಯೆಯನ್ನು ಬೆಳೆಸಿಕೊಂಡರು ಎನ್ನುವ ಸರಳಗಣಿತ ಕಣ್ಣು ತೆರೆಯಿಸುತ್ತದೆ.

ಶ್ರೇಷ್ಠ ಮತ ಸಂಸ್ಕೃತಿಯ ನೀತಿ ಸಂಪನ್ನ ವಿದೇಶಿಯರು ತಾವು ಆಕ್ರಮಿಸಿಕೊಂಡಿದ್ದ ಖಂಡಗಳ ಮೂಲನಿವಾಸಿಗಳ ಮೇಲೆ ನಡೆಸಿದ ನರಹತ್ಯೆ, ಅತ್ಯಾಚಾರ, ಲೂಟಿ, ಹೇರಿದ ಗುಲಾಮಗಿರಿ, ಸಂಸ್ಕೃತಿ ನಾಶ, ಮತಪರಿವರ್ತನೆ ಇತ್ಯಾದಿ ಸರ್ವಮತ ಮಾನ್ಯ ದೌರ್ಜನ್ಯಗಳು. ವಿಶ್ವ ಬಂಧುತ್ವ ಯಾವ ಮತಕ್ಕೂ ನಿಲುಕದ ಮಾತಾಗಿತ್ತು ಎನ್ನುವುದನ್ನು ಸ್ಪಷ್ಟಪಡಿಸುತ್ತವೆ. ಈಜಿಪ್ಟಿನವರು ಇಸ್ರೇಲಿ ಅರಬ್ ಮೂಲದೇಶದಲ್ಲಿ, ಆರ್ಯರು ಭಾರತದ ಮೂಲ ನಿವಾಸಿಗಳ ಮೇಲೆ, ರೋಮನ್ನರು ಈಜಿಪ್ಟಿನವರ ಮತ್ತು ಯೆಹೂದಿಯರ ಮೇಲೆ, ಸ್ಪ್ಯಾನಿಶ್ ಜನ ಮತ್ತು ಪೋರ್ಚುಗೀಸರು ಮೆಕ್ಸಿಕೋದ ಅಜ್‌ಟೆಕ್ ಮತ್ತು ಮಾಯಾಗಳ ಮೇಲೆ, ಪೆರುವಿನಲ್ಲಿ ಇಂಕಾಗಳ ಮೇಲೆ, ಬ್ರಿಟಿಷರು ಮತ್ತು ಫ್ರೆಂಚರು ರೆಡ್ ಇಂಡಿಯನ್ ಸಂಕುಲಗಳ ಮೇಲೆ, ಬೆಲ್ಜಿಯನ್ನರು ಕಾಂಗೋದಲ್ಲಿ, ಬ್ರಿಟಿಷರು ಆಸ್ಟ್ರಲೆಷಿಯಾದಲ್ಲಿ ಮಾವೋರಿಗಳ ಮೇಲೆ, ಡಚ್ಚರು ದಕ್ಷಿಣ ಆಫ್ರಿಕಾದಲ್ಲಿ ಕಪ್ಪು ಜನಗಳ ಮೇಲೆ, ಮುಸ್ಲಿಮರು ಉತ್ತರ ಮತ್ತು ಮಧ್ಯ ಆಫ್ರಿಕಾಗಳಲ್ಲಿ ಇಂಡೋನೇಷಿಯ ಮಲಯೇಷಿಯಗಳಲ್ಲಿ ನಡೆಸಿದ ದೀರ್ಘ, ಕ್ರೂರ ದಾಳಿಗಳು ವಿಶ್ವ ಬಂಧುತ್ವಕ್ಕೆ ಮತಗಳ ನಿರಾಕರಣೆಯ ಸಾಕ್ಷ್ಯಗಳಾಗಿವೆ.

## ಖಾಲಿ ಕ್ಯಾಸೆಟ್ಟುಗಳು

ಕ್ಯಾಸೆಟ್ಟುಗಳಿವೆ ನಮ್ಮ-ನಿಮ್ಮ ಸುತ್ತ
ಎಚ್ಚರಿಕೆ, ಎಚ್ಚರಿಕೆ -
ಖಾಲಿಯಾಗಿರುವುದೇ ಬಂಡವಾಳ ಇವಕ್ಕೆ
ಉಸುರಿದಿರೊ
ನಿಮ್ಮ ಅನುಪಮ ರಾಗಗಳ,
ಜೀವ ಹಿಂಡಿ ಹೊರಬಂದ ವಿಚಾರಗಳ
ಹಿಡಿಯುತ್ತವೆ
ಕೆಸರಲ್ಲಿ ಹರಳೊಗೆದಂತೆ



ತೂರುತ್ತವೆ ಬಿಸಿಲಿಗೆ ಕಾಯಿ ಸಿಡಿದಂತೆ
ನಿಮ್ಮದೆಲ್ಲ ಸುಳ್ಳಾಗಿಸಿ
ಮಂದೆಗಳ ಮಳ್ಳಾಗಿಸಿ
ಬೇರು ಸೇರುತ್ತವೆ
ಬೀಗುತ್ತವೆ ತುಂಬಿಕೊಂಡಂತೆ
ತುಂಬಿದ್ದು ತುಳುಕದೆ,
ಬಂದದ್ದಕ್ಕುಳುಕದೆ
ಬಾಳಿದರೆ, ತಾಳಿದರೆ
ಬಿಕ್ಕುತ್ತವೆ ಬಂಡವಾಳಕ್ಕೆ
ಹಾಡಿದ್ದೆ ಹಾಡಿ
ಮೈ-ಬಾಯಿ ಹರಿದುಕೊಂಡು
ಖಾಲಿಯಾಗುತ್ತವೆ ಗೊತ್ತೆ -
ತುಂಬಿಕೊಳ್ಳದಂತೆ
ಎಂದೆಂದಿಗೂ ಮತ್ತೆ.

ಬಿ. ಆರ್. ಪೊಲೀಸ್ ಪಾಟೀಲ
ಅಧ್ಯಕ್ಷರು, ವಾತ್ಸಲ್ಯ ವಿಚಾರ ವೇದಿಕೆ
ಬನಹಟ್ಟಿ - ೫೮೭ ೩೧೧

ನಿರ್ದಿಷ್ಟ ಆದಿಪ್ರವರ್ತಕರಿಲ್ಲದೆಯೇ ಉದಯವಾದ ವೆನ್ನುವ ಹಿಂದೂ ಮತ್ತು ಯೆಹೂದಿ ಮತಗಳು ತಮ್ಮ ಮತ ಪ್ರಸಾರಕ್ಕಾಗಿ ಬೇರೆ ಮತಗಳೊಡನೆ ಸೆಣಸಲಿಲ್ಲ, ನಿಜ. ಆದರೆ ಈ ಸಮಾಧಾನ ಇವರ ವಿಶ್ವ ಬಂಧುತ್ವದ ಕುರುಹಲ್ಲ. ತಾವು ಕಂಡಿರುವೆವು ಎನ್ನುವ ಜ್ಞಾನ, ಪವಿತ್ರತೆ, ಆತ್ಮೋದ್ಧಾರದ ಮತ್ತು ದೈವಾನುಗ್ರಹದ ಸೂತ್ರಗಳನ್ನು ತಮ್ಮ ಸ್ವಾರ್ಥಕ್ಕಾಗಿಯೇ ಇಟ್ಟುಕೊಂಡು, ಬೇರೆ ಯಾರೂ ಹುಟ್ಟಿನಿಂದಲೂ ಇವಕ್ಕೆ ಅನರ್ಹರೆಂಬ ತಮ್ಮ ಶ್ರೇಷ್ಠತೆಯ ಗರ್ವದಲ್ಲಿ ನರಳುತ್ತಿರುವುದು ಎಂದಿಗೂ ನೀಗದ ಮಹಾದೋಷ. ವೈದಿಕ ಮತದವರಂತೂ ತಮ್ಮನ್ನು ನಂಬಿದ್ದ ತಮ್ಮಲ್ಲಿನ ದುರ್ಬಲರನ್ನ ಜಾತಿ ಪದ್ಧತಿ ಎನ್ನುವ ತಮ್ಮದೇ ಕೇಡಿಗ ಆವಿಷ್ಕಾರದಿಂದ ಶೋಷಣೆ ಮಾಡಿ ತಮ್ಮ ಸಂಸ್ಕೃತಿಯನ್ನೇ ರೋಗಗ್ರಸ್ತವನ್ನಾಗಿ ಮಾಡಿರುವವರು. ಇವರ ವಿಶ್ವ ಬಂಧುತ್ವವನ್ನು ನಂಬಬಹುದೆ ? ಪುರುಷ ಶ್ರೇಷ್ಠತೆಯ ಭ್ರಮೆಯಲ್ಲಿ ತಮ್ಮದೇ ಕುಟುಂಬಗಳ ಸ್ತ್ರೀಯರನ್ನು ಇವರು ಶೋಷಿಸುತ್ತಿರುವ ವಿಧಿವಿಧಾನಗಳನ್ನು ಗಮನಿಸಿದಾಗ, ಇವರ ವಸುಧೆಯ ಕುಟುಂಬಕರಾಗುವು ದಕ್ಕೂ ಭಯವಾಗುತ್ತದೆ. ಇಂತಹುದೇ ಅತಿ ಶ್ರೇಷ್ಠತೆಯ ಹುಚ್ಚಿನಲ್ಲಿ ಯೆಹೂದಿ ಮತ್ತು ಪಾರ್ಸಿ ಮತೀಯರ ಸಂಖ್ಯೆಯೇ ಕ್ಷೀಣಿಸುತ್ತಿದೆ. ಯೆಹೂದಿಯರಂತು ಮತೀಯ ಕಾರಣಗಳಿಗಾಗಿ, ಸಹಸ್ರಾರು ವರ್ಷಗಳಿಂದ, ಬೇರೆಯವ ರನ್ನು ದೂರವಿಟ್ಟು, ದೂರವಿದ್ದು, ಅಲೆಬಡುಕರಾಗಿದ್ದು, ಎಲ್ಲೆಡೆಯೂ ದಬ್ಬಾಳಿಕೆ ಅನುಭವಿಸಿ, ಕ್ಯಾಥೊಲಿಕ್ ಜರ್ಮನರಿಂದ ಲಕ್ಷಗಟ್ಟಲೆಯಾಗಿ ಹಿಂಸಾಹತರಾಗಿ, ಅತ್ಯಾಚಾರ ಅನುಭವಿಸಿ ಅಳಿದುಳಿದ ಜನ. ಆದರೂ, ಈಗಲೂ ಇವರು ತಮಗೆ ಅತಿ ನಿಕಟ ಸಹವರ್ತಿಗಳಾಗಿದ್ದು, ಸೆಮಿಟಿಕ್ ಅನುವಂಶಿಕರಾಗಿದ್ದ, ಅನನ್ಯವಾಗಿ ಸಂಸ್ಕೃತಿ ಭಾಷೆಗಳ ಸಮವರ್ತಿಗಳಾಗಿದ್ದ ಅರಬ್ಬರೊಡನೆ, ಮತೀಯ ಕಾರಣಗಳಿಗಾಗಿಯೇ ಸ್ನೇಹದಿಂದಿರಲಾಗದೆ, ಸತ್ತು ಸಾಯಿಸುತ್ತಿದ್ದಾರೆ. ಇವರಂತೆಯೇ ಮುಸ್ಲಿಮರೂ ವಿಶ್ವದ ಬಹಳ ಎಡೆಗಳಲ್ಲಿ ತಮ್ಮ ಮತೀಯ ಮೂಲಭೂತವಾದದ ಜಾಲದಿಂದ ಹೊರಬರಲಾಗದೆ, ಡೆಮಾಕ್ರಸಿ ಮತ್ತು ಧರ್ಮನಿರಪೇಕ್ಷತೆಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಲಾಗದೆ, ಯಾರೊಡನೆಯೂ ಸ್ನೇಹ ಸೌಹಾರ್ದಗಳನ್ನು ಬೆಳೆಸಿಕೊಳ್ಳಲಾಗದೆ, ಬಹಳವಾಗಿ ಕಷ್ಟನಷ್ಟಗಳಿಗೆ ಗುರಿಯಾಗುತ್ತಿದ್ದಾರೆ.

ಮಾನವರ ದೀರ್ಘ ಇತಿಹಾಸದ ಅಧ್ಯಯನದಿಂದ ಎಲ್ಲರೂ ಕಲಿಯಬೇಕಾದ ಪಾಠ ಇದು : ಎಲ್ಲರೂ ತಮ್ಮ ತಮ್ಮ ಸಂಕುಚಿತ ಮತೀಯ ಚೌಕಟ್ಟುಗಳ ಬಂಧನದಿಂದ ಹೊರಬಂದು, ಮಾನವತಾವಾದದ ಉತ್ಕೃಷ್ಟ ಮೌಲ್ಯವನ್ನು ಅರಿತುಕೊಂಡಾಗಲೇ ವಿಶ್ವಬಂಧುತ್ವ ವಿಶ್ವಶಾಂತಿಗಳು ಸಾಧ್ಯವಾಗುವುವು.

ಎಂ. ಎನ್. ಕೇಶವರಾವ್
ಸುರಚಿ, ನಂ. ೩೮೮, ವೆಂಕಟೇಶ ರಸ್ತೆ, ಪದ್ಮನಾಭನಗರ
ಬೆಂಗಳೂರು-೫೬೦ ೦೭೦

# ಶೋಷಿತ ವರ್ಗದವರಿಗೆ ಸಾಮಾಜಿಕ ನ್ಯಾಯ




- ಸ್ವಾಮಿ ಅಗ್ನಿವೇಶ್

ಸ್ವಾಮಿ ಅಗ್ನಿವೇಶ್ ಸಾಮಾಜಿಕ ಆಂದೋಲನಗಳ ಮುಂಚೂಣಿಯಲ್ಲಿರುವವರು. ಕೆಲವರ ದುಂದು ಬದುಕಿಗೆ ಹಾಗೂ ಹಲವರ ಬಡತನಕ್ಕೆ, ಜೀತಕ್ಕೆ, ಮಕ್ಕಳ ದುಡಿತಕ್ಕೆ, ಮಕ್ಕಳ ವೇಶ್ಯಾವೃತ್ತಿಗೆ ಮತ್ತು ಪರಿಸರ ನಾಶಕ್ಕೆ ಕಾರಣವಾಗುವ ಪಾಶ್ಚಾತ್ಯ ಮಾದರಿಯ ಅಭಿವೃದ್ಧಿಯನ್ನು ಸ್ವಾಮಿ ಅಗ್ನಿವೇಶ್ ವಿರೋಧಿಸುತ್ತಲೇ ಬಂದಿದ್ದಾರೆ.

ಕಲ್ಕತ್ತಾದ ವಕೀಲ ವೃತ್ತಿ ತೊರೆದು ಹರಿಯಾಣದಲ್ಲಿ ಸಾಮಾಜಿಕ ಕೆಲಸಕ್ಕೆ ಧುಮುಕಿದವರು ಸ್ವಾಮಿ ಅಗ್ನಿವೇಶ್. ಅಲ್ಲಿ ಆರ್ಯ ಸಭಾ ಎಂಬ ರಾಜಕೀಯ ಪಕ್ಷ ಸ್ಥಾಪಿಸಿ, ಚುನಾವಣೆಯಲ್ಲಿ ವಿಧಾನ ಸಭೆಗೆ ಆಯ್ಕೆಯಾಗಿ, ಆ ರಾಜ್ಯದ ಶಿಕ್ಷಣ ಮಂತ್ರಿಯಾದರು. ಅದನ್ನೂ ತೊರೆದು, ಶೋಷಿತ ವರ್ಗದವರಿಗೆ ಸಾಮಾಜಿಕ ನ್ಯಾಯ ದೊರಕಿಸಲಿಕ್ಕಾಗಿ ಸಾಮಾಜಿಕ ಆಂದೋಲನಗಳಲ್ಲಿ ತನ್ನನ್ನು ತೊಡಗಿಸಿಕೊಂಡರು. ಈಗ ಜೀತದಾಳುಗಳ ಬಿಡುಗಡೆ ವೇದಿಕೆಯ ಅಧ್ಯಕ್ಷರಾಗಿ ಕೆಲಸ ಮಾಡುತ್ತಿದ್ದಾರೆ. ಜೀತದ ಪ್ರಸ್ತುತ ರೂಪಗಳ ಬಗ್ಗೆ ವಿಶ್ವಸಂಸ್ಥೆಯ ಟ್ರಸ್ಟ್ ಫಂಡಿನ ಮುಖ್ಯಸ್ಥರಾಗಿದ್ದಾರೆ.

ಕಾರ್ಪೊರೇಷನ್ ಬ್ಯಾಂಕ್ ಆಫೀಸರ್ಸ್ ಆರ್ಗನೈಸೇಷನ್ (ರಿ.) ನ ಆಹ್ವಾನದ ಮೇರೆಗೆ ಆಗಸ್ಟ್ ೧೩, ೨೦೦೧ರಂದು ಸ್ವಾಮಿ ಅಗ್ನಿವೇಶರು ಬೆಂಗಳೂರಿಗೆ ಬಂದಿದ್ದರು. ಅದೇ ದಿನ, ಆ ಸಂಘಟನೆಯ ತ್ರೈವಾರ್ಷಿಕ ಮಹಾಸಮ್ಮೇಳನದ ಬೃಹತ್ ಸಭೆಯನ್ನುದ್ದೇಶಿಸಿ ಜಯನಗರದ ಚಾಮರಾಜ ಕಲ್ಯಾಣ ಮಂಟಪದಲ್ಲಿ ಮಾತನಾಡಿದರು. ಅವರ ಸ್ಫೂರ್ತಿದಾಯಕ ಭಾಷಣದ ಮುಖ್ಯಾಂಶಗಳ ಸಂಗ್ರಹರೂಪ ಇದು :

ನಮ್ಮ ದೇಶದ ಜನರ ಬಗ್ಗೆ ಯೋಚಿಸುವಾಗ, ೩೫೦ ಮಿಲಿಯನ್ ಅಸಂಘಟಿತ ವರ್ಗದ ಕಾರ್ಮಿಕರು ನಮ್ಮ ಗಮನಕ್ಕೇ ಬರುವುದಿಲ್ಲ. ೧೨೦ ಮಿಲಿಯನ್ ಬಾಲ ಕಾರ್ಮಿಕರದ್ದೂ ಇದೇ ಗತಿ. ಈ ಸಂದರ್ಭದಲ್ಲಿ, ಸಂಘಟಿತ ಕಾರ್ಮಿಕ ವರ್ಗದಲ್ಲಿರುವ ನಿಮ್ಮಂತಹ ಎಲ್ಲರೂ ತಮಗೆ ತಾವೇ ಈ ಪ್ರಶ್ನೆ ಕೇಳಿಕೊಳ್ಳಬೇಕಾಗಿದೆ: ''ನಮ್ಮ ದೇಶದಲ್ಲಿ ೪೭೦ ಮಿಲಿಯಗಳಷ್ಟಿರುವ ಈ ಅಸಹಾಯಕ ಜನಸಮುದಾಯಕ್ಕಾಗಿ ನಾವೇನು ಮಾಡಿದ್ದೇವೆ ?''

ಈ ಮಾತನ್ನು ನಾನು ಯಾಕೆ ಹೇಳುತ್ತಿದ್ದೇನೆ ಅಂದರೆ, ನಾನೂ ಒಂದು ಸಂಪ್ರದಾಯಸ್ಥ ಕುಟುಂಬದಲ್ಲಿ ಹುಟ್ಟಿ ಬೆಳೆದವನು. ನಾನೂ ಹಲವಾರು ದೇವರನ್ನು ಪೂಜಿಸುತ್ತಿದ್ದವನು. ಆದರೆ ಈ ದೇವರುಗಳ ಬಗ್ಗೆ ನಾನು ಯಾವುದೇ ಪ್ರಶ್ನೆ ಕೇಳುವಂತಿರಲಿಲ್ಲ. ನನಗೆ ಇದೆಲ್ಲದರ ಬಗ್ಗೆ ಗೊಂದಲವಾಗುತ್ತಿತ್ತು. ಕೊನೆಗೆ ನಾನು ಸ್ವಾಮಿ ಬಾಲ ಸರಸ್ವತಿ ಅವರ ಬಳಿಗೆ ಹೋದೆ. ಅವರು ನನಗೆ ಪ್ರಶ್ನೆ ಕೇಳುವ ಸ್ವಾತಂತ್ರ್ಯ ನೀಡಿದರು. ಅದರಿಂದಾಗಿ ನನ್ನ ಜಗತ್ತೇ ಬದಲಾಯಿತು. ನನ್ನ ಆಚರಣೆಗಳ ಬಗ್ಗೆ ಪ್ರಶ್ನೆಗಳನ್ನು ಕೇಳುತ್ತ ಕೇಳುತ್ತ ನಾನು ಒಂದು ಸತ್ಯವನ್ನು ಕಂಡುಕೊಂಡೆ - ಇಂಥ ಅಸಹಾಯಕರಲ್ಲಿಯೇ ದೇವರು ಇರುತ್ತಾನೆಂಬ ಸತ್ಯವನ್ನು. ಅವರ ಸೇವೆಯೇ ದೇವರ ಸೇವೆ ಎಂದು ನನಗೆ ಅರ್ಥವಾಯಿತು. ಅಂದಿನಿಂದ ಈ ಜೀವಂತ ದೇವರ ಸೇವೆಗೆ ನನ್ನನ್ನು ನಾನು ಸಮರ್ಪಿಸಿಕೊಂಡೆ - ದುರ್ಬಲರ, ಅಸಹಾಯಕರ, ಅನ್ಯಾಯದ ವಿರುದ್ಧ ಪ್ರತಿಭಟಿಸುವ ಶಕ್ತಿಯಿಲ್ಲದವರ ಸೇವೆಗೆ.

ನನಗೆ ಸತ್ಯದ ದಾರಿಯಲ್ಲಿ ನಡೆಯಬೇಕಾಗಿದೆ. ಆದರೆ ನನ್ನ ಸುತ್ತಲೂ ಸುಳ್ಳಿನ ಪ್ರಪಂಚವಿದೆ. ಹಾಗಂತ ನಾನು ಕಣ್ಣು ಮುಚ್ಚಿ ಸುಮ್ಮನೆ ಕೂರಬೇಕೇ ? ಸಾಧ್ಯವಿಲ್ಲ. ನಾನು ಒಂದೊಂದಾಗಿ ಸುಳ್ಳಿನ ಕಂತೆಗಳನ್ನು ಹೋಗಲಾಡಿಸಲು ನಿರ್ಧರಿಸಿದೆ.

ಅದಕ್ಕಾಗಿ ಮಹಾತ್ಮ ಗಾಂಧಿಯವರ ಅಹಿಂಸಾತ್ಮಕ ಹೋರಾಟದ ವಿಧಾನಗಳನ್ನು ಅನುಸರಿಸಲು ನಿರ್ಧರಿಸಿದೆ. ತುರ್ತುಪರಿಸ್ಥಿತಿಯಲ್ಲಿ ಶ್ರೀ ಬನ್ಸಿಲಾಲರ ಆದೇಶದಂತೆ ನನ್ನ ಬಂಧನವಾದ ಅವಧಿಯಲ್ಲಿ ನನಗೆ ಮಹಾತ್ಮ ಗಾಂಧಿಯವರ ಹೋರಾಟದ ವಿಧಾನಗಳನ್ನು ಅರ್ಥ ಮಾಡಿಕೊಳ್ಳುವ ಅವಕಾಶ ಒದಗಿತು.

ಹರಿಯಾಣದ ಶಿಕ್ಷಣ ಮಂತ್ರಿಯ ಸ್ಥಾನಕ್ಕೆ ರಾಜೀನಾಮೆ ನೀಡಿದ ಬಳಿಕ ನಾನು ಜೀತದಾಳುಗಳನ್ನು ಸಂಘಟಿಸಲು ತೊಡಗಿದೆ. ಅದಕ್ಕಾಗಿ ನಾನು ಬಳಸಿದ ವಿಧಾನ ಸರಳವಾಗಿತ್ತು. ಕಾನೂನಿನ ಪ್ರಕಾರ ಅವರ ಹಕ್ಕುಗಳೇನೆಂಬುದನ್ನು ನಾನು ಅವರಿಗೆ ತಿಳಿಸತೊಡಗಿದೆ. ಉದಾಹರಣೆಗೆ, ಕೂಲಿಯಾಳುಗಳಿಗೆ ಪಾವತಿಸಬೇಕಾದ ಕನಿಷ್ಠ ಕೂಲಿ ಎಷ್ಟೆಂಬುದನ್ನು ತಿಳಿಸಿ, ಅದರ ಪಾವತಿಗಾಗಿ ಅವರು ಆಗ್ರಹಿಸಲು ಪ್ರೇರೇಪಿಸಿದೆ. ಯಾಕೆಂದರೆ, ಅವರಿಗೆ ಅದೂ ತಿಳಿದಿರಲಿಲ್ಲ. ನೀವಾದರೋ ಅದೃಷ್ಟವಂತರು. ನಿಮ್ಮ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಉದ್ಯೋಗಿಗಳು ಪ್ರಬಲವಾಗಿ ಸಂಘಟಿತರಾಗಿದ್ದು, ನಿಮ್ಮ ಯೂನಿಯನ್‌ಗಳೂ ನಿಮ್ಮ ಹಕ್ಕುಗಳನ್ನು ನಿಮಗೆ ತಿಳಿಸಿಕೊಡಲು ಸಮರ್ಥವಾಗಿವೆ.

ಸುಸಂಘಟಿತ ಕಾರ್ಮಿಕ ವರ್ಗದವರಾದ ನೀವು ನಮ್ಮ ದೇಶದ ಇಂದಿನ ಪರಿಸ್ಥಿತಿಯಲ್ಲಿ ಬ್ಯಾಂಕ್‌ಗಳ ಪಾತ್ರ ಏನು ? ಎಂಬುದರ ಬಗ್ಗೆ ಚಿಂತನೆ ನಡೆಸಬೇಕಾಗಿದೆ. ಡಿಸ್ಟಿಲರಿಗಳನ್ನು ಮತ್ತು ಸಿಗರೇಟು ಕಾರ್ಖಾನೆಗಳನ್ನು ಸ್ಥಾಪಿಸಲು ಸಾಲ ನೀಡುತ್ತಿರುವುದು ಯಾರು ? ಎಂದು ಒಂದು ಕ್ಷಣ ಯೋಚಿಸಿ. ಇಂಥ ಘಟಕಗಳಿಗೆ ಬ್ಯಾಂಕ್‌ಗಳು ಸಾಲ ನೀಡುವ ನಿರ್ಧಾರ ಕೈಗೊಳ್ಳುವಾಗ, ನೈತಿಕ ವಿಚಾರಗಳನ್ನು ಪಕ್ಕಕ್ಕೆ ತಳ್ಳಿದರೆ, ಇವುಗಳ ಉತ್ಪನ್ನಗಳ ದುಷ್ಪರಿಣಾಮಗಳಿಗೆ ಬಲಿಯಾಗುವ ಮಿಲಿಯಗಟ್ಟಲೆ ಜನರಿರುವ ಭಾರತದಂತಹ ಬಡದೇಶದ ಭವಿಷ್ಯ ಕರಾಳವಾಗಲಿದೆ ಎಂಬುದನ್ನು ನೆನಪಿಡಿ.

ನಮ್ಮ ದೇಶದ ವಿದೇಶೀ ಸಾಲದ ಹೊರೆ ಅಗಾಧವಾಗಿದೆ. ಇಂದು ಪ್ರತಿಯೊಬ್ಬ ಭಾರತೀಯನ ತಲೆಯ ಮೇಲೆ ೧೦೦ ಡಾಲರ್ ವಿದೇಶೀ ಸಾಲ ಇದೆ. ನಮ್ಮ ದೇಶದ ವಾರ್ಷಿಕ ಆದಾಯದ ೧/೩ ರಷ್ಟು ಭಾಗವನ್ನು ಈ ಸಾಲದ ಬಡ್ಡಿ ಪಾವತಿಗಾಗಿ ವಿನಿಯೋಗಿಸಿದರೂ ಅದು ಸಾಲುತ್ತಿಲ್ಲ. ಅಂದರೆ ಪರಿಸ್ಥಿತಿ ವಿಕೋಪಕ್ಕೆ ಹೋಗಿದೆ. ಆದರೆ, ಇಂಥ ಅಗಾಧ ಮೊತ್ತದ ವಿದೇಶೀ ಸಾಲವನ್ನು ಮೂರೇ ದಿನಗಳಲ್ಲಿ ಚುಕ್ತಾ ಮಾಡಲು ಸಾಧ್ಯವಿದೆ. ಅದಕ್ಕಾಗಿ ಮಾಡಬೇಕಾದುದಿಷ್ಟೇ: ಸ್ವಿಸ್ ಬ್ಯಾಂಕ್‌ಗಳಲ್ಲಿರುವ ಭಾರತೀಯರ ಕಪ್ಪು ಹಣದ ಠೇವಣಿಗಳನ್ನೆಲ್ಲ ಮುಟ್ಟುಗೋಲು ಹಾಕಲಾಗಿದೆ ಎಂದು ಭಾರತದ ಪ್ರಧಾನ ಮಂತ್ರಿಯವರು ಘೋಷಿಸಬೇಕು. ನಿಮ್ಮಂಥ ಸಂಘಟಿತ ವರ್ಗಗಳಿಂದ ಒತ್ತಡ ಬಂದರೆ ಮಾತ್ರ ಈ ಕೆಲಸ ಆದೀತು.

ಈಗ ಭಾರತದ ಬ್ಯಾಂಕಿಂಗ್ ರಂಗ ಅತ್ಯಂತ ತೀವ್ರ ಬಿಕ್ಕಟ್ಟನ್ನು ಎದುರಿಸುತ್ತಿದೆ. ವಸೂಲಾಗದೆ ಬಾಕಿ ಉಳಿದಿರುವ ಸಾಲಗಳು ಏರುತ್ತಲೇ ಇವೆ. ಇಂಥ ಬಡ್ಡಿ ವಸೂಲಾಗದ ಬ್ಯಾಂಕ್ ಸಾಲಗಳ (ಅಂದರೆ ಎನ್ ಪಿ ಎ) ಮೊತ್ತ ೭೦,೦೦೦ ಕೋಟಿ ರೂಪಾಯಿಗಳಿಗೆ ಏರಿದೆ ! ಒಟ್ಟು ಬ್ಯಾಂಕ್ ಸಾಲದಲ್ಲಿ ರೈತರ ಸಾಲಗಳ ಪ್ರಮಾಣ ಕೇವಲ ಶೇ. ೫ ಆಗಿದ್ದರೆ, ಉಳಿದ ಶೇ. ೯೫ ಪ್ರಮಾಣದ ಸಾಲಗಳನ್ನು ಧನಿಕರಿಗೆ ನೀಡಲಾಗಿದೆ. ಇಂಥ ಸನ್ನಿವೇಶದಲ್ಲಿ ಬಡರೈತರ ಸಾಲಗಳ ವಸೂಲಿಗಾಗಿ ಕೋರ್ಟ್‌ಗಳಲ್ಲಿ ದಾವೆ ಹೂಡಲಾಗುತ್ತಿದೆ. ಆದರೆ ಕೋಟಿಗಟ್ಟಲೆ ರೂಪಾಯಿ ಸಾಲ ಬಾಕಿ ಮಾಡಿರುವ ಉದ್ಯಮಪತಿಗಳ ಸಾಲ ವಸೂಲಿಗಾಗಿ ಪರಿಣಾಮಕಾರಿ ಕ್ರಮ ಕೈಗೊಳ್ಳುತ್ತಿಲ್ಲ. ಇದನ್ನು ಬ್ಯಾಂಕಿಂಗ್ ಎನ್ನಬೇಕೋ ಅಥವಾ ಕೊಳ್ಳೆ ಎನ್ನಬೇಕೋ, ನೀವೇ ನಿರ್ಧರಿಸಿ. ನಿಮ್ಮಂಥ ಸಂಘಟಿತ ವರ್ಗದವರು ಈಗಲಾದರೂ ಇಂಥ ಪ್ರಶ್ನೆಗಳನ್ನು ಎತ್ತಲೇಬೇಕಾಗಿದೆ. ನಮ್ಮ ದೇಶದಲ್ಲಿ ಪ್ರತಿಭಟನೆಯ ಸೊಲ್ಲು ಎತ್ತಲಾರದ ಹಾಗೂ ತಮ್ಮ ಹಕ್ಕುಗಳಿಗಾಗಿ ಹೋರಾಡುವ ಕಸುವು ಕಳೆದುಕೊಂಡಿರುವ ಮಿಲಿಯಗಟ್ಟಲೆ ಜನರಿದ್ದಾರೆ. ಇಂಥ ಶೋಷಿತರಿಗೆ ಧ್ವನಿ ನೀಡಲಿಕ್ಕಾಗಿ ನೀವು ಮಾಡಬೇಕಾದುದು ಇಷ್ಟೇ :

* ಮೊದಲನೆಯದಾಗಿ, ಸರಕಾರವು ದುಡಿಯುವ ಜನರಿಗೆಲ್ಲ ರಾಷ್ಟ್ರೀಯ ಕನಿಷ್ಠ ವೇತನ ನಿಗದಿ ಪಡಿಸಬೇಕೆಂದು ಆಗ್ರಹಿಸಿ. ನಾಲ್ಕನೆಯ ವರ್ಗದ ನೌಕರ ಈಗ ಪಡೆಯುತ್ತಿರುವ ವೇತನವೇ ರಾಷ್ಟ್ರೀಯ ಕನಿಷ್ಠ ವೇತನವಾಗಲಿ.
* ಎರಡನೆಯದಾಗಿ, ಸಾಮಾಜಿಕ ನ್ಯಾಯ ಮತ್ತು ಸಮಾನತೆಯ ಅನುಷ್ಠಾನಕ್ಕಾಗಿ, ಸರಕಾರವು ಶಿಕ್ಷಣವನ್ನು ಮೂಲಭೂತ ಹಕ್ಕು ಎಂದು ಘೋಷಿಸಬೇಕೆಂದು ಆಗ್ರಹಿಸಿ.

ಈ ಎರಡೇ ಕ್ರಮಗಳು ನಮ್ಮ ದೇಶದ ಶೋಷಿತ ವರ್ಗದವರಿಗೆ ಸಾಮಾಜಿಕ ನ್ಯಾಯ ಒದಗಿಸುವ ಭೂಮಿಕೆ ನಿರ್ಮಿಸಬಲ್ಲವು. ಈ ಮಹಾನ್ ಕಾರ್ಯದ ಸಾಧನೆಗಾಗಿ ನಾವೆಲ್ಲರೂ ಜೊತೆಗೂಡಿ ಕೆಲಸ ಮಾಡೋಣ.

ಅಡ್ಡೂರು ಕೃಷ್ಣರಾವ್
ಮೇನೇಜರ್, ಕಾರ್ಪೊರೇಷನ್ ಬ್ಯಾಂಕ್, 'ಶ್ರೀ ಕೃಪ', ಜಯನಗರ, ಚಿಕ್ಕಮಗಳೂರು-೫೭೭೧೦೧

# ಕನ್ನಡ ಪತ್ರಿಕೋದ್ಯಮದ ಮೂಲ ಪುರುಷ ಹರ್ಮನ್ ಮೋಗ್ಲಿಂಗ್

*ಜುಲೈ ಒಂದು ಕನ್ನಡ ಪತ್ರಿಕೋದ್ಯಮದಲ್ಲಿ ಒಂದು ಮಹತ್ವದ ದಿನ. ೧೮೪೩ನೇ ಇಸವಿಯ ಆ ದಿನದಂದೇ ಕನ್ನಡದ ಮೊದಲ ಪತ್ರಿಕೆ 'ಮಂಗಳೂರು ಸಮಾಚಾರ' ಜನ್ಮತಳೆದು ಕನ್ನಡ ಪತ್ರಿಕೋದ್ಯಮಕ್ಕೆ ಅಡಿಪಾಯ ಹಾಕಿದ ದಿನ. ಅದರ ನೆನಪಿಗಾಗಿ ಪ್ರತಿ ವರ್ಷ ಆ ದಿನವನ್ನು ಕರ್ನಾಟಕ ರಾಜ್ಯದಾದ್ಯಂತ ಪತ್ರಿಕಾದಿನವನ್ನಾಗಿ ಆಚರಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ ಕನ್ನಡದ ಮೊದಲ ಪತ್ರಿಕೆಯನ್ನು ಹೊರತಂದು ಕನ್ನಡ ಪತ್ರಿಕೋದ್ಯಮದ ಬೆಳವಣಿಗೆಗೆ ಕಾರಣರಾದ ಹರ್ಮನ್ ಮೋಗ್ಲಿಂಗ್ ಅವರ ಜೀವನ ಮತ್ತು ಸಾಧನೆ ಕುರಿತು ತಿಳಿಯುವುದು ಸೂಕ್ತವೆನಿಸುತ್ತದೆ.*

ಭಾರತೀಯ ಪತ್ರಿಕೋದ್ಯಮಕ್ಕೆ ಕ್ರೈಸ್ತ ಮಿಶನರಿಗಳ ಕೊಡುಗೆ ಅಪಾರವಾದುದು. ಇದಕ್ಕೆ ಕನ್ನಡ ಪತ್ರಿಕೋದ್ಯಮ ಹೊರತಲ್ಲ. ಬಾಸೆಲ್ ಮಿಶನ್ ಮೂಲಕ ಧರ್ಮ ಪ್ರಚಾರಕ್ಕಾಗಿ ಭಾರತಕ್ಕೆ ಬಂದ ಮೋಗ್ಲಿಂಗ್ ತನ್ನ ಗಮನ ಹರಿಸಿದ್ದು ಮಾನವ ಜನಾಂಗದ ಸರ್ವತೋಮುಖ ಅಭಿವೃದ್ಧಿಯತ್ತ. ಸಾಹಿತ್ಯ, ಶಿಕ್ಷಣ, ಮುದ್ರಣ, ಪತ್ರಿಕೋದ್ಯಮ ಮತ್ತಿತರ ಕ್ಷೇತ್ರಗಳಿಗೆ ಅವರು ನೀಡಿದ ಕೊಡುಗೆ ಸ್ಮರಣೀಯ.

ಜರ್ಮನಿಯ ವಿಲ್‌ಹೆಲ್ಮ್ ಉಡ್‌ವಿಂಗ್ ಫ್ರೆಡರಿಕ್ ಮೋಗ್ಲಿಂಗ್ ಮತ್ತು ರಿಶೆ ದಂಪತಿಗಳ ಮಗನಾಗಿ ೧೮೧೧ ಮೇ ೨೯ರಂದು ಜನಿಸಿದ ಹರ್ಮನ್ ಫ್ರೆಡರಿಕ್ ಮೋಗ್ಲಿಂಗ್ ಎಳೆತನದಲ್ಲಿಯೇ ತಾಯಿಯನ್ನು ಕಳೆದುಕೊಂಡರು. ಬಾಲ್ಯದಲ್ಲಿ ತಾಯಿಯ ಗುಣ, ನಡತೆ, ಪ್ರಾರ್ಥನೆ ಮತ್ತು ಆಧ್ಯಾತ್ಮಿಕತೆಯಿಂದ ಪ್ರಭಾವಿತರಾಗಿದ್ದ ಮೋಗ್ಲಿಂಗ್ ಮಿಷನರಿ ಆಗಿದ್ದ ತಂದೆಯ ಆರೈಕೆಯಲ್ಲಿ ಬೆಳೆದರು.

ಮಿಶನರಿ ತರಬೇತಿ ಪಡೆದ ಬಳಿಕ ಇಂಗ್ಲಿಷ್ ಕಲಿಯಲು ಇಂಗ್ಲೆಂಡಿಗೆ ತೆರಳಿದ ಮೋಗ್ಲಿಂಗ್, ಅಲ್ಲಿ ಮೂರು ತಿಂಗಳು ಇಂಗ್ಲಿಷ್ ಶಿಕ್ಷಣ ಪಡೆದು ತನ್ನ ಮೂವರು ಸಹಾಯಕರೊಂದಿಗೆ ೧೮೩೬ರ ಡಿಸೆಂಬರ್ ೭ರಂದು ಮಂಗಳೂರಿಗೆ ಬಂದಿಳಿದರು. ಬಾಸೆಲ್ ಮಿಶನ್ ಪ್ರತಿನಿಧಿಯಾಗಿ ಆಗಮಿಸಿದ ಅವರು ಕ್ರೈಸ್ತ ಮಿಶನರಿಯಾಗಿ ತನ್ನ ವೃತ್ತಿಜೀವನ ಆರಂಭಿಸಿದರು.

ಮಂಗಳೂರಿಗೆ ಬಂದ ಮೋಗ್ಲಿಂಗ್ ಆರಂಭದಲ್ಲಿ ಕನ್ನಡ ಮತ್ತು ಸಂಸ್ಕೃತ ಭಾಷೆಗಳನ್ನು ಕಲಿಯಲು ಮತ್ತು ಭಾರತೀಯ ಜೀವನ ಶೈಲಿಗೆ ಹೊಂದಿಕೊಳ್ಳಲು ಬಹಳ ಕಷ್ಟಪಡಬೇಕಾಯಿತು. ಪಾಶ್ಚಾತ್ಯ ಆಹಾರ ಮತ್ತು ಜೀವನ ಶೈಲಿಯನ್ನು ತೊರೆದ ಅವರು ಪೂರ್ಣ ಸಸ್ಯಾಹಾರಿಯಾಗಿ ಇಲ್ಲಿನ ಜನರೊಂದಿಗೆ ಸಾಮಾನ್ಯ ವ್ಯಕ್ತಿಯಾಗಿ ಬೆರೆತರು. ೧೮೬೦ರ ತನಕ ಮಂಗಳೂರಿನಲ್ಲಿದ್ದ ಮೋಗ್ಲಿಂಗ್ ಒಬ್ಬ ಮಿಶನರಿಯಾಗಿ, ತತ್ವಜ್ಞಾನಿಯಾಗಿ, ಸಮಾಜ ಸೇವಕರಾಗಿ, ಪತ್ರಕರ್ತರಾಗಿ, ಶಿಕ್ಷಣ ತಜ್ಞರಾಗಿ ಜನಾನುರಾಗಿಯಾದರು.

ಕನ್ನಡಿಗರ ಜ್ಞಾನದಾಹವನ್ನು ಅರಿತ ಮೋಗ್ಲಿಂಗ್ ೧೮೪೩ರ ಜುಲೈ ಒಂದರಂದು ಕನ್ನಡದ ಮೊದಲ ಪತ್ರಿಕೆ 'ಮಂಗಳೂರು ಸಮಾಚಾರ'ವನ್ನು ಹೊರತಂದರು. ಕನ್ನಡದ ಮೊದಲ ಪತ್ರಿಕೆ ಯಾವುದೆಂಬುದರ ಕುರಿತು ಚರ್ಚೆ ನಡೆದಿದೆ. ಕೆಲವರ ಅಭಿಪ್ರಾಯದಂತೆ ಕನ್ನಡದ ಮೊಟ್ಟಮೊದಲ ಪತ್ರಿಕೆ 'ಕನ್ನಡ ಸಮಾಚಾರ'ವಾಗಿದ್ದು ಅದು ೧೮೧೨ರಲ್ಲಿ ಬಳ್ಳಾರಿಯಲ್ಲಿ ಆರಂಭವಾಯಿತು. ಆದರೆ ಅದಕ್ಕೆ ತಕ್ಕ ದಾಖಲೆಗಳಿಲ್ಲ. ಬದಲಾಗಿ 'ಮಂಗಳೂರು ಸಮಾಚಾರ'ವೇ ಕನ್ನಡದ ಮೊದಲ ಪತ್ರಿಕೆಯಾಗಿದ್ದು, ಅದು ಬಳ್ಳಾರಿಗೆ ಸ್ಥಳಾಂತರಗೊಂಡ ಮೇಲೆ 'ಕನ್ನಡ ಸಮಾಚಾರ'ವಾಯಿತು ಎಂಬುದಕ್ಕೆ ಸಾಕಷ್ಟು ದಾಖಲೆಗಳಿವೆ. ಅದೇ ಹೆಚ್ಚಿನ ವಿದ್ವಾಂಸರ ಅಭಿಪ್ರಾಯ ಕೂಡಾ ಆಗಿದೆ.

''ಕಟ್ಟುಕತೆ ಹಾಗೂ ಸುಳ್ಳು ವಿಷಯಗಳ ಹರಡುವಿಕೆಯನ್ನು ತಡೆಯಲು ಮತ್ತು ಬಹುಸಂಖ್ಯಾತ ಜನರಿಗೆ ಅಗತ್ಯವಾದ ಮಾಹಿತಿ ನೀಡಲು ತಕ್ಕ ಬೆಲೆಯಿಟ್ಟು

**ಸತೀಶ್‌ಕುಮಾರ್ ಅಂಡಿಂಜೆ**

ನಾವು ಈ ಪತ್ರಿಕೆಯನ್ನು ಹೊರತಂದಿದ್ದೇವೆ'' ಎಂದು 'ಮಂಗಳೂರು ಸಮಾಚಾರ'ದ ಮೊದಲ ಸಂಚಿಕೆಯಲ್ಲೇ ಸಂಪಾದಕ ಮೋಗ್ಲಿಂಗ್ ಅದರ ಉದ್ದೇಶವನ್ನು ಕುರಿತು ಬರೆದಿದ್ದರು. ಪಾಕ್ಷಿಕವಾಗಿ ಹೊರಬರುತ್ತಿದ್ದ ಈ ಪತ್ರಿಕೆ ಆರಂಭವಾದ ಒಂದು ವರ್ಷದ ಬಳಿಕ ಜರ್ಮನಿಯಿಂದ ಹೊಸ ಮುದ್ರಣ ಯಂತ್ರವನ್ನು ಖರೀದಿಸಿದ ನಂತರ ನಾಲ್ಕು ಪುಟಗಳ ಈ ಪತ್ರಿಕೆ ನಿರಂತರವಾಗಿ ಓದುಗರನ್ನು ತಲುಪುವಂತೆ ಮಾಡಲಾಯಿತು.

ಪತ್ರಿಕೆಯು ಮುಖ್ಯವಾಗಿ ಸ್ಥಳೀಯ ಸುದ್ದಿಗಳು, ಸರಕಾರಿ ನಿಯಮ, ನಿರ್ಬಂಧಗಳು, ಗಾದೆಗಳು, ಕವನಗಳು, ಕಥೆಗಳು, ಇತರ ರಾಜ್ಯಗಳಿಗೆ ಸಂಬಂಧಿಸಿದ ಮಾಹಿತಿ, ಪ್ರಖ್ಯಾತ ವ್ಯಕ್ತಿಗಳ ಅಭಿಪ್ರಾಯಗಳನ್ನು ಹೊಂದಿರುತ್ತಿತ್ತು. ಮಂಗಳೂರಿನ ಜನತೆಗೆ ಹೊಸ ಘಟನಾವಳಿಗಳ ಮೇಲೆ ಎಷ್ಟು ಕುತೂಹಲವಿದೆ ಎಂಬುದನ್ನು ಮೊದಲ ಸಂಚಿಕೆಯ ಮುಖಪುಟವೇ ಪ್ರತಿಬಿಂಬಿಸುತ್ತಿತ್ತು. ಪತ್ರಿಕೋದ್ಯಮದ ಸ್ಪಷ್ಟ ದೃಷ್ಟಿಕೋನ ಹೊಂದಿದ್ದ ಮೋಗ್ಲಿಂಗ್ ಜನರಿಂದ ಪತ್ರ ಹಾಗೂ ಟೀಕೆಗಳನ್ನು ಆಹ್ವಾನಿಸಿ ಪ್ರಕಟಿಸುತ್ತಿದ್ದರು.

ಮೋಗ್ಲಿಂಗ್ ಭಾರತಕ್ಕೆ ಬಂದದ್ದು ಒಬ್ಬ ಮಿಶನರಿ ಆಗಿ ಆದರೂ, ಅವರು ಪತ್ರಿಕೆಯನ್ನು ಕ್ರೈಸ್ತ ಧರ್ಮದ ಪ್ರಚಾರಕ್ಕಾಗಿಯಾಗಲಿ ಅಥವಾ ಇನ್ನಾವುದೇ ಧಾರ್ಮಿಕ ಉದ್ದೇಶಕ್ಕಾಗಿಯಾಗಲಿ ಬಳಸಿಕೊಂಡಿರಲಿಲ್ಲ. ಅವರ ಪತ್ರಿಕೆಯಲ್ಲಿ ಎಲ್ಲಾ ಧರ್ಮಗಳ ತತ್ವ ಮತ್ತು ಆಚರಣೆಗಳ ಕುರಿತ ಚರ್ಚೆಗೆ ವಿಪುಲ ಅವಕಾಶವಿರುತ್ತಿತ್ತು. ಹಣ ಗಳಿಕೆ ಮತ್ತು ಜನಸೇವೆಯನ್ನು ಸಮಾನವಾಗಿ ಕಂಡಿದ್ದ ಮೋಗ್ಲಿಂಗ್ ಪತ್ರಿಕೆಯ ಕಾರ್ಯಗಳಾದ ಮಾಹಿತಿ, ಶಿಕ್ಷಣ ಮತ್ತು ಮನರಂಜನೆಗಳನ್ನು ಔಚಿತ್ಯವರಿತು ನಿರ್ವಹಿಸುತ್ತಿದ್ದರು.

ಸ್ಥಳೀಯ ರಾಜರುಗಳ ನಡುವಿನ ಒಳಜಗಳಗಳು ಮುಂದುವರಿದರೆ ಮುಂದೊಂದು ದಿನ ಭಾರತ ದೇಶ



## ಸಾಕ್ಷಾತ್ಕಾರ

ಎಷ್ಟು ಸಲ ತಣ್ಣಗೆ ನುಸುಳುತ್ತ
ಕಚಗುಳಿಯಿಡುತ್ತ
''ನಾ ಬರಲೇ ನಿನ್ನಡಿಗೆ''
ಪಿಸು ನುಡಿಯಿತು ಸಾವು !

''ಬೇಡ ಮಾರಾಯಾ,
ದಮ್ಮಯ್ಯ !
ನೋಡಿಲ್ಲಿ ಪತಿ - ಮಕ್ಕಳು
ದೃಷ್ಟಿ ಆಗುವ ಸಂಸಾರ ಎನ್ನದು.''

ನೆರೆಗೂದಲು - ಬಾಗಿದ ಬೆನ್ನು,
ಸುಕ್ಕು ಚರ್ಮದೊಡಲೆ,
ಬೊಚ್ಚು ಬಾಯಲಿ ನಗುತ್ತ
ಮನಸಾರೆ ಕದ ತೆರೆವೆ ಇನ್ನೊಮ್ಮೆ !

ಕಾಲ ಪುರುಷನಿಗ್ಯಾವ ನ್ಯಾಯ ?!
''ಬ್ರೈನ್ ಟ್ಯೂಮರ್'' ಹುಳ ಬಂದು
ಮೆದುಳಲಿ ಕುಳಿತು, ಮುದದಿಂದ
ಬಿಗಿದಪ್ಪಿ ಸೆಳೆದಿದ್ದಾನೆ !!

ಹೊಂಚಿ ಕುಳಿತ ಅದೋ ಯಮರಾಯ;
ಕೇಳುವನು ಪ್ರಶ್ನೆ
''ಯಾಕೆ ಕವಿತೆ ಕೊರೆವೆ ?
ನಾನಿಲ್ಲಿ ಇರುವೆ !''

ಶೋಭಾ ಪ್ರಮೋದ್
ಮಹಾಲಕ್ಷ್ಮಿ ಏಜೆನ್ಸೀಸ್, ಮಾಣ್‌ಗಾಂವ್, ರಾಯಘಡ, ಮಹಾರಾಷ್ಟ್ರ

ಪೂರ್ಣವಾಗಿ ಈಸ್ಟ್ ಇಂಡಿಯಾ ಕಂಪೆನಿಯ ನಿಯಂತ್ರಣಕ್ಕೊಳಪಡುತ್ತದೆ ಎಂದು ಎಚ್ಚರಿಕೆ ನೀಡಿದ್ದ ಮೋಗ್ಲಿಂಗ್ ತನ್ನ ಪತ್ರಿಕೆಯಲ್ಲಿ ಸ್ಥಳೀಯ ರಾಜರುಗಳ ಒಳಜಗಳಗಳ ಪೂರ್ಣ ವಿವರ ನೀಡಿ ಜನಜಾಗೃತಿ ಹಾಗೂ ದೇಶಪ್ರೇಮ ಮೂಡಿಸುವಲ್ಲಿ ಗಣನೀಯ ಪಾತ್ರ ವಹಿಸಿದರು. ಬಳ್ಳಾರಿ ಆಗ ಮೈಸೂರು ರಾಜ್ಯದ ಕೇಂದ್ರ ಸ್ಥಳವಾಗಿತ್ತು. 'ಮಂಗಳೂರು ಸಮಾಚಾರ'ವನ್ನು ಒಂದು ವರ್ಷದ ಬಳಿಕ ಬಳ್ಳಾರಿಗೆ ಸ್ಥಳಾಂತರಿಸಲಾಯಿತು. ಅನಂತರ ಬಳ್ಳಾರಿಯಲ್ಲಿ ಪತ್ರಿಕೆಯ ನಿರ್ವಹಣೆಯ ಹೊಣೆಯನ್ನು ಲಂಡನ್ ಮಿಶನರಿ ಸೊಸೈಟಿ ವಹಿಸಿಕೊಂಡಿತು. ಆ ಸಂದರ್ಭದಲ್ಲಿ ಅಂದರೆ ೧೮೪೪ರಲ್ಲಿ ಪತ್ರಿಕೆಗೆ 'ಕನ್ನಡ ಸಮಾಚಾರ'ವೆಂದು ಮರು ನಾಮಕರಣ ಮಾಡಲಾಯಿತು. ರೀಡ್ ಎಂಬ ಮಿಶನರಿ ಪತ್ರಿಕೆಯ ಪ್ರಕಟಣೆಯ ಜವಾಬ್ದಾರಿ ವಹಿಸಿ ಕೊಂಡರು. ಮುದ್ರಣ ಸಾಮಗ್ರಿಗಳಿಗಾಗಿ ಮೋಗ್ಲಿಂಗ್ ಲೈಪ್ಜಿಗ್ ಮತ್ತು ಪ್ಯಾರಿಸ್‌ಗೆ ಭೇಟಿ ನೀಡಿದರು. ಆದರೆ 'ಕನ್ನಡ ಸಮಾಚಾರ'ವು ರೀಡ್ ಮರಣಾನಂತರ ತೀವ್ರ ತೊಂದರೆಗೆ ಸಿಲುಕಿ ಒಂದು ವರ್ಷಕ್ಕಿಂತ ಹೆಚ್ಚು ಕಾಲ ಬಾಳದಂತಾಯಿತು.

೧೮೫೭-೫೮ರ ಸಿಪಾಯಿದಂಗೆ ಭಾರತದಲ್ಲಿ ಹಲವು ಪತ್ರಿಕೆಗಳ ಹುಟ್ಟಿಗೆ ಕಾರಣವಾಯಿತೆನ್ನಬಹುದು. ಆ ಸಂದರ್ಭದಲ್ಲಿ ಮೋಗ್ಲಿಂಗ್ ಕೈಕಟ್ಟಿ ಕುಳಿತುಕೊಳ್ಳಲಿಲ್ಲ. ಅದೇ ವರ್ಷ ಕನ್ನಡದ ಇನ್ನೊಂದು ಪತ್ರಿಕೆ 'ಕನ್ನಡ ಸುವಾರ್ತಿಕ'ವನ್ನು ಆರಂಭಿಸಿದರು. ಆ ಪತ್ರಿಕೆಯ ಮೂಲಕ ರಾಷ್ಟ್ರೀಯ ಏಕತೆ ಮತ್ತು ಸ್ವಾತಂತ್ರ್ಯವನ್ನು ಪ್ರೋತ್ಸಾಹಿಸಿದರು. ಆ ಪತ್ರಿಕೆ ಮುದ್ರಣದಲ್ಲಿ ಉತ್ತಮ ಗುಣಮಟ್ಟ ಹೊಂದಿತ್ತಾದರೂ ಮೋಗ್ಲಿಂಗ್‌ಗೆ ಅದರತ್ತ ಹೆಚ್ಚು ಗಮನಹರಿಸಲು ಸಾಧ್ಯವಾಗಲಿಲ್ಲ. ಕಾರಣ ಅವರು ತಮ್ಮ ಹೆಚ್ಚಿನ ಸಮಯವನ್ನು ಕೊಡಗು ಜಿಲ್ಲೆಯ ಶೈಕ್ಷಣಿಕ ಮತ್ತು ಕಲ್ಯಾಣ ಕಾರ್ಯಗಳಿಗಾಗಿ ಮುಡುಪಾಗಿಟ್ಟಿದ್ದರು. ಓದುಗರು ಕೂಡಾ ಆ ಪತ್ರಿಕೆ ಕಡೆ ಹೆಚ್ಚು ಒಲವು ತೋರಿಸದೆ, ಅದು ೧೮೫೯ರಲ್ಲಿ ತನ್ನ ಅವಸಾನ ಕಾಣಬೇಕಾಯಿತು. ೧೮೬೨ರಲ್ಲಿ 'ಕರ್ನಾಟಕ ಪತ್ರಿಕೆ' ಎಂಬ ಹೆಸರಲ್ಲಿ ಮರಳಿ ಕಾಣಿಸಿಕೊಂಡರೂ ಹೆಚ್ಚು ಸಮಯ ಬಾಳಲಿಲ್ಲ.

ಮೋಗ್ಲಿಂಗ್ ಎಂದೂ ಮಿಶನರಿ ಚಟುವಟಿಕೆಗಳತ್ತ ತನ್ನ ಪೂರ್ಣ ಗಮನಹರಿಸಿದವರಲ್ಲ. ಮುದ್ರಣದಲ್ಲಿ ಕನ್ನಡ ಅಚ್ಚಿನ ಬಳಕೆಗೆ ಮೋಗ್ಲಿಂಗ್ ಅವರ ಕೊಡುಗೆ ಅಪಾರ. ಅವರು ಕನ್ನಡ ಕಲ್ಲಚ್ಚಿನ ಮುದ್ರಣದಲ್ಲಿನ ಮಹತ್ವದ ಬದಲಾವಣೆಗಳಿಗೆ ಕಾರಣರಾಗಿದ್ದಾರೆ. 'ಜೈಮಿನಿ ಭಾರತ', 'ಹರಿಭಕ್ತಿಸಾರ', 'ಕುಮಾರ ವ್ಯಾಸ', 'ಬಸವಪುರಾಣ', 'ಚನ್ನಬಸವಪುರಾಣ', 'ಕನ್ನಡ ಗಾದೆಗಳು' ಮುಂತಾದ ಪುಸ್ತಕಗಳನ್ನು ಕಲ್ಲಚ್ಚಿನಲ್ಲಿ ಮುದ್ರಿಸಿ ಧಾರ್ಮಿಕ ಕಾರ್ಯ ಮತ್ತು ತತ್ವಗಳು ಸಾಮಾನ್ಯ ಜನತೆಗೆ ತಲುಪುವಂತೆ ಮಾಡಿದರು. ಕೊಡಗಿನ ಜನಜೀವನ ಮತ್ತು ಸಂಸ್ಕೃತಿಯನ್ನು ಬಿಂಬಿಸುವ ಅವರ 'ಕೂರ್ಗ್ ಮೆಮೊರೀಸ್' ಮತ್ತು 'ರಾಜೇಂದ್ರನಾಮ' ಎಂಬ ಕೃತಿಗಳು ಉಲ್ಲೇಖಾರ್ಹ. ಸಾಹಿತ್ಯ ಲೋಕಕ್ಕೆ ಅವರು ನೀಡಿದ ಕೊಡುಗೆಯನ್ನು ಗುರುತಿಸಿ ಟುಬಿಂಗೆನ್ ವಿಶ್ವವಿದ್ಯಾಲಯ ೧೮೫೮ರಲ್ಲಿ ಅವರಿಗೆ ಗೌರವ ಡಾಕ್ಟರೇಟ್ ಪದವಿ ನೀಡಿ ಗೌರವಿಸಿತು. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಮಾಡಿದ ಗಣನೀಯ ಸೇವೆಗೆ ಡಾಕ್ಟರೇಟ್ ಪದವಿ ಪಡೆದವರಲ್ಲಿ ಮೋಗ್ಲಿಂಗ್ ಮೊದಲಿಗರು. ಅದು ಕೂಡಾ ವಿದೇಶಿ ವಿಶ್ವವಿದ್ಯಾಲಯದಿಂದ.

ಸಾಮಾಜಿಕ ಬದಲಾವಣೆ, ಆಧುನೀಕರಣ ಹಾಗೂ ರಾಷ್ಟ್ರದ ಉನ್ನತಿಗಾಗಿ ಮೋಗ್ಲಿಂಗ್ ಮುದ್ರಣ, ಅನುವಾದ, ಬರವಣಿಗೆ ಮತ್ತು ಬೋಧನೆ ಕಾರ್ಯಗಳನ್ನು ಕೈಗೊಂಡರು. ಶಿಕ್ಷಿತರನ್ನಾಗಿ ಮಾಡುವುದರ ಮೂಲಕ ಕನ್ನಡ ಜನತೆಯನ್ನು ಒಂದುಗೂಡಿಸಲು ಅವರು ಮಾಡಿದ ಸೇವೆ ಸ್ಮರಣೀಯವಾದದ್ದು. ತನ್ನ ಚಟುವಟಿಕೆಗಳಲ್ಲಿ ಅನೇಕ ತೊಡಕುಗಳು ಎದುರಾದರೂ ಏಕವ್ಯಕ್ತಿ ಸೈನ್ಯದಂತೆ ಹೋರಾಡಿ ಅವುಗಳನ್ನು ನಿವಾರಿಸಿಕೊಂಡು ಕರ್ನಾಟಕದಲ್ಲಿ ಮುದ್ರಣ ಕಾರ್ಯಕ್ಕೆ ಗಟ್ಟಿಯಾದ ಅಡಿಪಾಯ ಹಾಕಿದರು. ಆದ್ದರಿಂದ ಮೋಗ್ಲಿಂಗ್ ಕನ್ನಡ ಮುದ್ರಣ ಮತ್ತು ಪತ್ರಿಕೋದ್ಯಮದ ಮೂಲಪುರುಷನೆಂದು ಗುರುತಿಸಲ್ಪಡುತ್ತಾರೆ. ಅವರ ಮತ್ತು ಅವರ ಪತ್ರಿಕೆಯ ಸವಿನೆನಪಿಗಾಗಿ ಪ್ರತೀ ವರ್ಷ ಜುಲೈ ಒಂದರಂದು ಪತ್ರಿಕಾ ದಿನವನ್ನಾಗಿ ಆಚರಿಸುವುದರ ಮೂಲಕ ನಾವು ಅವರ ಸೇವೆಯ ನೆನಪಿನಲ್ಲಿ ಗೌರವ ಸಲ್ಲಿಸಿದಂತಾಗುತ್ತದೆ.

**ಸತೀಶ್‌ಕುಮಾರ್ ಅಂಡಿಂಜೆ**
ಪತ್ರಿಕೋದ್ಯಮ ಉಪನ್ಯಾಸಕರು, ಎಂ.ಜಿ.ಎಂ. ಕಾಲೇಜು,
ವಿದ್ಯಾನಗರ, ಮಣಿಪಾಲ - ೫೭೬ ೧೦೪

ಬಾಂಧವ್ಯದ ಬೆಸುಗೆಯಾಗಿ,
ಸಂಸ್ಕೃತಿಯ ಸೊಗಡಾಗಿ,
ಕಸ್ತೂರಿಯ ಕಂಪಾಗಿ,
ಸಂಪತ್ತಿನ ಸಿರಿಯಾಗಿ,
**ಮಾನವ ಕುಲಕೋಟಿಗೆ ಮಂಗಳ ಹರಸುವ,**
**ವೀಣಾಪಾಣಿಯ ವಾಣಿ - ಕನ್ನಡ ನುಡಿ ಜಾಣಿ.**

## ಕರ್ನಾಟಕದಲ್ಲಿ ಕನ್ನಡಕ್ಕೆ ಭದ್ರ ನೆಲೆಗಟ್ಟು
### ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸಲಹೆಗಳಿಗೆ ಆದ್ಯತೆ.


**ಶ್ರೀ ಎಸ್.ಎಂ. ಕೃಷ್ಣ**
ಮಾನ್ಯ ಮುಖ್ಯ ಮಂತ್ರಿಗಳು

ನಮ್ಮ ಚೆಲುವ ಕನ್ನಡ ನಾಡು ಉದಯಿಸಿ ಇಂದಿಗೆ 45 ವರ್ಷಗಳು ಸಂದಿವೆ. ಕನ್ನಡಾಂಬೆಯ ಕೀರ್ತಿ ನಾಲ್ಕೂ ದಿಸೆಗಳಲ್ಲಿ ಪ್ರಸರಿಸುತ್ತಿರುವುದು ಹೆಮ್ಮೆಯ ವಿಷಯ. ಕರ್ನಾಟಕ ರಾಜ್ಯೋತ್ಸವದ ಈ ಶುಭ ದಿನದಂದು ಕರ್ನಾಟಕದ ಕುಲಕೋಟಿಗೆ ನನ್ನ ಹಾರ್ದಿಕ ಶುಭಾಶಯಗಳು.

- ೧ರಿಂದ೧೦ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದವರಿಗೆ ವೃತ್ತಿ ಶಿಕ್ಷಣದಲ್ಲಿ ಮೀಸಲಾತಿ ಇಡೀ ದೇಶಕ್ಕೆ ಮಾದರಿಯಾದ ಭಾಷಾ ನೀತಿ.
- ಉದ್ಯೋಗದಲ್ಲಿ ಕನ್ನಡ ಮಾಧ್ಯಮದವರಿಗೆ ಮೀಸಲಾತಿ. ಕನ್ನಡ ಅಭಿಮಾನಕ್ಕೆ ಹೊಸ ಆಯಾಮ.
- ಕನ್ನಡೇತರ ಶಾಲೆಗಳಲ್ಲಿ ಮೂರನೇ ತರಗತಿಯಿಂದ ಕನ್ನಡ ಕಡ್ಡಾಯ. ಪೂರ್ಣಾವಧಿ ಕನ್ನಡ ಅಧ್ಯಾಪಕರ ನೇಮಕ.
- ಆಡಳಿತದಲ್ಲಿ ಕನ್ನಡದ ಅನುಷ್ಠಾನ ಮಾಡದೆ ಇರುವ ಅಧಿಕಾರಿಗಳ ವಿರುದ್ಧ ಶಿಸ್ತುಕ್ರಮ.
- ಜಿಲ್ಲಾಧಿಕಾರಿಗಳ ಕಚೇರಿಯಲ್ಲಿ ಪ್ರತ್ಯೇಕ **ಕನ್ನಡ ಅನುಷ್ಠಾನ ವಿಭಾಗ** ಆರಂಭಕ್ಕೆ ಐತಿಹಾಸಿಕ ಆದೇಶ.
- ಕೃಷಿ ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಮಾಧ್ಯಮ ಆರಂಭಕ್ಕೆ ತೀರ್ಮಾನ.
- ಕಂಪ್ಯೂಟರ್‌ನಲ್ಲಿ ಕನ್ನಡದ ಅಳವಡಿಕೆಗೆ ಸಂಬಂಧಿಸಿದ ಸಂಶೋಧನೆ ಮತ್ತು ಅಭಿವೃದ್ಧಿಗೆ ಪ್ರತ್ಯೇಕ ಅನುದಾನ.
- ಪದವಿ ಪೂರ್ವ ಶಿಕ್ಷಣದಲ್ಲಿ ಐಚ್ಛಿಕ ಕನ್ನಡಕ್ಕೆ ಮುಕ್ತಾನುಮತಿ.
- ಬಿ.ಇಡಿ. ಪ್ರವೇಶ ಪರೀಕ್ಷೆಯಲ್ಲಿ ಕನ್ನಡಕ್ಕೆ ಸಮಾನ ಸ್ಥಾನ.
- ವೃತ್ತಿ ಶಿಕ್ಷಣದಲ್ಲಿ ಅಗತ್ಯಕ್ಕನುಗುಣವಾಗಿ ಕನ್ನಡ ಪಠ್ಯ ಅಳವಡಿಸಲು ನಿರ್ಧಾರ.
- ಗಡಿನಾಡು ಕನ್ನಡಿಗರ ಸಮಸ್ಯೆಗಳ ಅಧ್ಯಯನ ಹಾಗೂ ಪರಿಹಾರಕ್ಕೆ ಆದ್ಯತೆ.
- ಪ್ರಾಥಮಿಕ ಶಿಕ್ಷಣ ಪೂರ್ಣವಾಗಿ ಕನ್ನಡ/ಮಾತೃಭಾಷಾ ಮಾಧ್ಯಮದಲ್ಲಿರಬೇಕೆಂಬ ತತ್ವಕ್ಕೆ ಬದ್ಧತೆ ಮತ್ತು ಅನುಷ್ಠಾನಕ್ಕೆ ಸಿದ್ಧತೆ.
- **ಕನ್ನಡ ಕಂಪ್ಯೂಟರ್ ಕೇಂದ್ರ** ಸ್ಥಾಪನೆ.
- **ಕನ್ನಡ ಮಾಧ್ಯಮ ಪ್ರಶಸ್ತಿ** ಸ್ಥಾಪನೆ.

**ರಾಜ್ಯ ಭಾಷೆಯ ಅಭಿವೃದ್ಧಿ ಕೆಲಸಗಳಲ್ಲಿ ದೇಶದಲ್ಲೇ ಕರ್ನಾಟಕಕ್ಕೆ ಮೊದಲ ಸ್ಥಾನ. ದೂರಗಾಮಿ ಕನ್ನಡ ಕೆಲಸಕ್ಕೆ ಆದ್ಯತೆ ಎಂದೆಂದು.**








# ನನ್ನ ಮುದ್ದಿನ ಡಿಕ್ಟೇಟರ್ ಅಮ್ಮ

"ಎಂಥಾ ಮಜಾ ಕವಿತೆ ಬರೆದಿದ್ದೀಯೇ ಸರೂ" ಎಂದಿದ್ದಳು ಭಾಗ್ಯ.

"ಸೂ ಅದೆಲ್ಲ ಹೌದೇನೆ ?" ಸುಚಿತ್ರ ಕೇಳಿದ್ದಳು.

"ಎಷ್ಟು ಚೆಂದ ಬರೆದಿದ್ದಿ ?" ಎಲಿಜಾ ಹೊಗಳಿದ್ದಳು.

"ನನ್ನ ಅಮ್ಮನೂ ಹೀಗೇನೆ" ಎಂದು ಬಾನು ಕಿಲಕಿಲ ನಕ್ಕಿದ್ದಳು.

"ನನ್ನ ಮುದ್ದಿನ ಡಿಕ್ಟೇಟರ್ ಅಮ್ಮ ಎಂಬ ಕವಿತೆ ಬರೆಯುವವರೆಗೆ ಕವಿತೆ ಬರೆಯುವುದೇನೆಂದೇ ತನಗೆ ಗೊತ್ತಿರಲಿಲ್ಲ."

ಹೌದು ಅಮ್ಮ ಡಿಕ್ಟೇಟರ್.

ಅಂದು ಅಮ್ಮನಿಗೆ ದಮ್ಮು ಜಾಸ್ತಿಯಾಗಿತ್ತು. ಅವಳಿಗೆ ದಮ್ಮಿನ ರೋಗ ಈಗಿತ್ತಲಾಗಿ ಅಂಟಿಕೊಂಡಿತ್ತು. ಆಗ ನಾನು ಪಿ.ಯು.ಸಿ.ಯಲ್ಲಿದ್ದೆ. ಅಮ್ಮ ಶ್ವಾಸ ತೆಗೆಯುವ ಸದ್ದನ್ನು ನಾನು ಮಲಗಿದ್ದಲ್ಲಿಂದಲೇ ಕೇಳಿದೆ.

ನಾನೇ ಎದ್ದು ಮುಂಜಾನೆಯ ಚಾ ತಿಂಡಿ ತಯಾರಿಸಿದೆ. ಪಾತ್ರೆಗಳನ್ನು ತೊಳೆದೆ. ಬಚ್ಚಲಿಗೆ ನೀರು ತುಂಬಿದೆ. ಇಷ್ಟೆಲ್ಲ ಕೆಲಸ ನಾನೇ ಮಾಡಿದ್ದಕ್ಕೆ ನನ್ನ ಮುದ್ದಿನ ಅಮ್ಮನ ಕರುಳು 'ಚುರುಕ' ಎಂದಿರಬೇಕು.

"ನೀನೆ ಎಲ್ಲಾ ಕೆಲಸ ಮಾಡಬೇಕಾಯಿತಲ್ಲ ಮಗಳೇ, ಈ ಕೆಟ್ಟ ದಮ್ಮೊಂದು" ಎಂದು ಹೇಳಿದ್ದಳು.

"ನಾನೇ ಅಲ್ವಾಮ್ಮ ನಿನ್ನ ಮಗನ ಕೈಯಲ್ಲಿ ಮುಸುರೆ ಪಾತ್ರೆ ತೊಳೆಸಿದ್ದು?"

"ಹೌದೇನೆ ? ನೀನು ಒಂದಪ್ಪ, ಆ ಗಂಡು ಪೋರನ್ನ ಹೆಣ್ಣು ಮಾಡಿಬಿಡ್ತೀಯೇನೆ ?"

"ಬೇಕಲ್ಲಮ್ಮ, ಎಲ್ಲಾ ತಿಳಿದಿರಬೇಕು, ಎಲ್ಲಾದರೂ ನಿನ್ನಂಥದೇ ಡಿಕ್ಟೇಟರ್ ಹೆಂಡತಿ ಸಿಕ್ಕಿದರೆ ಸುಧಾರಿಸಿಕೊಂಡು ಹೋಗಬೇಕಲ್ಲ ?"

ಆಹಾ ಎಂಥಾ ಡಿಕ್ಟೇಟರ್ ನಾನು ? ಡಿಕ್ಟೇಟರ್ ಅಂತಿರ್ತೀಯಲ್ಲಾ ? ನೋಡಿದ್ಯ ನಿನ್ನ ಅಪ್ಪನ ಬೇಜವಾಬ್ದಾರಿನ ? ಒಂದು ಮನೆ ಬೇಕಾ, ಹೆಂಡತಿ ಬೇಕಾ ? ಹೋಯ್ತು ಬಂತು ಎಂದಿಲ್ಲ. ಇಷ್ಟು ವರ್ಷ ಎಲ್ಲಾ ಸುಧಾರಿಸಿಕೊಂಡು ಬಂದೆನಲ್ಲಾ ? ಇಲ್ಲದಿದ್ದರೆ ನಿಮಗೆ ಶಾಲೆ, ಕಾಲೇಜು ಇತ್ತು ಅಂದ್ಕೊಂಡಿದ್ಯಾ ? ಏನಾದರೂ ಹೇಳಿದರೆ 'ಮುದ್ದು ಮಾಡಿ ಮರೆಸುವ ಚಮತ್ಕಾರ ಮಾತ್ರ ಗೊತ್ತು' ಎಂದಾಗ ಕಿಲಕಿಲ ನಕ್ಕಿದ್ದೆ ನಾನು.

ಒಮ್ಮೆ ಅಪ್ಪನಿಗೆ ಜೊಂಡೀಸ ಕಾಯಿಲೆ ಆದಾಗಿನ ನೆನಪು. ಜೊಂಡೀಸ್ಗೆ ಡಾಕ್ಟರ ಔಷಧಿಗಿಂತ ನಾಟಿ ವೈದ್ಯನೇ ಫಲಕಾರಿ ಎಂಬುದು ಅಮ್ಮನ ಅಂಬೋಣ.

ನವಿಲೋಣದಲ್ಲಿ ಮನೆಮದ್ದು ಕೊಡ್ತಾರೆ. ಏಳು ದಿನ ಉಪ್ಪ ಹಾಕದೆ ಗಂಜಿ ಉಣ್ಣಬೇಕು; ಬೆಲ್ಲ ತಿನ್ನಬಹುದು, ಮತ್ತೇನೂ ಕೂಡದು. ಮತ್ತೆ ಜನ್ಮದಲ್ಲಿ ರೋಗ ಬರುವುದಿಲ್ಲ. ಅದನ್ನೇ ತರಬೇಕು ಎಂದು ಹಟ ಮಾಡಿದ್ದರು. ಅಮ್ಮ ಅದನ್ನೇ ಯಾರಿಂದಲೋ ತರಿಸಿದ್ದಳು.

ಅಪ್ಪ ಪಥ್ಯ ಮಾಡಲು ಒಪ್ಪಲಿಲ್ಲ. ಆದರೆ ಅಮ್ಮ ಆರ್ಡರ್ ಮಾಡಿಬಿಟ್ಟಿದ್ದಳು. ಅಪ್ಪ ಹೇಗೆ ಮೀರುತ್ತಾನೆ ? ನಾಲ್ಕು ದಿನ ಸರಿಯಾಗಿ ಪಥ್ಯ ಮಾಡಿದ ಮೇಲೆ ಐದನೇ ದಿನ ಗೆಳೆಯರ ಮನೆಗೆ ಹೋಗಿ, ಅವರಿಗೆ ಕಾಯಿಲೆ ವಿಷಯ ಹೇಳದೆ, ಶಿಸ್ತಾಗಿ ಮಟನ್ ಹೊಡೆದುಬಂದಿದ್ದ. ಅದನ್ನು ತಿಳಿದ ಅಮ್ಮ ರೌದ್ರಾವತಾರ ಪ್ರದರ್ಶಿಸಿದ್ದಳು. ಅಷ್ಟು ಮಾತ್ರವಲ್ಲ; ಒಂದು ದಿನ ಪೂರ್ತಿ ಉಪವಾಸದ ಶಿಕ್ಷೆ ಕೊಟ್ಟಿದ್ದಳು.

"ಹೌದೇನೆ ಸರು, ನಿನ್ನಮ್ಮ ಅಪ್ಪನನ್ನು ಉಪವಾಸ ಹಾಕಿದ್ದು ?" ಎಂದು ಭಾಗ್ಯ ಹಾಸ್ಯ ಮಾಡಿದರೆ 'ಮಜಾ ಇದ್ದಾಳಪ್ಪ ನಿನ್ನಮ್ಮ' ಎಂದು ಎಲಿಜಾ ಮುಗುಳು ನಕ್ಕಿದ್ದಳು, ತನ್ನ ಗುಳಿ ಬೀಳುವ ಕೆನ್ನೆಯ ಮೇಲೆ ಪೆನ್ನಿನ ತುದಿ ಊರುತ್ತ.

"ಇಷ್ಟೇ ಏನು ? ಒಂದು ಸಲ ಏನಾಯ್ತುಂತೀಯ ? ನಾನು ಆಗ ಹೈಸ್ಕೂಲಿನಲ್ಲಿದ್ದೆ. ಸಂಜೆ ಶಾಲೆ ಬಿಟ್ಟ ನಂತರ ಮನೆಗೆ ಬಂದೆನಲ್ಲಾ, ಅಮ್ಮ ಕರೆದು ಕುಡಿಯಲು ಕಷಾಯ ಕೊಟ್ಟಳು. ಮೋರೆ ತೊಳೆದು ಟುವಾಲಿನಲ್ಲಿ ಒರೆಸಿಕೊಳ್ಳುತ್ತ ಹೋಗಿ, ದೋಸೆ ಪ್ಲೇಟಿಗೆ ಕೈ ಹಾಕಿದಾಗ ಅಮ್ಮನಿಗೆ ನನ್ನ ಕೈಯಲ್ಲಿ ಬಳೆ ಇಲ್ಲದ್ದು ಕಂಡಿತು"....

"ಏನೆ ಅದು, ಕೈಬಳೆ ಎಲ್ಲಿ ಹೋಯ್ತು ?"

"ಒಳಗೆ ಇದೆಯಮ್ಮ; ಶಾಲೆಯಲ್ಲಿ ಕಬಡ್ಡಿ ಆಡುವಾಗ ತೆಗೆದಿರಿಸಿಕೊಂಡಿದ್ದೆ."

"ಏನೇ ಹೆಣ್ಣು ಮಕ್ಕಳು ಕಬಡ್ಡಿ ಆಡ್ತಾರೇನೇ ?"

"ಹೌದಮ್ಮ, ಆಗ ಜಗ್ಗುವುದು, ಬೀಳುವುದು ಮಾಡುತ್ತೇವಲ್ಲ ಬಳೆ ಒಡೆದುಹೋಗಲಾರದು."

"ಹಾಗಂತ ಬಳೆ ತೆಗಿತಾರೇನೆ ಹೆಣ್ಮಕ್ಕಳು: ಗಂಡ ಸತ್ತವರು ಮಾತ್ರ ಬೋಳು ಕೈಯಿಂದಿರೂದು" ಎಂದು ಬಯ್ದು ಬಳೆ ಹಾಕಿಕೊಂಡು ಬಂದ ಹೊರತು ತಿಂಡಿ ಕೊಡುವುದಿಲ್ಲವೆಂದು ಶಿಕ್ಷಿಸಿದ್ದಳು.

ಆಗಿಂದೆಲ್ಲ ನಾನು ಕರೆಯುವುದು 'ಡಿಕ್ಟೇಟರ್ ಅಮ್ಮ.'

"ಅವನ್ನೆಲ್ಲ ಬರ್ದುಬಿಟ್ಟಿದ್ಯಲ್ಲೇ ಸರೂ."

"ಹೌದು, ವಿನೋದವಾಗಿ."

"ಚಂದಾಗದೆ ಬಿಡು."

ಗೆಳತಿಯರ ಪ್ರಶಂಸೆಯೇ ಪ್ರಶಂಸೆ.

ನಾನು ಕಾಲೇಜು ಮುಂದುಗಡೆಯ ದೇವದಾರು ಮರದ ನೆರಳಿಗೆ ನಿಂತಿದ್ದೆ. ಆಗಲ್ಲವೇ ನಮ್ಮ ಯೂನಿಯನಿನ ಪ್ರತಿನಿಧಿ, ಮೋಹನ ಹೇಳಿದ್ದು ? ಆತ ಹತ್ತಿರ ಬರುವವರೆಗೂ ನಾನು ಗಮನಿಸಲೇ ಇಲ್ಲ. ನನ್ನ "ಮುದ್ದಿನ ಡಿಕ್ಟೇಟರ್ ಅಮ್ಮ"ದ ಕುರಿತಾಗಿ ಗೆಳತಿಯರ ಕಾಮೆಂಟ್ಸ್‌ನ್ನು ನೆನೆಸುತ್ತ ಮೈಮರೆತಿದ್ದೆ.

ನಾನೆಂದರೆ ಅಮ್ಮನಿಗೆ ಎಷ್ಟೊಂದು ಕಾಳಜಿ ಎನ್ನುವುದು ನನ್ನ ಮನಸ್ಸಿನಲ್ಲಿ ಸುಳಿದುಹೋಗುತ್ತಿತ್ತು.

ಮನೆಯ ಹಿಂದಿನ ಬಯಲಲ್ಲಿ ಸಾಯ್ಕಲ್ ಕಲಿಯುತ್ತಿದ್ದಾಗೊಮ್ಮೆ ಬ್ಯಾಲೆನ್ಸ್ ತಪ್ಪಿ ಬಿದ್ದುಬಿಟ್ಟೆ. ಬಿದ್ದಾಗ ಮೊಳಕಾಲು ಗೆಣ್ಣು ಒಡೆದುಹೋಗಿ ರಕ್ತ ಸುರಿಯಿತು. ಮೊಳಕ್ಕೆ ತೆರೆದುಹೋಗಿತ್ತು. ಮೋರೆಯ ಮೇಲೆ ಚಿಕ್ಕ ಗಾಯವಾಯಿತು.

ನನ್ನನ್ನು ಕಂಡು ಅಮ್ಮ ಮರುಗಿದ್ದೆಷ್ಟು ! ನನಗೆ ಕಾಲು ತುಂಬಾ ನೋಯುತ್ತಿತ್ತು. ಆ ರಾತ್ರಿ ಅವಳು ನಿದ್ದೆಯನ್ನೇ ಮಾಡದೆ ಮಧ್ಯದಲ್ಲಿ ಎದ್ದು ಶಾಖ ಮಾಡುವುದು, ಅದೇ ದಿನ ಮನೆಯಲ್ಲಿಲ್ಲದ ಅಪ್ಪನನ್ನು ದೂರುವುದು ಮಾಡುತ್ತಿದ್ದಳು. ನನ್ನ ಮೋರೆಯ ಮೇಲಿನ ಗಾಯದಿಂದಾಗಿ ಮೋರೆಯ ಮೇಲೆ ಕಲೆ ಬಿದ್ದು, ಅಂದವೇ ಹಾಳಾಗಬಹುದೆಂದು ಚಡಪಡಿಸಿದ್ದೆಷ್ಟು : ಔಷಧಿ ಮಾಡಿದ್ದೆಷ್ಟು, ನನ್ನ ಮುದ್ದಿನ ಅಮ್ಮ !

ಮೋಹನ ಬಂದು ಹಲೋ ಸರೋಜ, ಎಂದಾಗಲೇ ಎಚ್ಚರ.

ಆರ್. ಎ. ಭಂಡಾರಿ

''ಸರೂ ಎಷ್ಟು ಸೊಗಸಾಗಿ ಕವಿತೆ ಬರೆದಿದ್ದಿಯಾ ? ಎಕ್ಸಲೆಂಟ್ ? ಯೂನಿಯನ್ ಡೇ ದಿನ ಓದಲೇಬೇಕು. ಹಾಂ, ಮೈ ಡಿಯರ್ ಪೊಯಟೆಸ್'' ಎಂದಾಗ ಏನೆನಿಸಿತ್ತು ? ನನ್ನ ಮೋರೆ ಕೆಂಪನ್ನು ತೋರಿಕೊಂಡಿತ್ತೇ ? ಮೈಯಲ್ಲಿ ಒಂದು ಬಗೆಯ ಮಿಂಚಿನ ಬಳ್ಳಿ ಚಳಕ್ ಎಂದು ಹರಿದಂತಾಗಿರಲಿಲ್ಲವೇ ?

''ಥ್ಯಾಂಕ್ಸ್. ನಿ ನಿ ನಿನಗೆ ಹೇಗೆ ತಿಳಿಯಿತು ?'' ಎನ್ನುವಾಗ ಧ್ವನಿ ನಡುಗಿತ್ತೇ ?

''ಓ, ಎಲಿಜಾ ಕಾಲೇಜು ಇಡೀ ಗಾಜ ಹಾಕಿಬಿಟ್ಟಿದ್ದಾಳಲ್ಲಾ. ನೀನು ಈಗ ಪ್ರಸಿದ್ಧ ಕವಯಿತ್ರಿ ಆಗಿಬಿಟ್ಟಿರುವೆ. ಕಾಲೇಜ್ ಹಿರೋಯಿನ್ ಕೂಡ. ಕಂಗ್ರಾಚ್ಯುಲೇಶನ್ಸ್'' ಎಂದು ಕಣ್ಣಲ್ಲಿ ಕಣ್ಣಿಟ್ಟು ನೋಡಿದಾಗ ನನಗೆ ಸಿಟ್ಟು ಬಂದಿತ್ತು.

''ಹಾಂ, ಸಿಟ್ಟು ಮಾಡಬೇಡ, ಮೊದಲೇ ಡಿಕ್ಟೇಟರ್ ಅಮ್ಮನ ಮಗಳು'' ಎಂದು ತುಂಟ ನಗೆಯಾಡುತ್ತ ನಡೆದಿದ್ದ.

ಇಂದು ಕಾಲೇಜ್ ಯೂನಿಯನ್ ಡೇ. ಮಧ್ಯಾಹ್ನ ಸಮಾರಂಭ. ಕವಿಗೋಷ್ಠಿ ಕೂಡ ಇದೆ. ನಾನು ಕವಿತೆ ಓದಬೇಕೆಂಬುದು ನನ್ನ ಕ್ಲಾಸಿನವರೆಲ್ಲರ ಒತ್ತಾಯ. ಭಾಗ್ಯ, ಎಲಿಜಾ, ಪಂಕಜ, ಬೌನ, ಮೋಹನ, ಪ್ರದೀಪ ಇತ್ಯಾದಿಗಳು ಹೇಳಿದ್ದೇ ಹೇಳಿದ್ದು. ಮನಸ್ಸಿನಲ್ಲಿ ಓದಬೇಕು ಎನ್ನಿಸಿದರೂ ನಾಚಿಕೆ, ಭಯ. ಹೈಸ್ಕೂಲಿನಲ್ಲಿದ್ದಾಗೇನೋ ವೇದಿಕೆಗೆ ಹೋದದ್ದಿದೆ. ಬಾಯಿಪಾಠ ಮಾಡಿದ ಭಾಷಣ ಒಪ್ಪಿಸಿದ್ದುಂಟು. ಹಾಡು ಹೇಳಿದ್ದುಂಟು. ನಂತರ ಇಲ್ಲ. ಕಾಲೇಜಿನಲ್ಲಂತೂ ನಾನು ಯಾರ ಕಣ್ಣಿಗೂ ಬೀಳದವಳು. ಹುಡುಗರು ನನ್ನನ್ನ 'ನಾಚಿ ಮುಳ್ಳು' ಎಂದು ಕರೆದು ಛೇಡಿಸುತ್ತಿದ್ದರು. ಉಪನ್ಯಾಸಕರು ಪ್ರಶ್ನೆ ಕೇಳಿದರೆ ಎದ್ದು ನಿಂತು ಉತ್ತರ ಕೊಟ್ಟವಳೇ ಅಲ್ಲ ನಾನು. ಆದರೂ ಇಂದು ಕವಿತೆ ಓದಬೇಕೆಂಬ ಉಮೇದು ಮನಸ್ಸಲ್ಲೇ ಪುಳಕ. ನೆನಸಿದರೇ ಬೆವರು ಬರುತ್ತದೆ. ತಡವರಿಸದಿದ್ದರೆ ಸಾಕು.

''ಸರೂ, ಜಾಜಿ ಮೊಗ್ಗೆ ತುಂಬಿದೆಯಲ್ಲೇ, ಕೊಯ್ಕೊಂಡು ಬಾ ದಂಡೆ ಕಟ್ಟಿಕೊಡುತ್ತೇನೆ. ಮಧ್ಯಾಹ್ನ ಹೊತ್ತಿಗೆ ಹೂವಾಗುತ್ತದೆ'' ಎಂದಳು ಅಮ್ಮ.

ಹೌದು, ಜಾಜಿ ಮೊಗ್ಗೆ ಉದ್ದನ್ನ ದಂಡೆ ಮಾಡಬೇಕು. ಜಡೆಯ ಮೇಲೆ ಇಳಿಬಿಟ್ಟುಕೊಂಡಿರಬೇಕು, ಛೇ, ಬೇಡ ಬೇಡ, ಅದೆಂತದು ಹಳ್ಳಿ ಹೆಂಗಸಿನ ಹಾಗೆ. ಯಾರಾದರೂ ನಗೆಯಾಡಬಹುದು. ಭಾಗ್ಯ, ಎಲಿಜ, ಎಲ್ಲಾ ಎಲ್ಲಾ ಕೂಡಿ ಏನೆ, ಗಂಡು ನಿಶ್ಚಯವಾಯಿತೇನೇ ? ಎಂದು ಕಚಗುಳಿ ಇಟ್ಟಾರು. ಬೇಡ, ಸಣ್ಣದೊಂದು ಮಾಲೆ ಮಾಡಿ ಜಡೆಗೆ ಸಿಕ್ಕಿಸಿಕೊಳ್ಳಬೇಕು. ಅದು ಆ ಕಡೆ ಈ ಕಡೆ ಓಲಾಡುತ್ತಿರಬೇಕು. ಈ ಹೂವುಗಳನ್ನೆಲ್ಲ ಯಾವ ಪರಮಾತ್ಮ ಮಾಡಿದನಪ್ಪ: ಎಷ್ಟು ಚೆಂದ; ಪುಟಾಣಿ ಹೂವು ದೇಟಿನ ಹತ್ತಿರ ಹಸಿರು ಮಿಶ್ರಿತ ಕೆಂಪು, ಮಧ್ಯ ಹೋದಂತೆ ದಪ್ಪ ಕೆಂಪು, ಅಂಚಿಗೆ ಬಿಳಿ ಮಿಶ್ರಣ, ತುದಿಯಲ್ಲಿ ಪಾಯಿಂಟ್, ಸೂಜಿಯ ಹಾಗೆ ಚೂಪು, ಅರಳಿದರೆ ಘಮಘಮ.... ಇದು ಜಾಜಿ. ನಾನು, ಸರೋಜ. 'ಸರೋಜ'ವೆಂದರೆ ತಾವರೆ; ಕೆಂದಾವರೆ. ಹಾಗೆ ಅಂತೆ ನನ್ನ ಮುಖ, ನಸುಗೆಂಪು....

ಕನ್ನಡಿಯನ್ನು ನೋಡಿಕೊಳ್ಳಬೇಕು ಎನ್ನಿಸಿತವಳಿಗೆ, ಹೌದು. ಇಂದು ನನ್ನ ಡ್ರೆಸ್ಸೆಲ್ಲ ನಸುಗೆಂಪಿನದು. ನಸುಗೆಂಪಿನ ಕಮೀಜ, ಹೆಗಲವಲ್ಲಿ ನಸುಗೆಂಪಿನದು, ಜಾಜಿಯ ಮಾಲೆ ಅಷ್ಟೊತ್ತಿಗೆ ಅರೆ ಅರಳಿರುತ್ತದೆ.....

''ಸರೂ.'' ಅಮ್ಮನ ಕರೆ.

''ಬಂದೇ ಬಂದೆನಮ್ಮ'' ಎಂದು ತಿರುಗಿದಾಗ ಪಾಗಾರದ ಬದಿಯ ಗಿಡ ಹೂವೊಂದು ಉಳಿದಿತ್ತು.

''ಬಂದುಬಿಟ್ಟೆ'' ಎನ್ನುತ್ತ ಆ ಗಿಡದ ಪೊದೆಯ ಕಡೆ ಸರೋಜ ಕಾಲಿರಿಸಿದಳು.

''ಕ್ಯಂ ಕ್ಯಂ ಕೆಂ'' ಎಂದು ಸದ್ದು ಕೇಳಿ ಬೆಚ್ಚಿದಳು.

''ಸೊಂಯ್'' ಎಂದು ಏನೋ ಸರಿದು ಹೋದಂತೆನಿಸಿತು. ನೋಡಿದರೆ ಹಾವೊಂದು ಕಪ್ಪೆ ಮರಿಯನ್ನು ಕಚ್ಚಿಕೊಂಡು ಓಡಿತು. ಕಪ್ಪೆ ಹೊಟ್ಟೆ ಮೇಲಾಗಿ ಬೆಳ್ಳಗೆ ಕಾಣುತ್ತಿತ್ತು. ಕಾಲು ಚಡಪಡಿಸುತ್ತಿದ್ದವು. ತಪ್ಪಿಸಿಕೊಳ್ಳುವ ಪ್ರಯತ್ನ. ಆದರೆ ಹಾವು ಗಟ್ಟಿಯಾಗಿ ಹಿಡಿದಿತ್ತು. ನುಂಗುತ್ತಿತ್ತು. 'ಕೆಂ ಕೆಂ' ಆರ್ತನಾದ. ಪಾಗಾರ ಗಂಡಿಯಿಂದ ಓಡಿಹೋಯಿತು ಹಾವು.

''ಸಾಕಪ್ಪಾ'' ಎಂದು ಸರೋಜ ಹಿಂದಿರುಗಿದಳು.

ಹನ್ನೆರಡೂವರೆಗೆ ಸರಿಯಾಗಿ ಬಸ್ಸು ಬಂದುಬಿಡುತ್ತದೆ. ಬೇಗ ಬೇಗ ಸಿದ್ಧವಾಗಬೇಕು. ನಾನೇಕೆ ಇಷ್ಟು ಚಡಪಡಿಸುತ್ತೇನೆ ? ಇದೇನು ಕಾಲೇಜಿಗೆ ಹೋಗುವ ಮೊದಲ ದಿನದ ಸಂಭ್ರಮವೋ ಎನ್ನುವಂತೆ.

''ಏನೇ ಸರೂ, ಒಬ್ಬಳೆ ನಗುತ್ತಾ ಇದ್ದೆ ಕೈ ಕುಣಿಸುತ್ತ.''

ಕಚಗುಳಿ ಇಟ್ಟಂತಾಯಿತು ಅಮ್ಮನ ಮಾತು.

''ಹೌದೇನಮ್ಮ ನನಗೆ ಗೊತ್ತೇ ಆಗಲಿಲ್ಲ.''

''ಏನೇ ಕಾಲೇಜಿನಲ್ಲಿ ಲವ್ ಗಿವ್ ಮಾಡಿದೆಯಾ ?''

''ಅಯ್ಯಯ್ಯೋ, ಹಾಗೆ ಮಾಡಿದರೆ ನೀನಿದ್ದೀಯಲ್ಲ ಡಿಕ್ಟೇಟರ್ ಅಮ್ಮ ?'' ಅಮ್ಮ ನಗೆಯಾಡಿದಳು. ತನ್ನ ಮಗಳು ಅಂಥವಳಲ್ಲ ಎಂಬಂತೆ.

''ಮತ್ತೇನು ?''

''ನಿನಗೆ ಗೊತ್ತಲ್ಲಮ್ಮ, ಯೂನಿಯನ್ ಡೇ. ನೀನೇ ಅಲ್ವಾ ಜಾಜಿ ಮಾಲೆ ಮಾಡಿಕೊಟ್ಟವಳು ?''

''ಅದಕ್ಕೆ ಹೀಗೆ ಹುಚ್ಚರ ಹಾಗೆ.''

''ಅಷ್ಟೆ ಅಲ್ಲಮ್ಮ ಇಂದೂ ಇಂದು ಒಂದು ಕವಿಗೋಷ್ಠಿಯೂ ಇದೆ.''

''ಎಲ್ಲಿ ?''

''ಅದೇ ನಮ್ಮ ಕಾಲೇಜಿನಲ್ಲೇ.''

''ಅದಕ್ಕೆ ?''

''ಅಲ್ಲ ನಾನು ಒಂದು ಕವಿತೆ ಓದುವುದಿದೆ.''

''ಕವಿತೆ ?''

''ಹೌದಮ್ಮ ಕವಿತೆ; ನಾನೂ ಒಂದು ಕವಿತೆ ಬರೆದಿದ್ದೇನೆ. ಮಾಡದೇ ಇದ್ದರೆ ಇದ್ದೀಯಲ್ಲ ನೀನು, ಡಿಕ್ಟೇಟರ್ ಅಮ್ಮ.''

''ಏನಪ್ಪ ನಿಂದು, ಮಾತಿಗೆ ಮೂರ್‍ಸಲ ಡಿಕ್ಟೇಟರ್ ಅಮ್ಮ ಹೇಳುತ್ತ.''

''ನನ್ನ ಕವಿತೆಯ ಹೆಸರೇ ಹಾಗೆ.''

''ಹೇಗೆ ?''

''ನನ್ನ ಮುದ್ದಿನ ಡಿಕ್ಟೇಟರ್ ಅಮ್ಮ ಅಂತ.''

''ಅಯ್ಯೋ ಅದೆಲ್ಲ ಏನೇ ?''

''ಕವಿತೆ. ನೋಡಿ ಹೊಗಳಿದ್ದೇ ಹೊಗಳಿದ್ದು. ಬೇಕಾದರೆ ಭಾಗ್ಯ ಬಂದಾಗ ಕೇಳು.''

''ನೀನೇ ಓದಿ ಬಿಡಲ್ಲ ನನಗೆ ?''

''ಆಮೇಲೆ ನೋಡು, ಹನ್ನೆರಡಾಗೋಯ್ತು, ಇನ್ನು ಅರ್ಧ ತಾಸಿನಲ್ಲಿ ನನ್ನ ಡ್ರೆಸ್ ಆಗಬೇಡವಾ ?''

''ದೇವರೇ ನಿನ್ನ ಅಲಂಕಾರವೋ: ಅದಾದರೂ ನನಗೆ ಸರಿಯಾಗಿ ತಿಳಿಸಿದರೆ ಅಲ್ವಾ ? ನಾನು ಹೇಳಬೇಕು ಅದನ್ನು. ಆಮೇಲೆ ಡಿಕ್ಟೇಟರ್ ಅಮ್ಮ ಎನ್ನುವುದು. ಆ ತಿಳಿಗುಲಾಬಿ ಕಮಿಜಾ ಹಾಕಿಕೊ, ನಿನಗೆ ಒಪ್ಪುತ್ತದೆ.''

''ಕರೆಕ್ಟ್.''

''ಏನು ಕರೆಕ್ಟ್ ?''

''ನನ್ನ ಸೆಲೆಕ್ಷನ್ನೂ ಅದೇ.''

ಸಭಾಭವನ ತುಂಬಿತ್ತು. ಹೆಚ್ಚಿನ ಉಪನ್ಯಾಸಕರೆಲ್ಲ ಬಂದಿದ್ದರು. ವಿದ್ಯಾರ್ಥಿಗಳಂತೂ ಉತ್ಸಾಹಭರಿತರಾಗಿದ್ದರು. ಸರೋಜಳ ಹೆಸರು ಕಡೆಯಲ್ಲಿತ್ತು. ಕಾರ್ಯನಿರ್ವಾಹಕರು 'ಈಗ ಕವಿತೆ ಓದುವವರು ಸರೋಜ, ದ್ವಿತೀಯ ಪದವಿ' ಎಂದಾಗ ಎದೆಯಲ್ಲಿ ನವಿರಾದ ಕಂಪನ.

ಏಕೆ ಏಳೆ, ಎಂದಳು ಬಾನು.

ಸರೋಜ ಎದ್ದು ವೇದಿಕೆಗೆ ನಡೆದಳು. ಹುಡುಗರು ಚಪ್ಪಾಳೆ ಹಾಕಿ ಸ್ವಾಗತಿಸಿದರು. ''ನನ್ನ ಮುದ್ದಿನ ಡಿಕ್ಟೇಟರ್ ಅಮ್ಮ.'' ಮಾತು ನಡುಗಿತು. ಮುಂದೆ ಕವಿತೆ ಓದಿನಲ್ಲಿ ತಲ್ಲೀನ. ಸೊಗಸಾಗಿ ಓದಿದಳು ಸರೋಜ. ಸಭೆಯಲ್ಲಿ ಕಿವಿಗಡಚಿಕ್ಕುವಂತೆ ಚಪ್ಪಾಳೆ.

ಅಂದಿನ ಸಭೆಯ ಮುಖ್ಯ ಅತಿಥಿಗಳು ಸರೋಜಳನ್ನು ಹೊಗಳಿದರು. ಅಧ್ಯಕ್ಷತೆ ವಹಿಸಿದ್ದ ಪ್ರಿನ್ಸಿಪಾಲರೂ.

ವೇದಿಕೆಯ ಕೆಳಗೆ ಇಳಿದೊಡನೆ ಗೆಳತಿಯರು ಮುತ್ತಿಕೊಂಡರು.

''ಎಷ್ಟು ಚೆನ್ನಾಗಿ ಓದಿದೆಯೇ ಸರೋಜ!''

''ವೆರಿ ವೆರಿ ಇಫೆಕ್ಟಿವ್ ರೀಡಿಂಗ್'' ಎಂದು ಹಸ್ತ ಮುಂದೆ ಮಾಡಿದ ಮೋಹನ. ಸರೋಜಳ ಹಸ್ತ ನಡುಗುತ್ತಿತ್ತು.

ಇಂಥಾ ಗುಂಗಿನಲ್ಲಿ ಸರೋಜ ಹೊರಬಂದಳು.

ಕಾಲೇಜ್ ಗೇಟಿನ ಹೊರಗೆ ಒಂದು ಜೀಪು ನಿಂತಿತ್ತು.

ಮೂರು ಮಂದಿ ಅಲ್ಲಿ ನಿಂತಿದ್ದರು.

''ಡಿಕ್ಟೇಟರ್ ಅಮ್ಮ ಕವಿತೆ ಓದಿದವರು ಯಾರು ?''

ಧಡೂತಿ ವ್ಯಕ್ತಿಯೊಂದು ಕೇಳಿತು.

''ನಾನು.''

''ಬಹಳ ಚೆನ್ನಾಗಿ ಓದಿದಿರಿ.''

''ಥ್ಯಾಂಕ್ಸ್.''

''ಬನ್ನಿ ಲಿಫ್ಟ್ ಕೊಡ್ತೇನೆ.''

''ಥ್ಯಾಂಕ್ಸ್. ಬೇಡ.''

''ಇಲ್ಲ ಇಲ್ಲ, ಬನ್ನಿ.''

''ಇಲ್ಲ ಇಲ್ಲ.''

''ಬರಬೇಕು, ನೀವು ಬರಬೇಕು.''

''ಹಾಗೆ ಯಾಕೆ ಒತ್ತಾಯಿಸುತ್ತೀರಿ ? ನಾನು ಬರುವುದಿಲ್ಲ.''

''ಯು ಆರ್ ಅಂಡರ್ ಮಾಯ್ ಅರೆಸ್ಟ್.''

ಅವರೇನೂ ಡ್ರೆಸ್ಸಿನಲ್ಲಿದ್ದ ಪೊಲೀಸರಾಗಿರಲಿಲ್ಲ.

''ಹಾಗೆ ಮಾಡಲು ನೀವು ಯಾರು ?''

(೧೯ನೇ ಪುಟಕ್ಕೆ)

# ಸಂಭ್ರಮದ ಸುಖ





ಕಳೆದ ಬಾರಿ ನಡೆದ ವಿಶ್ವಕಪ್ ಕ್ರಿಕೆಟ್ ಪಂದ್ಯದ ಸಮಯದಲ್ಲಿ ನಡೆದ ಘಟನೆ. ವಿಶ್ವಕಪ್ ಪಂದ್ಯ ಶುರುವಾಗಿ ಕೆಲವು ದಿನಗಳಾಗಿದ್ದವು. ನಮ್ಮ ದೇಶದ ಆಟಗಾರರು ಕೆಲವು ದೇಶಗಳ ವಿರುದ್ಧ ಗೆದ್ದು ಇನ್ನೂ ಕೆಲವು ಪಂದ್ಯದಲ್ಲಿ ಸೋತು 'ವಿಶ್ವಕಪ್' ಮೇಲೆ ಆಶೆಯಿಂದ ಕಣ್ಣಿಟ್ಟಿದ್ದರು.

ಒಂದು ಸಂಜೆ ಮನೆ ಮುಂದಿನ ಬೀದಿಯಲ್ಲಿ ಮಕ್ಕಳ ಮೆರವಣಿಗೆಯ ಗಲಾಟೆ ಕೇಳಿಸಿತು. ಹೊರ ಬಂದು ನೋಡಿದೆ. ನೂರಾರು ಚಿಕ್ಕಪುಟ್ಟ ಮಕ್ಕಳ ಮೆರವಣಿಗೆ ಮನೆಮುಂದೆ ಸಾಗಿತ್ತು. 'ಭಾರತಕ್ಕೆ ಜಯವಾಗಲಿ', 'ಸಚಿನ್ ಜಿಂದಾಬಾದ್', 'ಅನಿಲ್ ಕುಂಬ್ಳೆ ಜಿಂದಾಬಾದ್' – ಮಕ್ಕಳು ಘೋಷಣೆ ಕೂಗುತ್ತ ಸಾಗಿದ್ದರು. ಅದನ್ನು ಕೇಳಿದ ನನಗೆ ಭಾರತ ವಿಶ್ವಕಪ್ ಗೆದ್ದೇಬಿಟ್ಟಿದ್ದಾರೆ ಅನಿಸಿಬಿಟ್ಟಿತು. ಮರುಕ್ಷಣ ಇನ್ನೂ ಫೈನಲ್ ಆಟವೇ ನಡೆಯದಿರುವಾಗ ಭಾರತ ಹೇಗೆ ಗೆದ್ದಿತು..... ಅಥವಾ ನಾನು ಅಡಿಗೆ ಕೋಣೆಯಲ್ಲಿರುವಾಗಲೇ ಫೈನಲ್ ಆಟ ನಡೆದು ಭಾರತ ಗೆದ್ದೇ ಬಿಟ್ಟಿದೆಯಾ.... ಅನಿಸಿ ಗೊಂದಲವಾಯಿತು. ಕೆಲ ಹುಡುಗರು ಕ್ರಿಕೆಟ್ ಆಟಗಾರರ ಚಿತ್ರಗಳನ್ನು ಎತ್ತಿ ಹಿಡಿದಿದ್ದರು. ಆ ಮಕ್ಕಳ ಹುಮ್ಮಸ್ಸು, ಸಂಭ್ರಮ ನೋಡಿದಾಗ ನನಗಂತೂ ಭಾರತಕ್ಕೆ ಕಪ್ ಸಿಕ್ಕೇ ಬಿಟ್ಟಿದೆ ಅಂತ ಖಾತ್ರಿಯಾಗಿಬಿಟ್ಟಿತು.

ಹುಡುಗರಿಬ್ಬರು ಎದುರಿಗೆ ಕಂಡವರಿಗೆಲ್ಲ ಚಾಕಲೇಟು ಹಂಚುತ್ತಿದ್ದರು. ಗೇಟಿನ ಬಳಿ ನಿಂತ ನನ್ನನ್ನು ಕಂಡ ಹುಡುಗನೊಬ್ಬ ನನಗೂ ಚಾಕಲೇಟು ಕೊಡಲು ಬಂದ. "ಭಾರತ ಕಪ್ ಗೆದ್ದಿತೇನೋ ?" ಕೇಳಿದೆ ಅವನಲ್ಲಿ. "ಇಲ್ಲ ಆಂಟಿ." "ಮತ್ತೆ ಇದೆಂತ ಮೆರವಣಿಗೆ !? ಗೆದ್ದ ನಂತರ ತಾನೆ ಸಿಹಿ ಹಂಚೋದು ?" ಕೇಳಿದೆ ಅನುಮಾನಿಸುತ್ತ. "ಗೆಲ್ಲದಿದ್ರೆ ಆಮೇಲೆ ಖುಷಿ ಪಡಲಿಕ್ಕೆ ಆಗುತ್ತಾ" ತುಂಟ ನಗು ಚೆಲ್ಲುತ್ತಾ ಆ ಹುಡುಗ ಪ್ರಶ್ನಿಸಿದ. "ಅದ್ಕೇ ಗೆಲ್ಲೋ ಮುಂಚೆನೇ ಸಂಭ್ರಮ ಪಡೋದು." ಚಾಕಲೇಟು ಕೊಟ್ಟು ಆ ಹುಡುಗ ಗುಂಪಿನಲ್ಲಿ ಸೇರಿಕೊಂಡ. ನನ್ನ ಕಿರಿಯ ಮಗ ನಿನ್ನೆನೇ 'ಫಂಕ್ಷನ್‌ಗೆ ಬೇಕು' ಅಂತ ಇಪ್ಪತ್ತು ರೂಪಾಯಿ ತೆಗೆದುಕೊಂಡಿದ್ದು ನೆನಪಾಯ್ತು. ಓಹೋ.... ಇದ್ಕೆ ಇರ್ಬೇಕು ಅನಿಸಿತು.

ಒಳಬಂದು, ಟಿ.ವಿ. ಆನ್ ಮಾಡಿದೆ. 'ಕಮಾನ್ ಇಂಡಿಯಾ' ಹಾಡು ಬರ್ತಾ ಇತ್ತು. ಕ್ರಿಕೆಟ್ ಆಟಗಾರರು ಆಟದಲ್ಲಿ ತೋರಿಸುವ ಕೈಚಳಕ, ಸಂಭ್ರಮ ತೋರಿಸುತ್ತಿದ್ದರು. ವಿಶ್ವಕಪ್ ಗೆಲ್ಲುವ ಮೊದಲೇ ಈ ಜನರ ಹಾರಾಟ... ಸಂಭ್ರಮ ನೋಡಿದಾಗ ಮನದ ಮೂಲೆಯಲ್ಲಿ ಅಕಸ್ಮಾತ್ತಾಗಿ ಸೋತರೆ.... ಆಗ ಖುಷಿಪಡುವ ಕ್ಷಣವೇ ಇರುವುದಿಲ್ಲ.... ಸಂಭ್ರಮದ ಆ ಸುಖದಿಂದ ವಂಚಿತರಾಗುತ್ತಾರೆ. ಮಗು ಹೇಳಿದ್ದು ಸುಳ್ಳಲ್ಲ. 'ಭಾರತ ಗೆಲ್ಲುತ್ತೆ' ಅನ್ನುವ ಅನಿಸಿಕೆ, ವಿಶ್ವಾಸದಿಂದಲೇ ಮುಂಚಿತವಾಗಿಯೇ ಬೇಕಷ್ಟು ಖುಷಿ ಪಡಬಹುದು.. ಅಡೆತಡೆಯೇ ಇಲ್ಲ...

ವಿಶ್ವಕಪ್ ಗಳಿಸಲು ವಿಫಲರಾಗಿ ಸೋತ ಭಾರತ ತಂಡ ನಂತರ ಬರಿಗೈಲಿ ಹಿಂತಿರುಗಿದಾಗ ಎಲ್ಲರೂ ಪೆಚ್ಚಾಗಿಬಿಟ್ಟರು. ಆದರೆ ಗೆದ್ದ ಸಂಭ್ರಮವಂತೂ ಅನುಭವಿಸಿಬಿಟ್ಟಿದ್ದರು ಆ ಹುಡುಗರು.

ಯೋಚಿಸುತ್ತಿದ್ದಂತೆ ಮನಸ್ಸು ಬಾಲ್ಯಕ್ಕೆ ಜಾರಿತು. ದೀಪಾವಳಿ ಹಬ್ಬ ಬಂತೆಂದರೆ ತಿಂಗಳಿನಿಂದಲೂ ತಮ್ಮನೊಂದಿಗೆ ಸಂಭ್ರಮಿಸುತ್ತಿದ್ದೆ. ತಮ್ಮ ಪಟಾಕಿಗಳ ಲಿಸ್ಟ್ ತಯಾರಿಸಿ ಅದನ್ನು ಓದಿ ಗೆಳೆಯರ ಮುಂದೂ ಓದಿ... ಮರೆತುಬಿಟ್ಟ ಪಟಾಕಿಯ ಹೆಸರನ್ನು ಸೇರಿಸಿ, ಮತ್ತೆ ಪುನಃ ಬರೆದು ಸಂಭ್ರಮಿಸುತ್ತಿದ್ದ. ಅಮ್ಮ ಹಬ್ಬಕ್ಕೆ ಹದಿನೈದು ದಿನವಿರುವಾಗಲೆ ಬಾಗಿಲಿಗೆ ತುಳಸಿ ಮತ್ತು ಅಶ್ವತ್ಥ ಕಟ್ಟೆಗೆ ಕೆಮ್ಮಣ್ಣು ಕದಡಿ ಹಚ್ಚುತ್ತಿದ್ದಳು. ಅದರ ಮೇಲೆ ಅಚ್ಚ ಬಿಳಿಯ ರಂಗೋಲಿ ಪುಡಿಯನ್ನು ಹಾಲಿನೊಂದಿಗೆ ಕಲಸಿ ಡೊಂಕಿಲ್ಲದೆ ನೇರವಾಗಿ ಶಿಂಗಾರದ ಎಳೆಯನ್ನು ಬಿಡಿಸಿ ಸಂಭ್ರಮಿಸುತ್ತಿದ್ದಳು.

ಈಗ ನಮ್ಮ ಮಕ್ಕಳೂ ಸಹ ಹಬ್ಬ ಬರುವ ಎಷ್ಟೋ ದಿನ ಮುಂಚಿನಿಂದಲೇ ಆನೆ ಪಟಾಕಿ, ಗಿಳಿ ಪಟಾಕಿ, ಲಕ್ಷ್ಮಿ ಪಟಾಕಿ, ಹೂ ಕುಂಡ, ಫ್ಯಾಂಟಮ್, ಮಿಕ್ಕಿ ಮೌಸ್ ಅಂತ ಹತ್ತಾರು ಮದ್ದುಗುಂಡುಗಳ ಹೆಸರುಗಳನ್ನು ಒಂದರ ಕೆಳಗೆ ಒಂದರಂತೆ ಬರೆದು ಗೆಳೆಯರೊಂದಿಗೆ ಓದಿ, ಮತ್ತೆ ಮತ್ತೆ ತಿದ್ದಿ ಬರೆದು ಸಂಭ್ರಮಿಸುತ್ತಾರೆ. ಮಕ್ಕಳ ಹಸ್ತಾಕ್ಷರವಾದರೂ ಸುಧಾರಿಸಲಿ ಅಂತ ನಾವೂ ಸುಮ್ಮನಿರುತ್ತೇವೆ. ಆಚೆ ಈಚೆ ಮಕ್ಕಳೆಲ್ಲಾ ಸಂಜೆ ಒಂದೆಡೆ ಸೇರಿ ತಾವು ಬರೆದು ತಯಾರಿಸಿದ ಪಟಾಕಿ ಹೆಸರಿನ ಲಿಸ್ಟ್‌ಗಳನ್ನು ಓದಿ ಖುಷಿಪಡುವಾಗ ಅವರನ್ನು ತಡೆಯುವವರಾರು ? ಆ ಸಂಭ್ರಮ ಯಾವ ಆನಂದಕ್ಕೆ ಕಡಿಮೆಯಾಗಿರುತ್ತದೆ ? ನಂತರ ದೀಪಾವಳಿ ಹಬ್ಬದ ದಿನ ಅವುಗಳಲ್ಲಿ ಎಷ್ಟು ಮನೆಗೆ ಬರುತ್ತದೋ ಅದೆಷ್ಟು ಬರುವುದಿಲ್ಲವೋ... ಬಂದವುಗಳಲ್ಲಿ ಒಂದಿಷ್ಟು ಠುಸ್, ಪುಸ್ ಅನ್ನುತ್ತವೆಯೋ.... ಆ ವಿಚಾರ ಬೇರೆ. ಒಟ್ಟಿನಲ್ಲಿ ಹಬ್ಬ ಬಂದೇಬಿಡುತ್ತದೆ. ಬಂದ ನಂತರ ಡಮ್ ಡಮ್ ಅಂತ ಹಬ್ಬ ಅದೆಷ್ಟು ಬೇಗ ಓಡಿ ಹೋಗಿಯೇಬಿಡುತ್ತದೆ ! ಮರುದಿನ ಪಟಾಕಿ ಪೆಟ್ಟಿಗೆಯ ತಳಕ್ಕೆ ಉದುರಿಬಿದ್ದ ಪಟಾಕಿಗಳನ್ನು ಆರಿಸಿ ಸುಟ್ಟು ಪಟಾಕಿ ಬಾಕ್ಸಿಗೂ ಬೆಂಕಿ ಹಚ್ಚಿ ಹ್ಯಾಪ್ ಮೋರೆ ಹೊತ್ತು ಮನೆಗೆ ಬರುವಾಗ ಮಕ್ಕಳ ಮುಖದಲ್ಲಿ ಹಬ್ಬದ ಮುಂಚೆ ಅನುಭವಿಸಿದ ಆ ಸಂಭ್ರಮ, ಸಡಗರದ ಲವಲೇಶವೂ ಇರುವುದಿಲ್ಲ. ಅಲ್ಲದೇ ಈ ಹಬ್ಬಕ್ಕೆ ಇನ್ನೂ ಒಂದು ವರ್ಷ ಕಾಯಬೇಕಲ್ಲಾ ಎನ್ನುವ ವಿಷಾದ ಭಾವ ತುಂಬಿರುತ್ತದೆ. ಒಟ್ಟಿನಲ್ಲಿ ಹಬ್ಬದ ಮುಂಚಿನ ಸಂಭ್ರಮ ಸಡಗರ ಹಬ್ಬಕ್ಕಾಗಲಿ, ಹಬ್ಬದ ನಂತರದ ದಿನಗಳಿಗಾಗಲಿ ಇರುವುದಿಲ್ಲ , ಅಲ್ಲವೆ?

ನಮ್ಮ ಆತ್ಮೀಯರು ನಮ್ಮಲ್ಲಿ ಬರುತ್ತಾರೆಂದರೂ ಅಷ್ಟೇ ಅಥವಾ ನಾವೇ ಅವರಲ್ಲಿ ಹೋಗುತ್ತೇವೆಂದರೂ ಅಷ್ಟೇ. ಅವರು ಬಂದ ನಂತರ ಅಥವಾ ನಾವಲ್ಲಿ ಹೋದ ನಂತರ ಪಡೆಯುವ ಸಂಭ್ರಮವನ್ನೂ ನಾವು ಮೊದಲೇ ಅನುಭವಿಸಿರುತ್ತೇವೆ.

ನನ್ನ ಅಕ್ಕನ ಮಗಳು ಚಿಕ್ಕವಳಿರುವಾಗಿನ ಘಟನೆ ನೆನಪಾಗುತ್ತದೆ. ಒಂದು ಸಿನಿಮಾಕ್ಕೆ ಹೋಗುವುದಿರಲಿ, ಬಸ್ಸಿನಲ್ಲಿ ಪ್ರಯಾಣಿಸುವುದಿರಲಿ... ಆಕೆಗೆ ಮೊದಲೇ ಗೊತ್ತಾಗಿಬಿಟ್ಟರೆ..... ಹಕ್ಕಿಯಂತೆ ಹಾರಾಡುತ್ತ ಅದೆಷ್ಟು ಸಂಭ್ರಮಿಸುತ್ತಿದ್ದಳು ? ಅವಳ ಆ ಸಂಭ್ರಮ ನೋಡುವುದೇ ಚೆಂದವಾಗಿತ್ತು. ನಂತರ ಬಸ್ಸಿನಲ್ಲಿ ಅವಳಿಗಿಷ್ಟವಾದ ಕಿಡಕಿಯಂಚಿನ ಜಾಗ ಸಿಗದೆ, ಬಸ್ಸಿನಲ್ಲಿ ಜನರ ಒತ್ತಡದಲ್ಲಿ ಬೆವರು ಹರಿಸುತ್ತಾ ಚಟ್ನಿಯಾಗುವಾಗ ಅಥವಾ ಹೋಗಬೇಕೆಂದಿದ್ದ ಸಿನಿಮಾಕ್ಕೆ ಹೋಗಲಾಗದಿದ್ದರೆ.... ಆ ಪ್ರಶ್ನೆ ಬೇರೆಯದು. ಅಂದರೆ ಆಕೆ ಮಾತ್ರ ಮೊದಲೇ ಸಂಭ್ರಮದ ಸುಖವನ್ನು ಅನುಭವಿಸುತ್ತಿದ್ದಳು. ನಂತರ ಆ ಸುಖ ಸಿಗಲಾಗದ್ದು. ನನ್ನ ಭಾವ ಮಗಳ ಅತಿ ಸಂಭ್ರಮ ಪಡುವ ಮನೋಭಾವ ಕಂಡು ಎಲ್ಲಾದರೂ ಹೊರಗಡೆ ಹೋಗಬೇಕಿದ್ದ ವಿಷಯವನ್ನು ಗುಟ್ಟಾಗಿಡಲು ಹೇಳುತ್ತಿದ್ದರೂ ನಾನು ಗುಟ್ಟಾಗಿಯೇ ಆಕೆಗೆ ಹೇಳಿಬಿಡುತ್ತಿದ್ದೆ ಮತ್ತು ಆಕೆಯ ಆ ಸಂಭ್ರಮವನ್ನು ನೋಡಿ ಸುಖಿಸುತ್ತಿದ್ದೆ. ಆ ಸುಖವೇ ಬೇರೆ.

ಕರಾವಳಿಯವಳಾದ ನನಗೆ ಆಣೆಕಲ್ಲಿನ ಮಳೆಯೆಂದರೆ ಪುಸ್ತಕದಲ್ಲಿ ಓದಿ ಮಾತ್ರ ಗೊತ್ತಿತ್ತು. ನೋಡಿ ಗೊತ್ತಿರಲಿಲ್ಲ. ಚಿಕ್ಕಮಗಳೂರಿಗೆ ಬಂದ ನಂತರವೇ ನಾನು ಆಣೆಕಲ್ಲಿನ ಮಳೆಯ ಸೊಬಗನ್ನು ಕಂಡಿದ್ದು. ಅನುಭವಿಸಿದ್ದು. ಈಗ ಪ್ರತಿವರ್ಷದ ಮಳೆಗಾಲದ ಆರಂಭದ ಮೋಡ ಕವಿಯತೊಡಗಿತೆಂದರೆ ಮನಸ್ಸು ಆಣೆಕಲ್ಲಿನ ಮಳೆಯ ಸಂಭ್ರಮವನ್ನೂ ಸವಿಯತೊಡಗುತ್ತದೆ. ಇಂದು ಆಣೆಕಲ್ಲಿನ ಮಳೆ ಖಂಡಿತ ಬೀಳುತ್ತದೆ ಎಂದು ಮನಸ್ಸು ನಿರ್ಧರಿಸಿ ಹಿಂದೆ ಕಂಡ ಆಣೆಕಲ್ಲಿನ ಮಳೆಯ ಸೊಬಗನ್ನು ಕಣ್ಮುಂದೆ ಕಟ್ಟಿಸುತ್ತದೆ. ಆದರೆ ಎಷ್ಟೋ ಸಲ ಅಂತ ಮಳೆ ಬೀಳುವುದೇ ಇಲ್ಲ ಅಥವಾ ಒಂದೆರಡು ಮಂಜುಗಡ್ಡೆ ಬಿದ್ದಂತಾಗಿ ನಂತರ ಬರೇ ಮಳೆಯೇ ಬೀಳುವುದೂ ಉಂಟು. ಆದರೂ ಒಮ್ಮೊಮ್ಮೆ ಪಟಪಟ ಅಂತ ಭರ್ಜರಿ ಆಣೆಕಲ್ಲು ಸುರಿದು ಹೂಗಿಡ, ಹುಲ್ಲುಹಾಸು, ಗಾರೆ-ಹಂಚಿನ ಮೇಲೆ, ಚರಂಡಿಯಲ್ಲಿ , ರಸ್ತೆಯಲ್ಲಿ ಆಣೆಕಲ್ಲು ಬಿದ್ದು ಹೊರಳಾಡಿ ನನ್ನಂಥವರಿಗೆ ಸುಖ ನೀಡಿ ಕರಗುವುದೂ ಉಂಟು.

ಒಟ್ಟಿನಲ್ಲಿ ಮೊದಲೇ ಸಂಭ್ರಮಿಸಿ ಸುಖಿಸುವುದರಲ್ಲಿಯೂ ಒಂಥರಾ ಗಮ್ಮತ್ತಿದೆ. ಅಲ್ಲವೇ ?

**ಜಯಾ [illegible] ಶಿರಾಲಿ**
೧೨೦, ಎಂ.ಐ.ಜಿ. ೧, ಕೆ.ಹೆಚ್.ಬಿ. ಕಾಲೊನಿ, ಜ್ಯೋತಿನಗರ ಅಂಚೆ
ಚಿಕ್ಕಮಗಳೂರು - ೫೭೭ ೧೦೨

ನಮ್ಮೂರಾಗ ಒಬ್ಬ ಮುದ್ಕಿದ್ದ. ಕತಿ ಹೇಳುಕ ಭಾಳ್ ಚತುರಿದ್ದ. ಸುತ್ತ ಬಾರಾ ಹಳ್ಳಿಗ ಪರಿಸಿದ್ದ. ಊರಾಗ ಯಾರರೆ ಸತ್ರ, ಕೆಟ್ರ, ಯಾರಿಗರೆ ಹುಳಾ ಮುಟ್ಟಿದ್ರ, ಜಡ್ಡ ಜಾಪತ್ರ ಬಂದ್ರ, ರಾತ್ರಿ ಜಾಗರಾಣ ಮಾಡುಕ, ಜನಾ ಮುದ್ಕಗ ಕರ್ತಂದು ಕತಿ ಹೇಳ್ಸುತಿದ್ರು. ಅಂವ ಕತಿ ಹೇಳುಕ ಕುಂತಂದ್ರ ಒಂದ ಸಣ್ ಸೂಚಿ ಬಿದ್ರು ಸಪ್ಪಳಾಗ್ತಿತ್ತು. ಹೆಣಾ ಸಯಿತ ಕಿಂವಿಗೊಟ್ಟು ಕೇಳ್ತಿತ್ತು. ಕಿಸ್ಟಣ್ ಪರಮಾತ್ಮಾ ಚಕ್ರಯುದ್ದದ್ ಕತಿ ಹೇಳಾಗ ಸುಭದ್ರಬಾಯಿ ಹ್ವಟ್ಯಾಗಿದ್ದ ಅಭಿಮನ್ಯು 'ಹೂಂ' ಅಂದಾಂಗ; ಮುದ್ಕನ ಕತಿ ಕೇಳುಕ್ ಬಂದ್ಕುಂತ ಹ್ವಟ್ಲಿದ್ದ ಹೆಣ್ಮಕ್ಕಳ ಹ್ವಟ್ಯಾನ ಕುಸ್ಗೋಳು ಹೂಂಗುಟ್ತಿದ್ದು. ಇದು ಸುಳ್ಳಂತ ತಿಳ್ಕೊಬ್ಯಾಡ್ರಿ, ಇಚಾರ ಮಾಡೋ ಮಾತದ.

ನಮ್ಮೂರ ಧಣಿ ಸತ್ತಾಗ, ಮನಿಗೊಬ್ಬ ಮನಸ್ಯಾ ಜಾಗರಾಣಿಗ ಬಂದಿದ್ದ. ಅಂಗುಳ್ತುಂಬಾ ಭರ್ಚಕ ಮಂದಿ. ಹೊರ್ಸಿನ ಮ್ಯಾಗ ಚಪ್ಗಾಲ್ ಹಾಕೊಂಡ್ಕುಂತು ಮುದ್ಕ ಕತಿ





ಹೇಳ್ತಿದ್ದ. ಬೆಳ್ಳಂ ಬೆಳ್ತಾನ ಕಣ್ಣಾಗೆಣ್ಣೆ ಹಾಕೊಂಡು ಜನಾ ಕತಿ ಕೇಳ್ತಿತ್ತು. ನಮ್ಮ ಧಣಿ ಸತ್ತಂವ ಸತ್ತಿದ್ದ; ಇಂವ ಇದ್ದವರಿಗ ಜೀಂವಾ ತುಂಬ್ತಿದ್ದಾ.

ಆ ಮುದ್ಕನು ಸತ್ತು ಭಾಳಾ ದಿನಾ ಆಕೋತ ಬಂತು. ಅಂಥ ಕತಿ ಹೇಳ್ವರು ಈಗ ಯಾರುಬಿ ಇಲ್ಲ. ಅಂವ ಹೇಳಿದ ಕತಿಗೋಳು ನಮ್ಮ ತಲ್ಯಾಗ ಹುಳಾಕೊರ್ದಂಗ ಕೊರ್ಯಾಕ ಹತ್ತಾವ, ಏನ್ಯರಿ ಮಾಡಿದ್ರು ಮರಿಲಾರ್ದಂಗಾಗ್ಯಾವ. ಧಣಿ ಸತ್ತಾಗ ನಾ ನಿಮ್ಗ ಹೇಳಿದ ಕತಿ ನರಸತ್ತೌರ್ಮುಂದ ಹೇಳಂತ ಕನ್ಸಿನಾಗ ಬಂದು, ಯದಿಮ್ಯಾಗ ಕುಂತು ಮುದ್ಕ ಕಾಡಾಕ ಹತ್ಯಾನ . ಅದ್ಕ ಕತಿ ಹೇಳ್ತೀನಿ ಕೇಳ್ರಿ. ಇದು ನಿಮ್ಗ ಹಿಡಿಸ್ಲಿಕ್ಕಿಲ್ಲ; ಮುದ್ಕನ ಸಮಾಧಾನ್ಕಾದ್ರು ಹೇಳ್ಬೇಕಾಗ್ಯಾದ.

ಹಿಂಗೋಂದರಾಗ ಒಂದ್ ದನ ಕಾಯಾ ಪಾರಿತ್ತು. ಸಿದ್ದರಾಮಪ್ಪಂತ ಅಂವ್ನ ಹೆಸರ. ದನಾ ಕಾಯ್ವರಿಗ ಇಂಥ ಘೋಲೋ ಹೆಸರ್ನಿಂದ ಯಾರ್ ಕರಿತಾರ ? ಸಿದ್ದ್ಯಾ, ಸಿದ್ದ್ಯಾ ಅಂತ್ಲೆ ಕರ್ತಿದ್ರು. ಭಾಳ್ ವಳ್ಳೇ ಪಾರ. ಹತ್ ಹನ್ನೆಡ್ಡು ವರ್ಷದ್ದಿರ್ಬೇಕು. ಐದಾರ ಮನಿ ಕಾಯ್ಕುಲಿ ಒಡ್ತು ದನಾ ಕಾಯ್ತ್ರು ಹ್ವಟ್ಟಿ ತಿಪ್ಲಿಗ ಒಂದಿಟ್ಟು ಗಳ್ಕಿ ಮಾಡ್ತಿದ್ದ. ಸಿದ್ದ್ಯಾನವ್ವ ಗಂಡ್ಸತ್ತ ರಂಡ್ಮುಂಡಿ; ಅವರಿವುರ್ ಹ್ವಲ್ದಾಗ ಕೂಲಿಪಾಲಿ ಮಾಡಿ ಅಟೀಟು ತರ್ತಿದ್ದಳು. ವಟ್ನಾಗ ಅವ್ವಾ ಮಗ ಛಂದಾಗೆ ಇದ್ರು . ವಂದ್ ಸಣ್ ಮನಿಯಿತ್ತು. ಹ್ವಲಾ ಫಿಲಾ ಇರ್ಲ್ಕಿಲ್ಲ. ಊರಾಗ ಇವರ್ದೊಂದೆ ಮನಿ. ಅಣ್ ತಮ್ಮ ಗಿಣ್ತಮ್ಮಿ

ಡಾ॥ ಪ್ರಭು ಖಾನಾಪುರೆ

ಯಾರಿಲ್ಲ. ಇವ್ರು ಯಲ್ಲಿಯವರೋ ಏನ್ ಸುದ್ದಿ ; ಯಾರಿಗೂ ಗೊತ್ತಿಲ್ಲ. ಇಪ್ಪತ್ತೊರ್ಸಿನ ಹಿಂದ್ ಹ್ವಟ್ಟಿ ಥುಂಬ್ಕೋಳಾಕಂತ ಗಂಡಾ ಹೆಣ್ತಿ ಈ ಊರಿಗ ಬಂದ್ರು. ಬಂದವರೆ ಮತ್ ಮರ್ಳಿ ತಮ್ಮೂರಿಗ ಹೋಗ್ಲೇ ಇಲ್ಲ. ಊರಾನ ಜನಾ ಇವರಿಗ ಘೂಳೆಕಾರಂತೆ ಕರಿತಾರ.

ಸಿದ್ದ್ಯಾಗ ನಾಕ್ಮಂದಿ ಗೆಳ್ಯಾರು. ಎಲ್ಲ್ರು ಒಂದೆ ಕಡಿ ದನಾ ಮೇಸ್ತಿದ್ರು. ಗುಡ್ಡದ್ ವಾರ್ಯಾಗ ಒಂದ್ ದೊಡ್ಡ ಗೈರಾಣ. ದನಾ ತಂದ್ ಈ ಗೈರಾಣ್ದಾಗ ಬಿಟ್ಟು, ಮದ್ದ್ಯಾಣ್ದಾಗ ಚಂಡಾ, ಚಿಣದಾಂಡಾ, ಧಪ್ಪನದ್ದುಪ್ಪಿ, ಗೋಟಿ, ಕಾಡ್ಗಲ್ಲ, ಕುಸ್ತಿ, ಕುಂಟಲ್ಪಿ, ಮುಟ್ಟಾಟ, ಭೌರಿ, ಒಂದಾಗಾನೊಂದು ಆಟ ಆಡ್ಕೋತ ಇರ್ತಿದ್ರು. ದ್ಯಾವ್ರು ಸಿದ್ದ್ಯಾಗ ಯಲ್ಲಿದ್ ತಾಕತ್ ಕೊಟ್ಟಿದ್ನೋ ಯಾನೋ, ಯಲ್ಲಾದ್ರಾಗ ಅವ್ನೆ ಮುಂದಿದ್ದ. ಆದ್ರ ಬಡ್ತಾನಂದ್ರ, ಬಡ್ತಾನ. ಯೇಸೋ ಧಿನಾ ಮದ್ದ್ಯಾಣ ಕೂಳಿಗ್ ಗತಿಯಿಲ್ದೆ ಉಪಾಸಿರ್ತಿದ್ದ. ಗೆಳ್ಯಾರು ಕೊಟ್ಟ ತುತ್ತಾ ಬತ್ತಾ ರೊಟ್ಟಿ ತಿಂದು ಧಿನಾ ಧಕ್ಲಾಸ್ತಿದ್ದ. ಒಂದುಪಾಸ ಯಡ್ಡುಪಾಸ ಬಿದ್ದು ಸ್ವರ್ಗಿ ಖಡ್ಯಾಗಿದ್ದ. ಔಗ ಜಡಾಗಿಡಾ ಬಂದ್ರ, ಅಂದ ಉಪಾಸೆ ಗತಿ. ಅಲ್ಲೆ ಅಡವ್ಯಾಗ ಕಾರಿಕಾಯಿ, ಬಾರಿಕಾಯಿ, ಹುಲಿಕಾಯಿ, ಕಾಮುಣಕಾಯಿ, ಹರ್ಗೆನ್ಹಣ್ಣ ಒಂದಲ್ಲ ಹತ್ತಾರ ನಮನಿ ಹಣ್ ತಿಂತ್ತಿದ್ದ. ಇಲ್ದಿದ್ರ ಮಗ್ಗುಲ ಹ್ವಲ್ದಾಂದು ಹೆಸರ್ಕಾಯಿ, ಉದ್ದಿನ ಕಾಯಿ, ಶೇಂಗಾ ಪಿಂಗಾ ಹರ್ಕೊಂಡು ತಂದು ಬಾಯಾಡಿಸ್ತಿದ್ದ. ಒಂದೊಂದಿನ ಯಾನು ಇಲ್ದೆ ಹ್ವಟ್ಟಿಗ ಬಟ್ಟಿ ಕಟ್ಗೊಂಡು ತಣ್ಣೀರ ಕುಡ್ದು ಥಂಡಗಿರ್ತಿದ್ದ.

ಸಿದ್ದ್ಯಾ ಅಂದ್ರ ಸಿದ್ದ್ಯಾನೆ. ಅವುಂದೊಂದು ಲೋಕಾನೆ ಬ್ಯಾರೆ. ತಾ ಕಾಯಾ ದನಗೋಳಿಗ ಒಂದೊಂದ ಹೆಸರ್ಟ್ಟಿದ್ದಾ. ಪಿರ್ತಿಯಿಂದ ಮೈ ತಿಕ್ಕಿ ನಕ್ರಿ ಮಾಡ್ತಿದ್ದ. ತನ್ ದುಕ್ ಅವುದುರ್ಮುಂದ ತೋಡ್ಕೊಂಡು, ಕೊಳ್ಳಿಗ ಬಿದ್ದು ಬಿಕ್ಕಿ ಬಿಕ್ಕಿ ಅಳ್ತಿದ್ದ. ಖರೆವಂದ್ರ ಅವ್ನಿಗ ಮನಸ್ಯಾರ್ಕಿಂತ ದನ ಗೋಳೆ ಭಾಳ್ ಸನ್ಯಾಕ್ಕಿದ್ದು. ಕರ್ಗೋಳಿಗ ಮಾತ್ ಕಲ್ಸಿದ್ದ. ಅಂವ್ ಕೂಡಂದ್ರ ಕೂಡ್ತಿದ್ವು ಏಳಂದ್ರ ಏಳ್ತಿದ್ದು. ಯಮ್ಮಿ ಖೋಡಿಗ ರೊಟ್ಟಿ ಬುತ್ತಿ ಕಟ್ಟಿ, ಆದ್ರ ಡುಬ್ಬದ್ ಮ್ಯಾಲ ಕುಂತು 'ಇನ್ನು ಯಾಕ್ ಬರ್ಲಿಲ್ಲವ್ವಾ ಹುಬ್ಬಾಳಿಯಾಂವಾ' ಅಂತಾ ಖುಸಿಲಿಂದ ಹಾಡ ಹೇಳ್ತಿದ್ದ. ಯಮ್ಮಿ ಬೆನ್ನಿನ ಮ್ಯಾಗ ನಿಂತು, ಕುಣ್ದು ತನ್ನ ವಡಲಕಿಡಿವುರಿಗೆ ಹುಡಿಯೊಗೆಯುತ್ತಿದ್ದ.

ದನಾ ಕಾಯಾ ಪಾರ್ಗೋಳ ಮಾತ್, ಆಡೋ ಆಟ; ಮಾಡೋ ಕೆಲ್ಸ ಭಾಳ್ ನಿಗೂಢ. ಔರೌರ ಬುದ್ಧಿ ಮನಸ್ಸಿಗ ಮೀರಿದ್ದು. ಬ್ಯಾಸಗ್ಯಾಗ ದನಾ ನೀರಿಗೋಯ್ದು ಹಳ್ದಾಗ ಹೊಡ್ದು ದಂಡಿ ಮ್ಯಾಗ ಕುಂತು ರೊಟ್ಟಿ ಉಂತಿದ್ದು. ಉಣಾಕಿತ ಮೊದ್ಲ ವಂದ್ ತುತ್ತು ಮುರ್ದು ನೀರಾಗ ಭೀಟಿ ದಿಟ್ಟಿಸಿ ನೋಡ್ತಾ 'ನಮ್ಮೌಗ ಹಸು ಆಗ್ಯಾದಾ ಇಲ್ಲ ಮತ್ತೊಂದು ತುತ್ ಭೀಟಿ ನಮ್ಮಪ್ಪುಗ ಹಸು ಆಗ್ಯಾದಾ ಇಲ್ಲ ಅಂತ ದ್ಯಾವ್ರಿಗ ಕೇಳ್ತಿದ್ರು. ಅದು ಮುಳಗಿದ್ರ ಹಸುವಾಗ್ಯಾದಂತ, ತೇಲಿದ್ರ ಹಸು ಆಗಿಲ್ಲ ಅಂತ ಲೆಕ್ಕ. ಹೀಂಗೆ ಅಣ್ ತಮ್ಮದ್ಯಾರ ಹೆಸರ್, ಅಕ್ತಂಗ್ಯಾರ ಹೆಸರ್ ನೆನಪಿಸಿ ತಮ್ಮ ಕಳ್ಳು ಬಳ್ಳಿಯ ಹಸಿವಿನ ಬಗೆಗೆ ತಿಳ್ಕೋತಿದ್ರು. ಸಿದ್ದುಗೆ ತನ್ನ ಔನ ಹಸಿವಿನ ಬಗ್ಗೆ ಭಾಳ್ ಚಿಂತಿ. ತುತ್ತ ಮುಳಗಿದ್ರ ಅವ್ನಿಗ ರೊಟ್ಟಿ ಗಂಟ್ನಾಗ ಇಳ್ತಿರ್ಲಿಲ್ಲ.

ನೀರಾಗ ಬಿದ್ದ ರೊಟ್ಟಿ ತುಣಕಿಗ ಮೀಣಗೋಳು ಬಂದು ಮುಕುರ್ತಿದು. ವಂದ ತುಣಕಿಗ ಪನ್ನಾಸ್ ಮೀಣಾ ನೆರ್ದು ಒಂದುಮ್ಯಾಲೊಂದು ಬಿದ್ದು ಬಡ್ದಾಡ್ತಿದ್ದು. ತುತ್ ಯಾವುಕ್ ಸಿಗದೆ ನೀರಾಗ ಮುಳುಗಿ ಅದು ಪಾತಾಳ ಕಾಣ್ತಿತ್ತು. ಈ ಪಾರಗೋಳು ನೀರಾಗ ವಗ್ದ ತುತ್ ಎಂದೂ ತೇಲ್ತಾನೇ ಇರ್ಲಿಲ್ಲ.

ಉಂಡುದ್ದೆ ತಡ ಯಲ್ಲ್ರು ಧಡಾ ಧಡಾ ನೀರಾಗ ಹಾರಿ, ತಾಸ್‌ಗಟ್ಲೆ ಇಸ್ಯಾಡಿ, ವಬ್ರಿಗೊಬ್ರು ಮಾರಿಗ ನೀರಹ್ವಡ್ದು; ಮುಟ್ಟಾಟಾಡಿ ಹ್ವತ್ತ ಹ್ವಳ್ದೂದ್ ಮ್ಯಾಲ ದನಾ ಹ್ವಡ್ದ ವ್ಯಾರ್ಯಾಗ ತಂದು ಹಾಕಿ ಮಗ್ಗುಲು ಹ್ವಲ್ದಾನ ಬೆಳಿ ತಿನಬಾರ್ದಂದು ದಿಕ್ಕಿಗೊಬ್ರು ನಿಂತು ದನಾ ಕಾಯಿತಾರ. ಸಿದ್ದುನ ತಿಳ್ವಳ್ಕಿ ಅವ ಬುದ್ದಿಗ ಮೀರಿದ್ದು. ತನ್ ಔಂಸುರ

ಯಾರ್ಮುಂದು ತುಟಿ ಬಿಚ್ಚಿಲ್ಲ. ಒಬ್ನೆ ಕುಂತು ಕಣ್ಣೀರ ಹಾಕ್ತಾನ. ಬಡ್ವುನ ಸಿಟ್ಟ್ ದೌಡಿಗ ಮೂಲಂತಾರಲ್ಲ; ಸಿದ್ದುನ ಸಿಟ್ಟ ದನಕ ಮೂಲ. ದನಾ ಹ್ವಲ್ದಾಗ ಹ್ವಕ್ಕಾಗ, ಬೆಳ್ತಿಂದು ನಾಸ್ ಮಾಡ್ದಾಗ ಹ್ವಲ್ದವರು ಬಂದ ನಾಕ್ ಭಾರ್ಸಿದುಂಟು. ಇವ್ನ ಮೆತ್ಯಾನ ಸಬಾಬಕ ಪಾರಗೋಳು ನಕ್ರಿ ಮಾಡ್ತಾ ಅದ್ಕಿದ್ದಕಂತ ಝುಗಳ ತಗ್ದು ಸಿದ್ಯಾಗ ಹ್ವಡ್ದುದ್ದು ಲೆಕ್ಕಿಲ್ಲದಷ್ಟು, ಪಾಲಿಗ ಬಂದದ್ದು ಪಂಚಾಮೃತಲ್ಲ ? ಹ್ವಡದೌರ್ ಕೈಲಿ ಹ್ವಡ್ಸಗೊಂಡು ಬಡಿದೌರು ಕೈಲಿ ಬಡ್ಸಿಗೊಂಡು ಬಿಕ್ಕಿ ಬಿಕ್ಕಿ ಅಳ್ತಿದ್ದ. ಅದೇ ಸಿಟ್ನಾಗ ವಂದ್ ಲಕ್ಕಿ ಫೋಕ್ ಮುರ್ಕೊಂಡು ತಾ ಧಿನಾ ಡುಬ್ಬುದ್ ಮ್ಯಾಲ ಕುಂತು ಬರ್ತಿದ್ನಲ್ಲ ಆ ಯಮ್ಮಿಗ ವಂದೇ ಸವ್ನೆ ಹ್ವಡಿತಿದ್ದ. ಸಿಟ್ಟ ಸೆಮನ್ಗಾತನ ಬೆನ್ನಹತ್ತಿ ಹ್ವಡ್ದೆಹ್ವಡ್ತಿದ್ದ. ಹುಚ್ಚ್ ಹಿಡ್ದಂಗ ಕೆಟ್ಟ ಬೈಗಳ್ ಕಾರ್ತಿದ್ದ. ಹ್ವಡ್ದು ಹ್ವಡ್ದು ಮೈಯಾನ್ ಸೆಗತಿ ಮುಗಿದ ಮ್ಯಾಲ ನೆಲ್ದ ಮ್ಯಾಗ ಅಂಗಾತ್ ಬಿದ್ದು ಮುಗುಲ ನೋಡ್ತಿದ್ದ. ಸಿಟ್ಟಿಳಿದ ವಂದೇ ಕ್ಷಣ್ದಾಗ ಯಮ್ಮಿ ಹತ್ರ ಹೋಗಿ ಕಾಳಜ್ಲಿಂದ ಬೆನ್ನ ಮ್ಯಾಗ ಛಪ್ಪುಡಿ 'ಹ್ವಡ್ದದ್ದು ಬ್ಯಾನೈತ್ತಲ್ಲ; ಯಾನ್ ಮಾಡ್ಲಿ ನನ್ನ ಸಿಟ್ಟ ಭಾಳ್ ಖೋಡೆದ' ಎಂದು ಮೈ ತಿಕ್ಕಿ ಅದರ್ ಮುಖಕ್ ಮುದ್ದಕೊಟ್ಟು, ಹುಲ್ ಹಚ್ಚಗಿದ್ದಲ್ಲಿ ವೈಯ್ದ ಮುಂದ್ನಿಂತು ಮೇಸ್ತಿದ್ದ. ಬೆಳ್ಯಾನ ಹುಲ್ ಕಿತ್ತಿ ತಂದು ತಿನಿಸ್ತಿದ್ದ. ಯಮ್ಮಿ ಗಪಾಗಪಾ ಹುಲ್ ತಿನ್ನಾದ್ನೋಡಿ ಖುಸಿಗೊಂಡು ಕಣ್ಣಾಗ್ ನೀರ್ ತರ್ತಿದ್ದ.

ಸಿದ್ದುನವ್ವ ಭಾಳ್ ಘಸ್ಮುರಾಳ. ಧಿನಾ ಕೆಲ್ಸಾ ಸಿಕ್ರ ಹ್ವಟ್ಟೆ ಚಿಂತಿಯಿರ್ತಿರಲಿಲ್ಲ. ಮಳ್ಗಾಲ್ದಾಗ, ಜಡಾಗಿಡಾ ಬಂದಾಗ ಹೈರಾಣ ಗತಿ ಆಗ್ತಿತ್ತು. ದುಡ್ದೆ ಹ್ವಟ್ಟೆ ಥುಂಬಾ ಕೂಳ ಸಿಗ್ತಿರ್ಲಿಲ್ಲ; ಇನ್ ಮನ್ಯಾಗ ಕುಂತ್ರ ಯಲ್ಲಿಂದ ತಂದ್ ತಿನ್ಬೇಕು. ನೀರ್ ಕುಡ್ದು ಮಲ್ಗಬೇಕಷ್ಟೇ ?

ವಂದ್ ಸರ್ತಿ ಭಾಳ್ ತ್ರಾಸೈತು. ಸಿದ್ದುನೌವ್ವಗ ಜಡಾಂದ್ರ ಜಡಾ. ವಾರ್ಗಟ್ಲೆ ನೆಲಾ ಬಿಟ್ಟಿಯೇಳಿಲ್ಲ. ತನ್ ಸಂಕ್ಟಾ ಯಾರ್ಮುಂದ ಹೇಳ್ಬೇಕು. ತನ್ನೌವರು ಅನ್ನೌವರ್ ಯಾರಿಲ್ಲ ಊರಾಗ. 'ದ್ಯಾವ್ರನೂ ಬಡುಗಿರ ದೌಡ ಸಾವ್ ಕೊಡ್ವಂಗಿಲ್'. ಕಾಯ್ಕುಲಿ ರೊಕ್ಕ ತಿಂಗಳ್ಮುಗಿದ್ಯಾಲೆ ಕೊಡ್ತಾರ. ಉಪವಾಸ ಬಿದ್ದು ರಾಟ ಬಿದ್ದಿತ್ತಾದ್ರು, ವಂದಿನಾ ಯಡ್ಡಧಿನಾ ನಡಿತಾದ್ ವಾರ್ಗಟ್ಲೆ ಹ್ಯಾಂಗ ಉಪಾಸಿಲ್ರ್ಬಕ್ ಆಗ್ತಾದ. ಜಗ್ಗಾದಗಿರ್ಲಾರ್ದು ಔಂಸ್ರ ಸಿದ್ದುಂದು. ಯಾರ್ಮುಂದ ಹೇಳಾಂಗು ಇರ್ಲಿಲ್ಲ. ಹೇಳಿದ್ರು ಯಾನ್ ಆಗಾಂಗೂ ಇರ್ಲಿಲ್ಲ.

ಪಾರ್ಗೋಳ್ದು ಆಟಂದ್ರ ಆಟ. ಅದರಾಗೇನರ್ಥಿಲ್ಲನ ಬ್ಯಾಡ್ರಿ. ಹಿಂದಿನ್ ಮುಂದಿನ ದಿನಗಳೆಲ್ಲ ನುಂಗ್ಕೊಂಡಿರ್ತಾವ. ಗೊತ್ತಾಗ್ಲಾರ್ದಂಗ ತೇಲ್ಕೋತ ಬಂದು ಧತ್ತೆಂದು ಮುಂದ್ಬಂದ ನಿಂದುರ್ತಾವ. ವಮ್ಮೊಮ್ಮೆ ಅಂಗೈದಾಗೆ ಬಂದ್ಕುಣಿತಾವ. ದನಾ ಕಾಯ್ವರ್ಬಲ್ಲೇನ್ಬುದ್ದಿರ್ತಾದ ದನಗೋಳಕಿತಾ ಅತ್ತಾರ್ರಿರ್ತಾವ ಅಂಬೋದು ರೂಢಿ ಮಾತಾದ. ಪಾರಗೋಳ ಲೆಕ್ಕಾನೆ ಬ್ಯಾರೆ, ಮನ್ಸಿಗ ಬಂದುದೇ ಮಾಡ್ತಾವ. ಕೆಲ್ಸಗ ಬರ್ಲಾದು ಆಡ್ತಾವ. ಮಳಿ ಬಂದು ನೆಲಾ ಹಸಿ ಐತಂದ್ರ ನೀರಿನಗೋಟ ಹರ್ದು ನಿಂತ್ ಮಣ್ಣಿನ ಹ್ವಂಡ್ದಾಗ ಆಟಾ ಸುರ್ವೆ ಆಯ್ತು. ಅಂಗಾಲ ನೆಲ್ದ ಮ್ಯಾಗಿಟ್ಟು, ತೊಯ್ದ ಮಣ್ಣ ಕಾಲ್ಮ್ಯಾಗ ಹಾಕಿ, ಧಬಾಧಬಾ ಅಂತ ಅಂಗೈಲಿ ಬಡ್ದು ಗಟ್ಟಿ ಮಾಡ್ತಾವ. ''ಗುಬ್ಬೆವ ಗುಬ್ಬೆವ ನಿನ್ ಗಂಡ ಬಂದಾನ ಬಾಗುಲ್ ತೆರಿ'' ಅಂತ್ ಅನಾಮತಾಗಿ ಕಾಲ ಹ್ವರ್ಗ ತಗ್ದು ಗುಬ್ಬಿ ಮನಿ ಕಟ್ಟತ್ತಾರ. ಮನಿ ಮುಂದೊಂದ ತ್ವಾಟ್, ತ್ವಾಟದಾಗೊಂದು ಭಾಂಯಿ ಹ್ವಡ್ದು, ಮಡಿ ಮಾಡಿ, ಹರ್ಗಿ ಬಿತ್ತಿ ಭಾಂಯಾನ ನೀರ ಬೆಳಿಗ ಬಿಟ್ಟು, ಬೆಳಿ ಕೊಯ್ದು ರಾಶಿ ಮಾಡ್ತಾವ. ಆಟಾ ಮುಗಿದ ಮ್ಯಾಲ ''ಕಳ್ಳರ ಬಂದ್ರು ಹ್ವಲಾ ಮನಿ ಹಾಳ್ ಮಾಡಿ ಎಲ್ಲಾ ಕದ್ದುಕೊಂಡು ವಯ್ದ್ರು''ಯಂದು ತಾವ ಮಾಡಿದ್ದು ತಾವೆ ತುಳ್ದು ಕೆಡ್ಸಿ ಹೋಗ್ತಾವ, 'ಆಡಂಬಾ ಕಿಡ್ಸಂಬಾ' ಅನಕೋತ ಕುಣಿತಾವ.

ಸಿದ್ದಾ ಯಂಟ್ ಧಿನ ಐತು ಆಟಾನೇ ಆಡಿಲ್ಲ. ಹ್ವಡ್ತುಂಬಾನು ವುಂಡಿದ್ದಿಲ್ಲ. ಯೇಸ್ ಧಿನಾ ಗೆಳ್ಯಾರ್ ಕೊಟ್ಟುದ್ದು ತಿನ್ಬೇಕಂತ, ಅಂದ್ ಬ್ಯಾರೆ ಸಿವಾರ್ಕ ದನಾ ವೈಯ್ದು. ಯಾರ್ಜತಿಗೂ ಸೇರ್ದೆ, ವಂಟೇ ದನಾ ಮೇಯಿಸ್ತಿದ್ದ. ಹಸ್ವಿಗೇನ ಸಮಾಧಾನ ಹೇಳ್ಬೇಕು. ವಂಬತ್ತಸಿ ಯಾಳಿ ಹ್ವಟ್ಟೆ ತಾಳ್ಹಾಕಿತ್ತು. ಕಣ್ಣಗ ಕತ್ಲ ಕವಿದಾಂಗ, ಹ್ವಟ್ಯಾಗ ಕಸಬಿಸಿ ಆದಂಗ ಸಿದ್ಯಾನ ಬುದ್ದಿ, ಮನಸ್ ಅಂವ್ನ ಕೈ ಮೀರಿ ನಡ್ದು. ಮಗ್ಗುಲ್ದಾಗೆ ಗೌಡ್ರ ಹ್ವಲಾ ಇತ್ತು. ಭರ್ಚಕ್ ಸೇಂಗಾ ಬೆಳ್ದು ನಿಂತಿತ್ತು. ಸುತ್ತಾ ಜಬರ್ದಸ್ತ ಬೇಲಿ ಹಾಕಿದ್ರು. ಅದು ಸಿದ್ದ್ಯಾ ತಲಿಸೌನ್ ಯತ್ತರಿತ್ತು. ಒಳ್ಗ ಹೋಗಿ ಸೇಂಗಾ ತಿನ್ಬೇಕಂದ್ರ ಯಲ್ಲಿನು ಸಂದಿರ್ಲಿಲ್ಲ. ಬೇಲಿ ಕಿತ್ತಿ ಹೋಗ್ಬೇಕಂದ್ರ ಸಾದ್ದಿಲ್ಲಾರ್ದ ಮಾತ. 'ನಾ ಇಲಾಜಕ ಕ್ಯಾ ಇಲಾಜ' ಸುಮ್ನೆ ಕುಂತ. ಹ್ವಟ್ಟೆ ಸುಮ್ಕೊಡ್ಬೇಕ್ಲ ? ಆ ಕಡಿ ಈ ಕಡಿ ಜರಾ ತಿರ್ಗ್ಯಾಡಿ ನೋಡ್ದ. ಬೇಲಿ ಕೆಳ್ಯಾಕ್ ಇದ್ದಲ್ಲಿ, ದೂರ್‌ದಿಂದ ವೋಡಿ ಬಂದು ಸಟ್ನೆ ಜಿಗ್ದ. ಆಚೆಕಡಿ ಹಾರಿ ಸೇಂಗಾ ಕಿತುಕ್ ಹತ್ತಿದ. ಒಂದ್ನಾಕ್ ಬೆಳ್ಳಿ ಕಿತ್ತಿ ಸೇಂಗಾ ಕಡ್ದು ಕಿಸ್ಯಾಕ್ ತುಂಬ್ಕೊಂಡ. ಮತ್ ನಾಕ್ ಬೆಳ್ಳಿ ಕಿತ್ತಿ ಕೈಯಾಗ ಹಿಡ್ದು ಸಿದ್ದ್ಯಾ ಬೇಲಿ ಹಾರ್ಬೇಕ್ಕನ್ನುವಟ್ಟರಲ್ಲಿ ಧುತ್ತಂತ್ತ ಗೌಡ್ರ ಆಳ್ಮಗ ಮುಂದ್ ಬಂದ್ನಿಂತ. ಕುತ್ತಿಗ ಚಂಡಿ ಹಿಡ್ದು ನಾಕ್ ಬಡ್ದ. ಸಿದ್ದ್ಯಾನ ಹರ್ಕಂಗಿಗ ಭೋಲೋ ಕಿಸ್ಯಾಯಲ್ಲಿಂದ ಬರ್ಬೇಕು ? ಕಡ್ದು ಕಿಸ್ಯಾಕ್ ತುರ್ಕಿದ ಸೇಂಗಾ ಹ್ವಲ್ದಾಗೆ ಬಿದ್ದಿದ್ದು. ಗೌಡ್ರ ಆಳ್ಮಗಂದ್ರ ಕೇಳ್ಬೇಕಾ ? ಗೌಡುನ್ ಕಿತಾ ಅಬ್ಬರ ಜಾಸ್ತಿ. ಮನ್ಸಿಗ ಬಂದಾಟು ಹ್ವಡ್ದ. ಸಿದ್ದ್ಯಾ ಕಾಲಿಡಿದು ಪರಿಪರಿಯಾಗಿ ಬೇಡ್ಕೊಂಡ. ಸೇಂಗಾ ಕಿತ್ತಿದು ತಪ್ಪಾಗ್ಯಾದ ಹ್ವಡಿಬ್ಯಾಡ್ರೆಂದು ಅಂಗ್ಲಾಚಿದ. 'ನಾಕ್ ಧಿನಾಯ್ತು ಹ್ವಟ್ಟೆಗ ಯಾನು ತಿಂದಿಲ್ಲ ಹಸು ತಾಳ್ಲಾರ್ದಕ ಹೀಂಗ ಮಾಡಿನಿ. ಕೈಜೋಡ್ಸಿ ಕಾಲಿಗ್ಬೀಳ್ತಿನಿ ಹ್ವಡಿಬ್ಯಾಡ್ರಿ' ಅಂತ್ ಹಕ್ಕ್ಯಾಗಿ ಹಲ್ಬದಾ. ಗೌಡುನ ಆಳ್ಮಗನಿಗ ಕರುಣಾ ಬರ್ಲಿಲ್ಲ. 'ಮಗನ ಇದು ಗೌಡ್ರು ಹ್ವಲ. ಗೌಡ್ರ ಹ್ವಲ್ದಾಂದು ಸೇಂಗಾ ಕದಿತಿ ಮಗ್ನ, ನಿನ್ನ ಹೀಂಗೆ ಬಿಟ್ರ ನಡ್ಯಾಲ ಬುದ್ಧಿಗ ಬೆಟ್ಟಿ ಮಾಡ್ಸಬೇಕು' ಎಂದು ದನ್ನ ಬಡ್ದಂಗ ಬಡ್ದಾ. ಅಟ್ಟುಕೆ ಬಿಟ್ಟಿದ್ರ ಭೋಲೋಯಿತ್ತು. ಗೌಡ್ರ ಕೈಲಿಂದ ಶಬ್ಬಾಸ್ ಗಿರಿ ಪಡ್ಕೋಳಕ ಸಿದ್ದ್ಯಾನ ಹಿಡ್ಕೊಂಡು ಪಂಚಾತಿ ಕಟ್ಟೆಗ ತಂದ. ಅಗಸಿ ಮುಂದ್ ನೆರ್ದ ಜನಾಯಲ್ಲಾ ಯಾನಾಗ್ಯಾದೆಂದು ವೋಡಿ ಬಂದ್ರು. ಬಂದೌರೆಲ್ಲಾ 'ಗೌಡ್ರ ಹ್ವಲ್ದಾಂದು ಸೇಂಗಾ ಕಿತ್ಯಾನ ಮಗಾ' ಅನಾದು ನಾಕೇಟ ಭಾರ್ಸಾದು. ಹ್ವಡಿಲಾರ್ದವರೆ ಪಾಪಿಗಳು.

ಚೋಟ್ ಹನಾ ಮಗಾ, ಮಾರುದ್ದ ಬೇಲಿ ಹಾರಿ ಸೇಂಗಾ ಕಿತ್ಯಾನ. 'ಕಳ್ಸೂಳಿ ಮಕ್ಕಳಿಗ ಹೀಂಗೆ ಹ್ವಡಿಬೇಕ್, ಸಲ್ದ ಬಿಟ್ರ ಊರೆಲ್ಲ ಸತ್ಯಾನಾಸ ಮಾಡ್ತಾರ; ಕದ್ದು ತಿನಾದು ರಾಟ ಬಿದ್ದಾದ ಕೆಳಜಾತಿ ಮಂದಿಗ; ಗೌಡ್ರ ಹ್ವಲಾನೆ ಸಿಕ್ಕಾದೇನು ? ಈ ಸೂಳಿಮಗ್ನಿಗ; ಕೊಳ್ಕ ದಂಧ್ಯಾ ಮಾಡಾದು ಕುಲ್ದ ಕಸ್ಬಾಗ್ಯಾದ.' ಹೀಂಗ ಹ್ವಡ್ಯಾವರಿಗೆ ಬೆನ್ನ ಛಪ್ಪುಡ್ಸದಂಗ ತಲೆಗೊಬ್ಬಬ್ಬರು ಮಾತಾಡ್ತಿದ್ರು.

ಥೊಡೆ ಮಂದಿ ಗೌಡುನ್ಕಡಿಯಾಗಿ ಮಾತಾಡಿದ್ರ. ಇನ್ಥೊಡೆ ಮಂದಿ ಸಿದ್ದ್ಯಾನ ಪರ್ವಾಗಿ 'ಯಾನ್ ಇವ್ರಪ್ಪುನ್, ಹ್ವಲ್ದಾಂದು ಕದ್ದಾನೇನೋ ಅನ್ನಂಗ ಪಾರುಗ ಹ್ವಡಿತ್ತಾರ'; 'ಕೆಲ್ಸಿಲ್ಲ ಭಗ್ಸಿಲ್ಲ ಕುಂತು ಇಟ್ಟರೆ ಮಾಡ್ಬೇಕಲ್ಲ'; 'ಗೌಡುನ ಭಾಡಾ ತಿಂತಾವ, ಅಗ್ಸಿ ಮುಂದ್ ಕುಂತು ಅವುಂದು ಚಮಚ್ಯಾ ಹ್ವಡಿತಾವ'; 'ಈ ಸೂಳಿಮಕ್ಕಳ್ ಮಾಡಾ ಬದ್ಮಾಸಗಿರಿಗ ಯಾರ್ ಮಚ್ಚಲಿ ಹ್ವಡಿಬೇಕು ?' 'ದ್ಯಾವ್ರೆ ನ್ಯಾಯಾ ಮಾಡ್ಬೇಕು'; 'ಯಲ್ಲಿ ಹನ ಮಗಾ ದ್ಯಾವ್ರ ಕಲ್ಲಾಗಿ ಬಿದ್ದಾನ'; 'ಬಲಾಯಿಲ್ದಿ ಕಾಲ್ಕ ನೆಲಾಯೆದ್ದು ಬಡಿತಾದಂತಾರಲ್ಲ ಹಂಗ'; 'ಪಾರುಗ ಹಿಂದ್ ಯಾರ್ ಕೇಳ್ವರಿಲ್ಲಂತ ಹೀಂಗ ಹ್ವಡಿತ್ತಾರ'; 'ಹ್ವಟ್ಟೆ ತಿಪ್ಲಗ ವಂದೆಡ್ಡು ಸೇಂಗಾದ ಬಡ್ಡಿ ಕಿತ್ತಿರ್ಬೇಕು, ಆಟುಕೆ ಇಂಥಾ ಪರಿ ಹ್ವಡ್ಯಾದಿರ್ತಾದೇನು ?' ಹೀಂಗ ಜನ ತಮ್ಗಸ್ಸಿದು ಆಡ್ಕೋತ ಹ್ವಾದ್ರು.

ಇಂಥೌರು ಹಿಂದ್ ಮಾತಾಡ್ತಿದ್ರೆ ಖರೆ. ಮುಂದ ಮಾತಾಡಟು ಯಾರ್ ಬಲ್ಲಿನೂ ದಮ್ಮಿರಿಲ್ಲ. ಊರಾಗ ಗೌಡುನ ಧಮ್ಕಿ ಭಾಳಿತ್ತು. ಮಂದಿ ಅವ್ನಿಂಗ ಅಂಜಿ ಸಾಯ್ತಿದ್ರು.

ಸಿದ್ದ್ಯಾನವ್ವಗ ಹ್ಯಾಂಗೋ ಸುದ್ದಿ ತಿಳ್ದು ಹೌಹಾರಿ ವೋಡಿಬಂದ್ಳು. ವಾರ್ಗಟ್ಲೆ ಹ್ವಟ್ಯಾಗ ಅನ್ನಿಲ್ಲ. ನಿಂತ್ರ ಕಣ್ಣಗ ಕತ್ಲ ಕವುಂದಂಗಾತ್ತಿತ್ತು. ಕುಂತ್ರ ಯೇಳಕ್ ಬಲ್ಲಾರ್ದ್ವಷ್ಟು

(೧೬ನೇ ಪುಟದಿಂದ)

''ಆಮೇಲೆ ಹೇಳ್ತೀನೆ. ಹತ್ತು ಜೀಪು.'' ಧ್ವನಿಯಲ್ಲಿ ಕ್ರೌರ್ಯವಿತ್ತು. ಯಮರಾಯನಂಥಾ ಆಸಾಮಿ ತನ್ನ ಮೀಸೆ ತಿರುವುತ್ತ ಹೇಳಿದ.

''ಹತ್ತದಿದ್ದರೆ ?''

''ಹತ್ತದಿದ್ದರೆ.....'' ಎಂದವನು ಸಂಗಡ ಇದ್ದ ತನ್ನ ಸಿಬ್ಬಂದಿಗೆ ಕಣ್ಸನ್ನೆ ಮಾಡಿದ. ಅವರು ಸರೋಜಳನ್ನು ಅನಾಮತ್ತಾಗಿ ಎತ್ತಿ ಜೀಪಿಗೆ ಗಿಡಿದರು.

ಇದನ್ನು ಗಮನಿಸಿದ ವಿದ್ಯಾರ್ಥಿಗಳು ಗಾಬರಿಯಿಂದ, ಗೊಂದಲದಿಂದ 'ಹೋ, ಹೋ, ಬಿಡಬೇಡಿ, ಹಿಡಿಯಿರಿ' ಎಂದ ಕೂಗು 'ಚುರ್‌ಽಽಽಽ' ಎಂದು ಹೊರಟ ಜೀಪಿನ ಸದ್ದಿನಲ್ಲಿ ಅದ್ದಿಹೋಯಿತು. ಕಣ್ಣಿಗೆ ಧೂಳೆರಚುತ್ತ ಜೀಪು ವೇಗವಾಗಿ ಓಡಿತು. ಬೆಕ್ಕಸಬೆರಗಾಗಿ ಎವೆ ಮುಚ್ಚಿಸಿ ನಿಂತ ಜನ ಹಾಗೇ ನಿಂತಿದ್ದರು.

ಹೌದು, ''ನನ್ನ ಮುದ್ದಿನ ಡಿಕ್ಟೇಟರ್ ಅಮ್ಮ'' ಕವಿತೆ ಓದಿದ್ದಳು ಸರೋಜ.

ಆಗ ನಮ್ಮ 'ಮುದ್ದಿನ ಡಿಕ್ಟೇಟರ್ ಇಂದಿರಮ್ಮ' ಎಮರ್ಜನ್ಸಿ ಸಾರಿದ ಕಾಲವಾಗಿತ್ತು.

ಆರ್. ವಿ. ಭಂಡಾರಿ
ಅರೆಅಂಗಡಿ - ೫೮೧ ೪೩೦, ಹೊನ್ನಾವರ, ಉ. ಕ.

ನಿಂತ್ರಾ,ಣಗ್ಯಾಳ. ಮಗ್ನ ಸುದ್ದಿ ತಿಳ್ದದೆ ತಡ ಜೀವುದ್ ಹಂಗ ಹರ್ದು ವೋಡಿ ಬಂದ್ಳು. ಇಂಥ ಸಗ್ತಿ ಅವುಳಿಗೆಲ್ಲಿಂದ ಬಂತೋ ಆ ಪರಮಾತ್ಮಗೆ ಗೊತ್ತು.

ಅಗ್ಸಿ ಮುಂದ ಜನಜಾತ್ರಿ ನೆರ್ದಿತ್ತು. ತ್ವಾಳಿನ ದಂಡಿನಾಗ ಕುರಿಮರಿ ಸಿಕ್ಕಾಂಗಾಗಿತ್ತು ಸಿದ್ದ್ಯಾನ ಪಾಡ. ನೆಲ್ದ ಮ್ಯಾಗ ಬಿದ್ದು ಜೀಂವದಾನ ಬೇಡ್ತಿದ್ದ. ವಬ್ಬ್ರಿಗೂ ಕರ್ಣ ಬರ್ಲಿಲ್ಲ. ತಾಯಿ ಮಗ್ನ ಗತಿ ನೋಡಿ, ಯದಿಯದಿ ಬಡ್ಕೊಂಡು ಹಕ್ಕ್ಯಾಗಿ ಹಲ್ಬಿ ಕಣ್ಣೀರ ಹ್ವಳಿ ಹರ್ಸಿದ್ಳು. ಹ್ವಡೆವರ ಕಾಲ ಹಿಡಿದು ಪರಿಪರಿಯಾಗಿ ಬೇಡ್ಕೊಂಡ್ಳು. ಜನಜಂಗುಳಿಯಲಿ ಅನಾಥಳಾಗಿ ವದ್ರಿದ್ಳು. ವಂದ್ ಹುಲ್ ಕಡ್ಡಿನು ಆಸ್ರಾಗ್ಲಿಲ್ಲ.

ಹ್ವತ್ತ ತಾಯ್ವಟ್ಟಿ ಸೇರಿತ್ತು. ಹ್ವಲ್ಕ ಹ್ವಾದ ದನ್ಗೋಳೆಲ್ಲಾ ಮನಿಗ ಬರ್ತಿದ್ದು. ಗೌಡ್ರು ಮನಿ ದನಾ ಕಾಯಾ ಪಾರ ಶಂಕ್ರ ಅಗ್ಸಿ ಮುಂದಿನ ಹಕ್ಕಿಕತ ನೋಡಿ, ವೋಡಿ ಬಂದು 'ಮಾಲ್ಕರ್, ಮಾಲ್ಕರ್ ಘೊಳೆಕಾರ ಸಿದ್ದ್ಯಾ ನಿಮ್ ಮಡ್ಡಿ ಹ್ವಲಾಂದು ಸೇಂಗಾ ಕಿತ್ತಿ ತಿಂದಾನಂತ್ರಿ. ಆಳ್ಮಗ ಸಿರಿಮಂತ ಅವ್ನಿಗ ಹಿಡ್ಕೊಂಡು ಪಂಚಾತಿಗ ತಂದಾನ್ರಿ. ಅಗ್ಸಿ ಮುಂದ್ ಅವ್ನಿಗ ಮಂದಿ ಹ್ವಡಿಲಕತಾರಿ. ಸಿದ್ದ್ಯಾ ಸಾಯ್ತಾನ್ರಿ-ಮಾಲ್ಕರ್ ಉಳ್ಸಿರಿ.'

'ಸಾಯ್ಲಿ ಮಗಾ ಯಾರಪ್ಪುಂದು ಅಂತ ತಿಂದಾನ. ಸೊಕ್ಕ ಬಂದಾದ ಈ ಭೀಖಾರಭೋಟ ಸೂಳಿ ಮಕ್ಕಳಿಗ, ಹ್ವಡಿಬಾರ್ದು ಇವ್ರಿಗ, ಸಣ್ಣಾಗಿ ಕಡ್ದು ಬುಟ್ಟಿ ತುಂಬಬೇಕು.' ಗೌಡ್ರ ಸಬಾಬ ಗೊತ್ತಿದ್ರು ಶಂಕ್ರ ತನ್ನ ವಾರ್ಗಿ ದೋಸ್ತ ಸಿದ್ದ್ಯಾನ ಮ್ಯಾಗಿನ ಪಿರ್ತಿಲಿಂದ ಹೇಳಿದ್ದ.

'ನಿನ್ನ ಕುಂಡಿ ನೀ ತೊಳ್ಕೊ, ದನಾ ಕಟ್ಟಾಕ್ಬಿಟ್ಟು ಮಂದಿ ಉಸಾಬರಿ ಮಾಡ್ತೆನೆಲೆ ಮಗ್ನ. ಇಲ್ಲಿಂದ ಹೋಗ್ ಮದ್ಲ. ಯೇಟ್ ಕಾಳಜಿ ನೋಡ ಮಗ್ನಿಗ; ಇವುಕ್ ಯಲ್ಲಿಡ್ಬೇಕ್ ಅಲ್ಲೇ ಇಡ್ಬೇಕು'. ಗೌಡ್ರು ತಮ್ಮ ಅಂತರಂಗಕ್ಕೆ ಕನಡಿ ಹಿಡಿದಂಗ್ ಮಾತಾಡ್ದ್ರು.

ಆಳ್ಮಗ ಸಿರಿಮಂತ ಕುರಿ ವೈಯ್ದು ಖಟ್ಟುಗರ ಕೈಯಾಗ ಕೊಟ್ಟು, ಮಾಲ್ಕನುಂದ ಧೋಡ್ದುಸ್ತ್ನಿ ಹೇಳ್ಕೊಳ್ಳ ಗೌಡ್ರ ಮನಿಗ ಹ್ವಾದ. ಆಟುರಾಗ ಸಿದ್ದ್ಯಾನವ್ವ ಅಳ್ಕೋತ ಕರ್ಕೋತ ಹಲ್ಬತಾ ಗೌಡ್ರು ಮನಿಗ ಬಂದ್ಳು.

ಗೌಡ್ರು ಸಿರ್‌ಮ್ಯಾನ ಕಡಿ ನೋಡಿ ಸಿಟ್ಟಿನಿಂದ "ಒಂದ್ ನಾಕ್ ಬೆಳ್ಳಿ ಸೇಂಗಾ ಕಿತ್ತಿದ್ರೇನಾಯ್ತು ಮತ್ತ್ಯಾನ ಮಣ್ಣತ್ತಿತ್ತಾ. ಪಾರ ಸತ್ತಂದ್ರ ಯಾರ್ ಮ್ಯಾಗ ಅಪ್ಪುರ್‌ದಿಟ್ಟಿ ಹ್ವರ್ಸಬೇಕಂತ ಮಾಡಿದಿ. ಯಲ್ಲಾರು ಭಾಳ್ ಶಾಣ್ಯಾರಿದ್ದಿರಿ. ಹೋಗ್ ಪಾರುಗ ಬಿಡಂತ ಹೇಳ್ ಅವರಿಗ." ತನ್ನ ದಡ್ಡತನಕ ತಾನೇ ಸಮಾಧಾನ ಹೇಳ್ತಾ ಅಗ್ಸಿ ಕಡಿ ನಡ್ದ. ಕೊಟಗ್ಯಾಗ ದೌಣಿಗ ದನಾ ಕಟ್ಟತ್ತಿದ್ದ ಶಂಕ್ರ ತನ್ನ ಕಿಂವಿಗಳಿಗೆ ತಾನೆ ನಂಬದಾದ.

ಗೌಡ, ಆಳ್ಮಗನಿಗ ಬೈಯಾದ್ ಕೇಳಿ ಸಿದ್ದುನವ್ವಗ ಜರಾ ಸಮಾಧಾನಾಯ್ತು. ಹೋಗಿ ಗೌಡುನ್ ಕಾಲಿಡಿದು "ನನ್ನ ಮಗಾ ಮಾಡಿದ ತಪ್ಪ ಮಾಫಿ ಮಾಡ್ರಿ. ಬೇಕಾದ್ರ ನನ್ಗ ಹ್ವಡಿರಿ, ಮಗ್ನಿಗ ಬಿಡ್ರಿ. ನನ್ನ ಮಗಾ ಸಾಯ್ತಾನರಿಯಪ್ಪಾ,' ನನ್ನ ಬದ್ಕ ಬರ್‌ಬಾದ್ ಆಗ್ತಾದ್ರಿಯಪ್ಪಾ"ಯಂದು ಪರಿಪರಿಯಾಗಿ ಬೇಡ್ಕೋತಿದ್ಳು.

ಸಿದ್ದ್ಯಾಗ ಹಿಡ್ಕೊಂಡು ಹತ್ತಿಪ್ಪತ್ತುಂದಿ ಗೌಡರ ಮನಿಗ ಬಂದ್ರು. "ನಮಸ್ಕಾರಿ ಗೌಡ್ರ ಈ ಮಗ್ನಿಗ ಬಿಡ್ಬ್ಯಾಡ್ರಿ, ಕದ್ದು ತಿನಾದು ಸೆಂವಿ ಹತ್ಯಾದ್ರಿ; ನಾವು ಮನ್ಗಂಡ ಹ್ವಡ್ದಿವ್ರಿ, ನೀವೊಂದ್ನಾಕ್ ಭಾರುಸ್ರಿ ಮಗ್ನಿಗ ಬುದ್ಧಿ ಬರ್ಲಿ."

"ಏನೋ ಪಾರುಗ ಹ್ವಡ್ದು ಕೊಲ್ಲಿ ನನ್ನ ಜೇಲಿಗ ಕಳ್ಸಬೇಕಂತ ಮಾಡಿರೇನು ? ಧಿನ್ಮಾನ ಭೋಲೊ ಇಲ್ಲ. ಪ್ಯಾಟಿಗ ಹೋಗಿ ನಾಕ್ ಅಗಸೇರ ಕಲ್ತು ಬಂದಾವಲ್ಲ ಆ ಕೀಳಜಾತಿ ಪಾರಗೋಳು ಸುಮ್ಮ ಕೂಡಾಲಾ. ಇಲ್ಲೂದೊಂದು ಸುಳ್ಳ ಸೇರ್ಸಿ ಖಟ್ಲಾ ಮಾಡ್ತಾವ. ಕಾಲ್ಮಾನ ಭಾಳ ಬಾರಿಕ ಅವ". ಗೌಡ್ರ ಮಾತ್‌ಕೇಳಿ, ಬಂದವರೆಲ್ಲ ಮಿಕಿ ಮಿಕಿ ಮಾರಿ ನೊಡ್ತಾ ನಾಲ್ಗಿ ಸೌವುರ್ತಾ ನಿಂತ್ರು.

"ಹೋಗಮ್ಮ ನಿನ್ ಮಗ್ನಿಗ್ ಕರ್ಕೊಂಡು ಹೋಗು ಭಾಳ್ ಛೊಡ್ಡ ಮನಸ್ಯಾಹಾನ ನಿನ್ನ ಮಗಾ. ಇನ್ನೊಂದು ಸಲಾ ನಮ್ಮ ಹ್ವಲ್ದ ಕಡಿ ದನಾವ್ಯೆಯ್ದೀ ಅಂದ್ರ, ನಿನ್ನ ಚರ್ಮಾ ಸುಲಿತಿನಿ."

ಗೌಡ್ರ ಕ್ಷಮಾ ಗುಣಾಕ್ ಉಪಕಾರ ಸ್ಮರ್ಸತಾ ಅವ್ವಾ ಮಗಾ ತಮ್ಮನಿಗ ಹ್ವಾದ್ರು. ಇತ್ ಬಂದ ದಾರಿಗ ಸುಂಕಿಲ್ದಂಗ 'ಬರ್ತೇವ್ರಿ ಗೌಡ್ರ' ಎಂದು ಬಂದವರೆಲ್ಲ ನಡ್ದ್ರು. ಗೌಡ ಅಷ್ಟೇನ ತಿಳ್ಗೇಡಿ ಅಲ್ಲ; ಯಲ್ಲರು ಬರ್ರಿ ಇಕಡಿ. 'ಏಽಽಽಽಸಿರಮ್ಯಾ ಝುಮ್ಮ್ಯಾನಿ ಹಾಸು, ಶಂಕ್ಯಾ ಗೌಡ್ತಿಗ ಹೇಳ್ ಯಲ್ಲರಿಗ ಉಪ್ಪಿಟ್ಟ ಮಾಡಂತ.

ನಾವು ಮಾಡಿದ ಕೆಲ್ಸ ಪುಜಲ್ ಆಗ್ಲಿಂಲ್ಲೆಂದು ಸಮಾಧಾನ ಪಟ್ರು. ದುಡ್ದ್ವಾರಿಗ ಕೂಲಿ ಸಿಕ್ಕೇ ಸಿಗ್ತಾದ.

ಗೌಡ್ರ ಅದ್ಭುತ್ ಬುದ್ಧಿಗ ಶಂಕ್ರ ಕಕ್ಕಾಬಿಕ್ಕಿಯಾಗಿ ನಿಂತ.

ಡಾ|| ಪ್ರಭು ಖಾನಾಪುರೆ
ಎಲ್.ಐ.ಜಿ. ೧೪೯, ೩ನೇ ಹಂತ, ಬಡೇಪುರ ಕಾಲೋನಿ, ಗುಲಬರ್ಗಾ-೫

## ಸಾದರ ಸ್ವೀಕಾರ

**ಏಳಿ ಎದ್ದೇಳಿ ನಿಮ್ಮ ಹಕ್ಕುಗಳಿಗಾಗಿ ಏಳಿ** (ಮಾನವ ಹಕ್ಕುಗಳ ಕುರಿತು)
*ಸಂ. ಅಶ್ವಿನಿ ತ್ಯಾಬೆಲ್ಲ, ನೇತ್ರಾವತಿ ವೆಂಕಟೇಶ್*
**ಪುಟ : ೧೦೪**
**ಪೀಸ್ ಚೈಲ್ಡ್ ಇಂಟರ್‌ನ್ಯಾಷನಲ್**

**ಪುರಾಣ ಕುತೂಹಲ** (ಲೇಖನಗಳು) *ಸುಮುಖಾನಂದ ಜಲವಳ್ಳಿ*
**ಪುಟ : ೧೦೮ ಬೆಲೆ : ರೂ. ೩೦**
**ಸುಮುಖ ಪ್ರಕಾಶನ** 'ಕಾವ್ಯಶ್ರೀ' ಮೂರು ಕಾವೇರಿ,
ಕಿನ್ನಿಗೋಳಿ - ೫೭೪೧೫೦ (ದ.ಕ.)

**ಮುತ್ತುಗಳು** (ಆಯ್ದ ಸುಭಾಷಿತಗಳು) *ಶಿವಾನಂದ ಶೆಲ್ಲಿಕೇರಿ*
**ಪುಟ : ೫೪ ಬೆಲೆ: ರೂ. ೩೦**

**ಕೃಷ್ಣಾತೀರದ ಹಾಡು-ಸಂಸ್ಕೃತಿ** (ಜಾನಪದ ಪದ್ಯಗಳು) *ಸಂ. ಶಿವಾನಂದ ಶೆಲ್ಲಿಕೇರಿ*
**ಪುಟ : ೧೪೦ ಬೆಲೆ : ರೂ. ೭೫**

**ಶ್ರೀ ಕೃಷ್ಣ ಪಾರಿಜಾತ ಪ್ರಾತಿನಿಧಿಕ ಕಂಪನಿಗಳು** (ಲೇಖನಗಳು)
*ಸಂ. ಶಿವಾನಂದ ಶೆಲ್ಲಿಕೇರಿ*
**ಪುಟ : ೯೨ ಬೆಲೆ : ರೂ. ೬೦**
ಮೇಲಿನ ಈ ಮೂರು ಪುಸ್ತಕಗಳ ಪ್ರಕಾಶಕರು
**ಗೌರಿ ಪ್ರಕಾಶನ,** ಯಂಡಿಗೇರಿ, ತಾ|| ಬಾದಾಮಿ, ಜಿಲ್ಲಾ|| ಬಾಗಲಕೋಟೆ.

**ನಂಬಲಾಗದ ಸತ್ಯ ಸಂಗತಿಗಳು** (ಲೇಖನ ಸಂಗ್ರಹ) *ಕೈವಾರ ಗೋಪೀನಾಥ್*
**ಪುಟ : ೯೮ ಬೆಲೆ : ರೂ. ೩೫**

**ಪ್ರಚಲಿತ ಸಂಗತಿಗಳು** (ಲೇಖನಗಳು) *ಕೈವಾರ ಗೋಪೀನಾಥ್*
**ಪುಟ : ೭೫ ಬೆಲೆ : ರೂ. ೩೫**

**ಕಲ್ಪನಾ ಸಾಹಿತ್ಯದ ಆಯಾಮಗಳು** (ಲೇಖನಗಳು) *ಕೈವಾರ ಗೋಪೀನಾಥ್*
**ಪುಟ : ೯೪ ಬೆಲೆ : ರೂ. [illegible]**

**ಪ್ರೇತ ಸಾಹಿತ್ಯದ ಆಯಾಮಗಳು** (ಲೇಖನ ಸಂಗ್ರಹ) *ಕೈವಾರ ಗೋಪೀನಾಥ್*
**ಪುಟ : ೧೨೦ ಬೆಲೆ : ರೂ. ೪೦**
*ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು*
**ಭಾಗ್ಯಲಕ್ಷ್ಮೀ ಪ್ರಕಾಶನ,** ೮೭, ೩ನೇ ಕ್ರಾಸ್, ೪ನೇ ಬ್ಲಾಕ್, ಬನಶಂಕರಿ ೩ನೇ ಸ್ಟೇಜ್
೩ನೇ ಫೇಸ್, ಬೆಂಗಳೂರು - ೫೬೦ ೦೮೫

**ಆಧುನಿಕ ಕರ್ನಾಟಕದ ಆತಂಕಗಳು** (ಲೇಖನ ಸಂಗ್ರಹ) *ರಾ. ನಂ. ಚಂದ್ರಶೇಖರ್*
**ಪುಟ : ೧೧೨ ಬೆಲೆ : ರೂ. ೫೦**
**ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ,** ಸಿದ್ಧ ಸಂಸ್ಥಾನ ಮಠ, ಚಿಂಚಣಿ
ಚಿಕ್ಕೋಡಿ, ಬೆಳಗಾವಿ ಜಿಲ್ಲೆ.

**ಲೊಳಲೊಳಾಯಿ** (ವಿನೋದ ಬರಹಗಳು) *ಕು. ಗೋ.*
**ಪುಟ : ೧೨೪ ಬೆಲೆ : ರೂ. ೫೦**

**ಝುನ್ ಹನಿಗಳು** (ಕಿರುಗತೆಗಳು) *ಭಾವರೂಪ : ಜಯರಾಮ ಕಾರಂತ*
**ಪುಟ : ೯೬ ಬೆಲೆ : ರೂ. ೪೫**

**ಶಿಕ್ಷಕರಾಗುವಿರಾ ?** (ಬೋಧನೆಗೊಂದು ಕೈಪಿಡಿ) *ಡಾ|| ಮಹಾಬಲೇಶ್ವರ ರಾವ್*
**ಪುಟ : ೧೦೨ ಬೆಲೆ : ರೂ. ೬೦**

**ಸತ್ಯಜಿತ್ ರಾಯ್** (ಕಿರು ಜೀವನ ಚಿತ್ರ) *ಡಾ|| ಮಹಾಬಲೇಶ್ವರ ರಾವ್*
**ಪುಟ : ೨೮ ಬೆಲೆ : ರೂ. [illegible]**
*ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು :* **ನವಪ್ರಕಾಶನ,** ಉಡುಪಿ - ೫೭೬ ೧೦೧

# ಅನಾರೋಗ್ಯವೇ ಭಾಗ್ಯ

ಪಿ. ಬಿ. ಪ್ರಸನ್ನ



**ಯಾ**ರು ಏನೇ ಹೇಳಲಿ ನನ್ನ ದೃಷ್ಟಿಯಲ್ಲಿ ಅನಾರೋಗ್ಯವೇ ಭಾಗ್ಯ. ಇದನ್ನು ಓದಿದ ತಕ್ಷಣ ಇವನ ತಲೆ ಕೆಟ್ಟಿದೆ ಎಂದುಕೊಳ್ಳುತ್ತೀರಿ ಎಂದು ನನಗ್ಗೊತ್ತು. ಲೋಕದ ಜನರೆಲ್ಲ ತಾವು ಆರೋಗ್ಯವಂತರಾಗಿರ ಬೇಕೆಂದು ಮಿತ ಆಹಾರ, ವ್ಯಾಯಾಮ, ಧ್ಯಾನ, ಯೋಗ ಎಂದೆಲ್ಲ ಸರ್ಕಸ್ ಮಾಡುತ್ತಿರುವಾಗ ಇವನದೇನಪ್ಪಾ ಉಲ್ಟಾ ಎಂದು ನೀವು ಯೋಚಿಸುತ್ತಿರಬಹುದು. ನನ್ನ ಮಾತಿಗೆ ಸಮರ್ಥನೆಯಾಗಿ ಕೆಲವು ವಿಚಾರಗಳನ್ನು ನಿಮ್ಮ ಮುಂದೆ ಇಡುತ್ತೇನೆ. ಆಗ ನೀವು ಕೂಡ ನನ್ನ ಮಾತನ್ನು ಒಪ್ಪುತ್ತೀರಿ ಎಂದು ಭಾವಿಸಿದ್ದೇನೆ.

''ಹಿಂದೆಲ್ಲ ರೋಗ ಬಂದರೆ ಇರುತ್ತಿದ್ದುದು ಒಂದು ಆಸ್ಪತ್ರೆ, ಒಬ್ಬಿಬ್ಬರು ವೈದ್ಯರು, ಒಬ್ಬರೋ ಇಬ್ಬರೋ ಆಯುರ್ವೇದ ಪಂಡಿತರು. ಅವರು ಕೊಡುತ್ತಿದ್ದ ಕೆಂಪು ಮಿಶ್ರಣ, ಮೂರು ನಾಲ್ಕು ಮಾತ್ರೆ ಅಥವಾ ಯಾವುದಾದರೂ ಚೂರ್ಣವೇ ಎಲ್ಲ ರೋಗಗಳಿಗೂ ರಾಮ ಬಾಣವಾಗುತ್ತಿತ್ತು. ಆದ್ರೆ ಈಗ ಹಾಗಿಲ್ಲ. ಪೇಟೆಗೆ ಹೋದ್ರೆ ತಲೆ ತಿರುಗ್ತದೆ. ಗಲ್ಲಿಗಲ್ಲಿಗೆ ನೂರುಗಟ್ಲೆ ಡಾಕ್ಟ್ರುಗಳು. ಹಿಂದೆಲ್ಲ ರೋಗ ಅಂದ್ರೆ ಶೀತ, ತಪ್ಪಿದ್ರೆ ಜ್ವರ, ವಾಂತಿ ಭೇದಿ, ದೊಡ್ಡ ರೋಗ. ಎಲ್ಲ ಬಂದ್ರೆ ಆಸೆ ಬಿಡ್ತಿತ್ತು. ಈಗ ಹಾಗಿಲ್ಲ. ನರನರಕ್ಕೊ ಡಾಕ್ಟ್ರು. ಶೀತ-ಕಫ ಅಂತ ಪೇಟೆಗೆ ಹೋದ್ರೆ, ರಕ್ತ, ಮೂತ್ರ, ಕಫ ಎಲ್ಲದೂ ಪರೀಕ್ಷೆ ಮಾಡ್ತಾರೆ. ಆಮೇಲೆ 'ಫೋಟೋ' ತೆಗೀತಾರೆ. ಸಾಲದ್ದಕ್ಕೆ ಹೊಟ್ಟೆ ಒಳಗೆ ಎಂಥದೋ ಇಳಿಸಿ ಮತ್ತೆ ಪರೀಕ್ಷೆ! ಒಟ್ಟಾರೆ ಊರಿನವ್ರಿಗೆಲ್ಲ ರೋಗ ಬಂದ್ರೆ, ಡಾಕ್ಟ್ರಿಗೆ, ಮದ್ದು ಕೊಡುವ ಅಂಗ್ಡಿಯವ್ರಿಗೆ ಎಲ್ರಿಗೂ ಭಾಗ್ಯವಪ್ಪಾ ಭಾಗ್ಯ.'' – ಇದು ನನ್ನ ಅಜ್ಜಿಯ ಉವಾಚ. ಇದರಲ್ಲಿ ಸತ್ಯಾಂಶವಿಲ್ಲದಿಲ್ಲ. ಇತ್ತೀಚೆಗೆ ಎಡಗಾಲಿನ ಹೆಬ್ಬೆರಳಿನ ಉಗುರೊಂದು ಕಿತ್ತುಬಂದಿತ್ತು. ಕೀವು ತುಂಬಿಕೊಂಡಿತ್ತು. ಗಾಯವನ್ನು ಸ್ವಚ್ಛಗೊಳಿಸಿ ಔಷಧಿ ಹಾಕಿಸಲೆಂದು ವೈದ್ಯರ ಬಳಿ ಹೋಗಿದ್ದೆ. ಆದರೆ ಆ ವೈದ್ಯ ''ತಲೆಯ ಸ್ಕ್ಯಾನಿಂಗ್ ಮಾಡಿಸಿ'' ಎಂದುಬಿಡುವುದೆ ? ಯಾಕೆಂದು ಕೇಳಿದೆ. ''ನರಗಳ ಸಂಬಂಧ ಮೆದುಳಿನವರೆಗೂ ಹಬ್ಬಿರುತ್ತದೆ. ಅಲ್ಲಿ ಏನಾದ್ರೂ ತೊಂದ್ರೆ ಆಗಿದ್ರೆ ಆಮೇಲೆ ರಿಸ್ಕ ಬೇಡ'' ಎಂದುಬಿಟ್ಟ ಭೂಪ ! ಎಲ್ಲ ಆ ವೈದ್ಯ ಮಹಾಶಯ ಅಂದಂತೆ ಮಾಡಿ ಮುಗಿಸಿದಾಗ ಜೇಬಿನಿಂದ ಕೆಲವು ಸಾವಿರ ಉದುರಿತ್ತು. ಒಬ್ಬನ ಅನಾರೋಗ್ಯದಿಂದ ವೈದ್ಯ, ರಕ್ತ ಪರೀಕ್ಷೆ ಮಾಡುವಾತ, ಎಕ್ಸರೇ - ಸ್ಕ್ಯಾನಿಂಗ್‌ನವ, ಔಷಧಿ ಅಂಗಡಿಯವ, ಹಣ್ಣುಹಂಪಲಿನವ ಹೀಗೆ ಅದೆಷ್ಟೋ ಜನ ಉದ್ಧಾರವಾಗುತ್ತಾರೆ. ಇವರನ್ನೆಲ್ಲ 'ಅನಾರೋಗ್ಯಾವಲಂಬಿಗಳು' ಎಂದು ಕರೆದರೆ ತಪ್ಪಾಗಲಾರದು ಅಲ್ಲವೆ ?

ಜನರ ಮತಗಳನ್ನು ಗಳಿಸಿ ಎಂ.ಎಲ್.ಎ. ಅಥವಾ ಎಂ.ಪಿ. ಆಗುತ್ತಾರೆ. ನಂತರದ ಹಂತ ಮಂತ್ರಿಯಾಗುವುದು. ಆಮೇಲೆ ಬರುವುದೇ ಎದೆನೋವು. ಅದೂ ಅಂತಿಂಥದಲ್ಲ. 'ವಿದೇಶೀ ಎದೆನೋವು.' ವೈದ್ಯರಿಗೆ ತೋರಿಸಲು ಎಂದೊಮ್ಮೆ, ಶಸ್ತ್ರಕ್ರಿಯೆಗೆ ಎಂದೊಮ್ಮೆ, ವಿಶ್ರಾಂತಿಗೆ ಎಂದೊಮ್ಮೆ ಅಮೆರಿಕಾಕ್ಕೆ ಹಾರುವ ಭಾಗ್ಯ ನಮ್ಮ ಮಂತ್ರಿಗಳಿಗಲ್ಲದೆ ಇನ್ಯಾರಿಗೆ ಇರುತ್ತದೆ ಹೇಳಿ ? ತಮಾಷೆ ಎಂದರೆ ನಿತ್ಯವೂ ಸದನಕ್ಕೆ ಹಾಜರಾಗಿ, ತಮ್ಮ ಕ್ಷೇತ್ರದಲ್ಲಿ ಚೆನ್ನಾಗಿ ಕೆಲಸ ಮಾಡುತ್ತಿರುವ ಶಾಸಕ, ಮಂತ್ರಿಗಳು ಯಾರಾದರೂ ಇದ್ದರೆ (ಇದ್ದಾರೋ ಎಂಬ ಬಗ್ಗೆ ಸಂಶಯವಿದೆ !) ಅವರು ಸುದ್ದಿಯಲ್ಲಿರುವುದೇ ಇಲ್ಲ. ಆದರೆ ಯಾರು 'ಅನಾರೋಗ್ಯ ಖಾತೆಯ' ಸಚಿವರೋ ಅವರ ಬಗ್ಗೆ ಎಲ್ಲ ಖಾಸಗಿ ಚಾನೆಲ್‌ಗಳು, ಎಲ್ಲ ಪ್ರಮುಖ ಪತ್ರಿಕೆಗಳು ನಿತ್ಯವೂ ಸುದ್ದಿಯನ್ನು ಕೊಡುತ್ತಿರುತ್ತವೆ. ತಿಂಗಳುಗಟ್ಟಲೆ ಆಸ್ಪತ್ರೆಯಲ್ಲಿದ್ದರಂತೂ ಪತ್ರಿಕೆಗಳು ಒಂದು ಮೂಲೆಯಲ್ಲಿ ಆ ವ್ಯಕ್ತಿಯ ಆರೋಗ್ಯದ ಸುದ್ದಿಯನ್ನು ಪ್ರಕಟಿಸಲು ಖಾಯಂ ಜಾಗವನ್ನು ಸೃಷ್ಟಿಸಿರುತ್ತವೆ. ಒಂದು ಮೂಲೆಯಲ್ಲಿ '.....ಸಚಿವರ ಇಂದಿನ ಆರೋಗ್ಯ' ಎಂಬ ಶೀರ್ಷಿಕೆಯಡಿ ನಿತ್ಯವೂ ಸುದ್ದಿ ಇರುತ್ತದೆ. ಹೀಗೆ ನಿತ್ಯವೂ ಸುದ್ದಿಯಲ್ಲಿರುವ ಭಾಗ್ಯ ಅನಾರೋಗ್ಯ ಪೀಡಿತರಿಗಲ್ಲದೆ ಇನ್ಯಾರಿಗೆ ಇರುತ್ತದೆ ?

ನಾವು ಸಣ್ಣವರಾಗಿದ್ದಾಗ ಜ್ವರ ಬಂದರೆ ಕಟ್ಟುನಿಟ್ಟಾಗಿ ಪಥ್ಯ ಮಾಡಿಸುತ್ತಿದ್ದರು. ಗಂಜಿ ನೀರು ಬಿಟ್ಟು ಬೇರೆ ಏನನ್ನೂ ಕೊಡುತ್ತಿರಲಿಲ್ಲ. ಆಗಾಗ ಜ್ವರದಿಂದ ನರಳುತ್ತಿದ್ದ ನನಗೆ ಗಂಜಿ ಕಂಡರೆ ವಾಕರಿಗೆ ಬರಲಾರಂಭಿಸಿತು. ಒಂದು ಸಾರಿ ವೈದ್ಯರು, ''ಗಂಜಿ ಬೇಡವಾದರೆ ಬ್ರೆಡ್ಡು ಕೊಡಿ'' ಎಂದರು. ನಮ್ಮದು ಸಂಪ್ರದಾಯಸ್ಥ ಕುಟುಂಬ. ''ಬೇಕರಿಯ ವಸ್ತುಗಳನ್ನು ಮನೆಯ ಒಳಕ್ಕೆ ತರಲೇಬಾರದು'' ಎಂದು ಕಟ್ಟಪ್ಪಣೆ ಮಾಡಿದ್ದರು. ವೈದ್ಯರ ಸಲಹೆಯಿಂದ ಮನೆಮಂದಿಯೆಲ್ಲ ಅದರಲ್ಲೂ ಮುಖ್ಯವಾಗಿ ಅಮ್ಮ ಚಿಂತಿತರಾಗಿದ್ದರು. ಕೊನೆಗೆ ಅಜ್ಜ ಬ್ರೆಡ್ಡು ಮಾತ್ರ ತರಬಹುದೆಂದು ನಿಯಮವನ್ನು ಸಡಿಲಿಸಿದರು. ಮೊತ್ತಮೊದಲ ಬಾರಿ ಬ್ರೆಡ್ಡಿನ ಚೂರೊಂದನ್ನು ಬಾಯಿಗೆ ಹಾಕಿಕೊಂಡೆ. ಅಬ್ಬ ! ಏನು ಬ್ರೆಡ್ಡಿನ ಸವಿ ! ಅಲ್ಲಿಂದಾಚೆಗೆ ''ದೇವರೇ, ವಾರದಲ್ಲಿ ಒಮ್ಮೆಯಾದರೂ ಜ್ವರ ಬರಲಿ'' ಎಂದು ಪ್ರಾರ್ಥಿಸುತ್ತಿದ್ದೆ!

ಬರಿಯ ಪ್ರಾರ್ಥನೆಯಿಂದ ಬ್ರೆಡ್ಡು ದಕ್ಕುವುದಿಲ್ಲ, ಜ್ವರ ಬರದಿದ್ದರೂ ಬಂದಂತೆ ನಟಿಸಬೇಕು ಎಂದು ಆಗ ತಿಳಿದಿರಲಿಲ್ಲ. ಅದು ತಿಳಿದದ್ದು ನನ್ನ ದೊಡ್ಡಪ್ಪನ ಮಗನಿಂದ. ಶಾಲೆಗೆ ಹೊರಡಲು ಅರ್ಧಗಂಟೆ ಇದೆ ಎನ್ನುವಾಗ ಅವನಿಗೆ ಜ್ವರ ಬರುತ್ತಿತ್ತು! ''ಮಾಣಿಗೆ ಜ್ವರ... ಶಾಲೆಗೆ ಕಳ್ಸುದು ಬೇಡ. ಪೇಟೆಗೆ ಹೋದವ್ರು ಬ್ರೆಡ್ ತನ್ನಿ'' ಎಂದು ಅಜ್ಜ ತನ್ನ ತೀರ್ಮಾನ ಕೊಡುತ್ತಿದ್ದರು. ಅಜ್ಜನ ಮಾತಿಗೆ ಪ್ರತಿ ಆಡುವವರುಂಟೆ ? ಒಂಬತ್ತೂವರೆ ದಾಟಿದರೆ ಜ್ವರವೂ ಇಲ್ಲ ಮಣ್ಣೂ ಇಲ್ಲ. ಶಾಲೆಗೆ ಚಕ್ಕರ್ ಬ್ರೆಡ್ಡಿಗೆ ಹಾಜರ್. ಹಿರಿಯಣ್ಣನೇ ನಟನಾ ಶೂರನೆಂದ ಮೇಲೆ ನಾನೇನು ಕಡಮೆಯೇ ? ನನಗೂ ವಾರ - ಹದಿನೈದು ದಿನಕ್ಕೊಂದು ಬಾರಿ ಸರಿಯಾಗಿ ಒಂಬತ್ತು ಗಂಟೆಗೆ ಜ್ವರ ಬರಲಾರಂಭಿಸಿತು.

ಸ್ವಲ್ಪ ದೊಡ್ಡವನಾದ ಮೇಲೆ ಅಜ್ಜನ ಕೆಮ್ಮಿಗೆ ನಾನೂ ಕೆಮ್ಮಿ ಬೆಂಬಲ ಸೂಚಿಸತೊಡಗಿದೆ. ಏಕೆಂದರೆ ಕಫದಿಂದ ಗಂಟಲು ಕಟ್ಟಿದಾಗಲೆಲ್ಲ ಅಜ್ಜನಿಗೆ ಬಿಸಿಯಾದ ಸ್ಟ್ರಾಂಗ್ ಕಾಫಿ ಸಿಗುತ್ತಿತ್ತು. ''ನೀವು ಬೀಡಿಯನ್ನು ಮುಟ್ಟಲೇಬಾರ್ದು'' ಎಂದು ಖಡಾ ಖಂಡಿತವಾಗಿ ಡಾಕ್ಟ್ರು ಹೇಳಿದ್ದರು. ಅಜ್ಜಿಯಂತೂ ಅಜ್ಜ ಬೀಡಿ ಸೇದುವುದನ್ನು ನೋಡಿದರೆ ರಣಚಂಡಿಯಾಗುತ್ತಿದ್ದರು. ಅಜ್ಜಿಗೆ ಹೆದರುತ್ತಿದ್ದ ಅಜ್ಜ ಗದ್ದೆಗೋ, ತೋಟಕ್ಕೋ ಕದ್ದುಹೋಗಿ ಬೀಡಿ ಸೇದುತ್ತಿದ್ದರು. ಒಂದು ಸಾರಿ ಶಾಲೆಯಿಂದ ಬರುತ್ತಿದ್ದಾಗ ಮರದ ಮರೆಯಲ್ಲಿ ಒಂದೇ ಸವನೆ ಬೀಡಿ ಸೇದುತ್ತಿದ್ದ ಅಜ್ಜನನ್ನು ಕಂಡೆ. ''ಬೀಡಿಯನ್ನು ಯಾಕೆ ಸೇದೋದು ?'' ಎಂದು ಕೇಳಿದೆ. ಅದಕ್ಕೆ ಅಜ್ಜ, ''ನನ್ನ ಹೊಟ್ಟೆಯೊಳಗೆ ಕ್ರಿಮಿಗಳಿವೆ. ಬೀಡಿ ಸೇದಿ ಹೊಗೆ ನುಂಗಿದ್ರೆ ಕ್ರಿಮಿಗಳೆಲ್ಲ ಸಾಯ್ತವೆ. ಕೆಮ್ಮು ಬರೋದಿಲ್ಲ'' ಎಂಥು ಕೆಮ್ಮುತ್ತಲೇ ಉತ್ತರಿಸಿದ ! ''ನನಗೂ ಕೊಡು'' ಎಂದೆ. ನಿರಾಕರಿಸಿದ. ಅಜ್ಜಿಗೆ ಹೇಳುತ್ತೇನೆ ಎಂದ ಮೇಲೆ ಕೊಟ್ಟ. ಅಂದಿನಿಂದ ಅಜ್ಜ-ಮೊಮ್ಮಗನ ನಡುವೆ ಬೀಡಿ ಸಹಕಾರ ನಡೆಯತೊಡಗಿತ್ತು. ಅಜ್ಜ ಸಂಪ್ರದಾಯವಾದಿಯಾಗಿದ್ದರೂ ಬೀಡಿಯ ಕುರಿತಂತೆ ಅವನ ಸಂಪ್ರದಾಯ

ಅದು ಹೇಗೋ ಏನೋ ಸಡಿಲಗೊಂಡಿತ್ತು. ನಿಜವಾಗಿಯೂ ಅನಾರೋಗ್ಯದಿಂದ ಇರಬೇಕಾಗಿಲ್ಲ ಅನಾರೋಗ್ಯದಂತೆ ನಟಿಸಿದರೂ ಹಲವಾರು ಲಾಭಗಳಿವೆ ಎಂದು ತಿಳಿದದ್ದು ಆಗಲೇ.

ನಾನು ಎಂ.ಎ. ಮಾಡುತ್ತಿದ್ದಾಗ ಅಂತರವಿಭಾಗ ಮಟ್ಟದ ಫುಟ್‌ಬಾಲ್ ಪಂದ್ಯವಿತ್ತು. ನಮ್ಮ ವಿಭಾಗದ ಪರ ಆಡುತ್ತಿದ್ದ ರಮೇಶ ಬಿದ್ದು ಕಾಲು ಮುರಿದುಕೊಂಡ. ಬ್ಯಾಂಡೇಜ್ ಹಾಕಿದ ಅವನನ್ನು ಹಾಸ್ಟೆಲಿಗೆ ಹೊತ್ತುತಂದೆವು. ಅಲ್ಲಿಂದ ಪ್ರಾರಂಭವಾಯಿತು ನೋಡಿ ಹುಡುಗಿಯರ ದಂಡು ಹಾಸ್ಟೆಲಿಗೆ ಬರಲು. ಬಂದವರು ಸುಮ್ಮನೆ ಬರುತ್ತಾರೆಯೆ ? ಎಲ್ಲರ ಕೈಯಲ್ಲೂ ಗುಲಾಬಿ, ಗ್ರೀಟಿಂಗ್ ಕಾರ್ಡ್, ಹಣ್ಣುಗಳು ! ಊಟ ಹೊತ್ತು ತರುವವರೇನು, ಕೈತುತ್ತು ಕೊಡುವವರೇನು, ರಮೇಶನ ಭಾಗ್ಯಕ್ಕೆ ಎಣೆಯೇ ಇಲ್ಲ. ನನ್ನ ಹೊಟ್ಟೆಯಲ್ಲಿ ಏನೋ ಒಂಥರ. ಮಾರನೆಯ ದಿನದ ಆಟದಲ್ಲಿ ನನಗೂ ರಮೇಶನಂತೆ ಆಗುವ ಆಸೆಯಾಯಿತು. ಚೆಂಡು ನನ್ನ ಬಳಿ ಬರದಿದ್ದರೂ ಬೇಕೆಂದೇ ವೇಗವಾಗಿ ಓಡಿ ಹುಡುಗಿಯರ ಎದುರು ಐದಾರು ಬಾರಿ ಬಿದ್ದೆ. ಚರ್ಮವೂ ಜಾರಲಿಲ್ಲ, ತೀರ ನಿರಾಸೆಯಾಯಿತು. ನನ್ನ ಯೋಚನೆಯನ್ನು ಗ್ರಹಿಸಿದ ತಂಡದ ನಾಯಕ ಪಂದ್ಯ ಮುಗಿದ ಮೇಲೆ, "ಕಾಲು ಮುರ್ದು ಹುಡುಗಿಯರ ಅನುಕಂಪ ಗಿಟ್ಸೋದಕ್ಕೂ ಭಾಗ್ಯ ಬೇಕು ಕಣೋ" ಎಂದಿದ್ದ.

ಆಸ್ಪತ್ರೆ ಎನ್ನುವುದು ರಾಜಕಾರಣಗಳು, ಶ್ರೀಮಂತ ವರ್ತಕರು, ಕೈಗಾರಿಕೋದ್ಯಮಿಗಳು, ನಟರು ಇವರೇ ಮೊದಲಾದವರಿಗೆ ಇನ್ನೊಂದು ಮನೆ ಇದ್ದಂತೆ. ಹಗರಣದಲ್ಲಿ ಸಿಕ್ಕಿಬೀಳುವ ಪ್ರಸಿದ್ಧ ವ್ಯಕ್ತಿಗಳನ್ನು ನೋಡಿ, ಜಾಮೀನು ಸಿಗುತ್ತದೋ ಎಂದು ಅಡಗಿಕುಳಿತು ಪ್ರಯತ್ನಿಸುತ್ತಾರೆ. ಸಿಗದಿದ್ದರೆ ಬಂದು ಶರಣಾಗುತ್ತಾರೆ. ನ್ಯಾಯಾಲಯಕ್ಕೆ ಇನ್ನೇನು ಹಾಜರುಪಡಿಸಬೇಕು ಎನ್ನುವಷ್ಟರಲ್ಲಿ ಅವರಿಗೆ ಕಾಣಿಸಿಕೊಳ್ಳುವುದೇ ಎದೆನೋವು ! ತಕ್ಷಣ ಆಸ್ಪತ್ರೆಗೆ ದಾಖಲಾಗುತ್ತಾರೆ. ಆಡಳಿತ ಪಕ್ಷದಲ್ಲಿದ್ದುಕೊಂಡು ನಾಯಕನ ವಿರುದ್ಧ ಭಿನ್ನಮತದ ಕಿಡಿ ಹಚ್ಚಿ ಅದು ಇನ್ನೇನು ದೊಡ್ಡ ಅಲ್ಲೋಲ ಕಲ್ಲೋಲ ಉಂಟುಮಾಡುತ್ತದೆ ಎನ್ನುವಾಗ ಆಸ್ಪತ್ರೆಗೆ ದಾಖಲಾಗುತ್ತಾರೆ.

ಅನಾರೋಗ್ಯದಂತೆ ನಟಿಸುವುದು, ಅದರಿಂದ ಬೇಳೆ ಬೇಯಿಸಿಕೊಳ್ಳುವುದು ಸುಲಭದ ಮಾತಲ್ಲ. ಇದಕ್ಕೆ ನಟನಾ ಕೌಶಲ, ಸಮಯಪ್ರಜ್ಞೆ, ಸುಳ್ಳು ಹೇಳುವುದರಲ್ಲಿ ನೈಪುಣ್ಯ ಎಲ್ಲವೂ ಇರಬೇಕಾಗುತ್ತದೆ. ಕೆಲವು ಹೆಂಗಸರಿಗೆ ತನ್ನ ಗಂಡನ ಕಡೆಯವರು ತಮ್ಮ ಮನೆಗೆ ಊಟಕ್ಕೆ ಬರುತ್ತಾರೆ ಎಂದ ತಕ್ಷಣ ಬೆನ್ನುನೋವು, ಸೊಂಟನೋವು, ತಲೆನೋವು ಪ್ರಾರಂಭವಾಗುತ್ತದೆ (ಗಮನಿಸಿ, ಇವೆಲ್ಲವೂ ದೇಹದ ಒಳಗಿನ ನೋವುಗಳು). ಅದೇ ಹೊತ್ತಿಗೆ ತನ್ನ ತವರಿನ ಕಡೆಯವರು ಬರುತ್ತಾರೆ ಎಂದರೆ ಇವೆಲ್ಲವೂ ಮಾಯವಾಗಿಬಿಡುತ್ತವೆ. ಮುಖದಲ್ಲಿ ನಗುವೇನು, ಹಾಡೇನು, ಗಂಡನೆಂಬ ಪ್ರಾಣಿಯನ್ನು ಪ್ರೀತಿಯ ವಿಶೇಷಣಗಳಿಂದ ಕರೆಯುವುದೇನು ! (ಪಾಪ, ಗಂಡ ತನ್ನ ಕಣ್ಣು ಕಿವಿಗಳನ್ನು ತಾನೇ ನಂಬಲಾರ !) ಎರಡು ಮೂರು ಮಂದಿ ಸೊಸೆಯರಿದ್ದು ತುಂಬ ಕೆಲಸವಿರುವ ಕಡೆ ಯಾರಾದರೊಬ್ಬಾಕೆ ಮೈಗಳ್ಳಿ ಇದ್ದರಂತೂ ಮುಗಿಯಿತು. ಆಕೆ ಬೆನ್ನುನೋವು, ಸೊಂಟನೋವು ಎನ್ನುತ್ತ ಸದಾ ಮಲಗಿಯೇ ಇರುತ್ತಾಳೆ. ಮನೆಯವರ ಅನುಕಂಪವನ್ನೂ ಆಕೆ ಗಿಟ್ಟಿಸಿರುತ್ತಾಳೆ. "ಅವ್ಳಿಗೇನೋ ಪಾಪ ಯಾವತ್ತೂ ಹುಷಾರಿರಲ್ಲ. ನಿಮ್ಗೇನಾಗಿದೆ ಧಾಡಿ ! ಮಾಡಿ ಕೆಲ್ಸ" ಎಂದು ಅತ್ತೆಯಾದವಳು ಕಾಲ ಮೇಲೆ ಕಾಲು ಹಾಕಿಕೊಂಡು ತಾಕೀತು ಮಾಡುತ್ತಿರುತ್ತಾಳೆ.

ವೃದ್ಧಾಪ್ಯದಲ್ಲಿ ಮಕ್ಕಳ ಜೊತೆ ವಾಸಿಸುವವರಲ್ಲಿ ಕೆಲವರು ಕಿಲಾಡಿಗಳಿರುತ್ತಾರೆ. ಮನೆಗೆ ಯಾರೇ ನೆಂಟರು ಬರಲಿ ತಾವು ತಮ್ಮ ಕೊಠಡಿ ಬಿಟ್ಟು ಹೊರಕ್ಕೆ ಬರುವುದೇ ಇಲ್ಲ. ಒಳಗಿದ್ದುಕೊಂಡೇ ಕೆಮ್ಮುತ್ತ 'ಅಯ್ಯೋ' 'ಅಮ್ಮಾ !' ಎಂದು ನರಳುತ್ತ ಬಂದವರ ಗಮನ ಸೆಳೆಯಲು ಯತ್ನಿಸುತ್ತಾರೆ. "ಏನು ಹೇಗಿದ್ದೀರಿ ?" ಎಂದು ಕೇಳಿಬಿಟ್ಟರಂತೂ ಮುಗಿಯಿತು. "ಕಣ್ಣು ಕಾಣ್ಸಲ್ಲ, ಕಿವಿ ಕೇಳ್ಸಲ್ಲ, ಹಲ್ಲು ಬಿದ್ದೋಗಿ ಕೋಡುಬಳೆ ತಿನ್ನೋಕೂ ಆಗಲ್ಲ, ಹಲ್ಸಿನ ಹಣ್ಣು ತಿನ್ಬೇಕೂಂತ ಆಸೆ ಆದ್ರೆ ಜೀರ್ಣವಾಗಲ್ಲ" ಎಂದು ತಮಗೆ ಏನೇನು ಬೇಕೋ ಅವುಗಳ ಬಗ್ಗೆ ನೆಂಟರ ಮುಂದೆ ಬೇಡಿಕೆ ಸಲ್ಲಿಸುತ್ತಾರೆ. ಅವರ ಬೇಡಿಕೆಗಳನ್ನು ಕೇಳಿದ ಅವರ ಮಕ್ಕಳು ತಕ್ಷಣವೇ ಏನನ್ನಾದರೂ ತಿನ್ನಲು ತಂದುಕೊಡುವುದು, ಪ್ರೀತಿಯಿಂದ ಮಾತನಾಡಿಸುವುದು ಎಲ್ಲವೂ ಒಂದು ರೀತಿ ಮಜವಾಗಿರುತ್ತೆ. ಏಕೆಂದರೆ ಉಳಿದ ಸಂದರ್ಭಗಳಲ್ಲಿ ಆ ವೃದ್ಧರಿಗೆ ತಮ್ಮ ಮಕ್ಕಳ ಜೊತೆಗಿನ ಬದುಕು ನರಕವಾಗಿರುತ್ತದೆ. ಪಥ್ಯ, ಡಯಟ್‌ನ ಹೆಸರಿನಲ್ಲಿ ಹೊಟ್ಟೆ ತುಂಬ ಅನ್ನ ಸಿಗುವುದೇ ಕಷ್ಟ. ಹಾಗಾಗಿ ಬಂದವರ ಎದುರು ಇವರು ನಟಿಸಬೇಕಾಗುತ್ತದೆ.

ನೌಕರಿಗೆ ಹೋಗುವ ಅನೇಕರಿಗೆ ರಜೆ ಸುಲಭವಾಗಿ ಸಿಗುವುದಿಲ್ಲ. ಅನಾರೋಗ್ಯದ ನಿಮಿತ್ತ ರಜೆಗಳನ್ನು ಹಾಕಿದರೆ ವೈದ್ಯರ ಪ್ರಮಾಣ ಪತ್ರ, ವೈದ್ಯಕೀಯ ವರದಿ ಎಂದು ಏನೇನೋ ಎಲ್ಲ ಪತ್ರಗಳನ್ನೂ ಹಾಜರುಪಡಿಸ ಬೇಕಾಗುತ್ತದೆ. ಆದರೂ ರಜೆ ಸಿಗುತ್ತದೆ ಎಂಬ ಖಾತರಿ ಇಲ್ಲ. ಆದರೆ ಸರ್ಕಾರಿ ನೌಕರನಾದ ನನ್ನ ಮಿತ್ರನೊಬ್ಬ ಪ್ರಳಯಾಂತಕನಿದ್ದಾನೆ. ವರ್ಷದಲ್ಲಿರುವ ಎಲ್ಲ ರಜೆಗಳನ್ನೂ ಮುಗಿಸಿದ ಬಳಿಕ ಮತ್ತೆ ಹತ್ತರಂತೆ ಎರಡು ಮೂರು ಸಾರಿ ವಿಶೇಷ ರಜೆಗಳನ್ನು ಪಡೆಯುತ್ತಾನೆ. ಆತ ಹಾಜರುಪಡಿಸಿದ ಪ್ರಮಾಣ ಪತ್ರದಲ್ಲಿ ಸರ್ಕಾರಿ ವೈದ್ಯರು ಹೀಗೆ ಬರೆದಿದ್ದರು, "ಈ ವ್ಯಕ್ತಿಯು ಇಂಥ ದಿನಾಂಕದಂದು ಕರ್ತವ್ಯಕ್ಕೆ ಹಾಜರಾಗಲು ಕಛೇರಿಯ ಬಳಿ ನಡೆದುಕೊಂಡು ಬರುತ್ತಿದ್ದಾಗ ಹುಚ್ಚುನಾಯಿಯ ಕಡಿತಕ್ಕೆ ಒಳಗಾಗಿದ್ದು ಇವರಿಗೆ ಹತ್ತು ದಿನಗಳ ವಿಶ್ರಾಂತಿಯ ಅಗತ್ಯವಿದೆ." ಸರಿ, ಒಂದು ಸಾರಿ ಮಂಜೂರಾಯಿತು. ಕೆಲವು ದಿನಗಳ ನಂತರ ಮತ್ತೆ ಕಾಲಿಗೆ ಬ್ಯಾಂಡೇಜ್ ಸುತ್ತಿಕೊಂಡು ಅದೇ ರೀತಿಯ ಪ್ರಮಾಣ ಪತ್ರವನ್ನು ಹಿಡಿದುಕೊಂಡು ಮೇಲಾಧಿಕಾರಿಯ ಬಳಿ ಹೋದ. ಅದನ್ನು ನೋಡಿ ಸಿಟ್ಟಾದ ಆತ, "ಅಲ್ಲಯ್ಯ.... ಹೋದ ತಿಂಗ್ಳು ಈ ರೀತಿ ಆಯ್ತಲ್ಲ ? ರಜಾ ಕೊಡೋಕೆ ಆಗಲ್ಲ" ಎಂದು ಅಬ್ಬರಿಸಿದ. ಆಗ ಈತ, "ಸಾರ್.... ಇದು ಆ ನಾಯಿಯಲ್ಲ, ಬೇರೆ ನಾಯಿ ಸಾರ್. ಅಲ್ಲದೆ ಡಾಕ್ಟ್ರೂ ಬೇರೆ ಸಾರ್ !" ಎಂದು ಗಡಿಬಿಡಿಯಿಂದ ಉತ್ತರಿಸಿದ.

ಈಗ ಹೇಳಿ, ಅನಾರೋಗ್ಯದಿಂದಲೇ ಅಲ್ಲವೆ ಇಷ್ಟೆಲ್ಲ ಸುಖ, ಭೋಗ, ಇಷ್ಟಾರ್ಥ ಸಿದ್ಧಿ, ಅನುಕಂಪದ ಲಾಭ ಎಲ್ಲವೂ ದಕ್ಕುವುದು ? ಅನಾರೋಗ್ಯವೇ ಭಾಗ್ಯ ಎಂದು ಈಗಲಾದರೂ ಒಪ್ಪಿಕೊಳ್ಳುವಿರಾ ?

ಪಿ. ಬಿ. ಪ್ರಸನ್ನ
೫೭೮, ಹುಡ್ಕೋ ಫ್ಲ್ಯಾಟುಗಳು
ಶಾರದಾದೇವಿ ನಗರ, ಪ್ರಥಮ ಹಂತ
ಮೈಸೂರು - ೫೭೦ ೦೨೨

# ಚಳಿ ವೀಕ್ಷಣೆಗಳ ಆರಂಭ



ಡಾ॥ ಬಿ. ಎಸ್. ಶೈಲಜಾ

**ಮ**ಳೆಗಾಲದಲ್ಲಿ ಮೋಡದ ನಡುವೆ ಇಣುಕಿ ನಿರಾಶೆಪಟ್ಟ ಕಣ್ಣುಗಳಿಗೆ ಈ ತಿಂಗಳು ತುಂಬಾ ಕೆಲಸ. ಶುಭ್ರವಾದ ನೀಲಿ ಆಕಾಶದಿಂದ ಕಂಗೊಳಿಸುವ ಚಳಿಗಾಲದ ರಾತ್ರಿಗಳು ವೀಕ್ಷಣೆಯ ಆರಂಭಕ್ಕೆ ಸೂಕ್ತವಾದ ಸಮಯ. (ಕರ್ನಾಟಕದಲ್ಲಿ) ನಮ್ಮನ್ನು ಚಳಿ ಅಷ್ಟಾಗಿ ಬಾಧಿಸುವುದಿಲ್ಲ, ಆದರೆ ಉತ್ತರದ ದೇಶಗಳಲ್ಲಿ ಕೊರೆತ ಅಸಹನೀಯ. ಇಂತಹ ಕೊರೆತವನ್ನು ಎದುರಿಸಿ, ರಾತ್ರಿ ಇಡೀ ನಕ್ಷತ್ರಗಳನ್ನೇ ನೋಡುತ್ತಾ ಕಳೆದ ನಮ್ಮ ಹಿಂದಿನವರು (ಅಂದರೆ ಎರಡು ಸಾವಿರ ವರ್ಷಗಳ ಹಿಂದೆ ಇದ್ದವರು) ಪರಿಶ್ರಮದಿಂದ ಸಂಗ್ರಹಿಸಿದ ವೀಕ್ಷಣೆಗಳಿಂದಾಗಿ ಇಂದು ನಾವು ಆ ಕೊರೆತವನ್ನು ತಪ್ಪಿಸಿಕೊಂಡಿದ್ದೇವೆ. ಲೆಕ್ಕ ಮಾಡಿ ಸಮಯ ತಿಳಿಯಲು ಕಲಿತಿದ್ದೇವೆ. ಅಂದಿನವರ ಕಷ್ಟ ಸಹಿಷ್ಣುತೆ, ಪರಿಶ್ರಮ ಹಾಗೂ ಆಸಕ್ತಿ ನಿಜವಾಗಿಯೂ ಪ್ರಶಂಸನೀಯ.

ಸಂಜೆಯಾಗುತ್ತಿದ್ದಂತೆ ನೆತ್ತಿಯಲ್ಲೊಂದು ಚೌಕ ಕಾಣುತ್ತದೆ. ಇದೇ ನಕುಲ (ಪೆಗಸಸ್). ಇದರ ನಾಲ್ಕು ಮೂಲೆಗಳನ್ನು ಸೂಚಿಸುವ ನಕ್ಷತ್ರಗಳೇ ಪೂರ್ವಾಭಾದ್ರ (೨) ಮತ್ತು ಉತ್ತರಾಭಾದ್ರ (೨). ಪಶ್ಚಿಮದಂಚಿನಲ್ಲಿ ಸ್ವಾತಿ, ಶ್ರವಣಗಳು ಮಿನುಗುತ್ತಿರುತ್ತವೆ. ಉತ್ತರದಲ್ಲಿ ಕಣ್ಣು ಹಾಯಿಸಿದರೆ ಎದ್ದು ಕಾಣುವ ಇಂಗ್ಲಿಷ್ M ಅಕ್ಷರದ ಆಕಾರದ ಪುಂಜವೇ ಕುಂತಿ (ಕಾಸಿಯೋಪಿಯಾ). ಇದಕ್ಕೂ ದಿಗಂತದ ಅಂಚಿಗೂ ಮಧ್ಯೆ ಇರುವ ಇನ್ನೊಂದು ಪುಂಜ ಅರ್ಜುನ (ಪರ್ಸಿಯುಸ್). ದುರ್ಬೀನಿನಿಂದ ಈ ಪುಂಜದಲ್ಲಿ ಹುಡುಕಿದರೆ ಎರಡು ಸುಂದರ ನಕ್ಷತ್ರ ಗುಚ್ಛಗಳು ಕಾಣುವುವು.

ಪೆಗಸಸ್ ಹಾಗೂ ಕಾಸಿಯೋಪಿಯಾ ನಡುವೆ ಕಾಣುವ ಕ್ಷೀಣ ಪುಂಜ ದ್ರೌಪದಿ (ಆಂಡ್ರೋಮಿಡಾ). ದುರ್ಬೀನಿನಿಂದ ಈ ಭಾಗವನ್ನು ಹುಡುಕಿದರೆ ಚುಕ್ಕೆಯಲ್ಲದ ಹತ್ತಿಯಂತಹ ಕಾಯ ಕಾಣುವುದು. ಅದೇ ಆಂಡ್ರೋಮಿಡಾ ಗ್ಯಾಲಕ್ಸಿ. ನಮ್ಮ ಸಮೀಪದ ದೊಡ್ಡ ಸುರುಳಿ ಗ್ಯಾಲಕ್ಸಿ.

ಸಂಜೆಯಾಗುವಾಗಲೇ ಪೂರ್ವದಲ್ಲಿ ಗೋಚರಿಸುವ ಇಂಗ್ಲಿಷ್ ಅಕ್ಷರ V ಆಕಾರದ ಗುಂಪಿಗೆ ಹೈಯಡೆಸ್ ಎಂಬ ಹೆಸರಿದೆ. ಇದು ವೃಷಭರಾಶಿ. ಪಕ್ಕದಲ್ಲಿ ಕಾಣುವ ಸುಂದರ ನಕ್ಷತ್ರ ಗುಚ್ಛವೇ ಕೃತ್ತಿಕಾ ಅಥವಾ ಪ್ಲೈಯಡಿಸ್. V ಆಕಾರದಲ್ಲಿ ಕಾಣುವ ಪ್ರಕಾಶಮಾನ ಕೆಂಪು ನಕ್ಷತ್ರ ರೋಹಿಣಿ ಅಥವಾ ಆಲ್ಡೆಬರಾನ್.

ನವೆಂಬರ್ ೩೦ರ ಸಂಜೆ ನೀವು ಚಂದ್ರನನ್ನು ಗಮನಿಸಿದ್ದಿರಾದರೆ ಅದರ ಪ್ರಕಾಶದಲ್ಲಿ V ಆಕಾರದ ನಕ್ಷತ್ರಗಳೆಲ್ಲಾ ಮಂಕಾಗಿರುವುವು. ಆದರೆ ಪ್ರಕಾಶಮಾನವಾದ ಚುಕ್ಕೆಯೊಂದು ಮಾತ್ರ ಎದ್ದು ಕಾಣುವುದು. ಇದೇ ಶನಿ ಗ್ರಹ. ಶನಿ ಮತ್ತು ಚಂದ್ರರ ನಡುವಿನ ಅಂತರವನ್ನು ನೆನಪಿಟ್ಟುಕೊಳ್ಳಿ ಅಥವಾ ನಿಮಗೆ ಸರಿಕಂಡಂತೆ ಗುರುತು ಹಾಕಿಕೊಳ್ಳಿ. ಮರುದಿನ ಬೆಳಿಗ್ಗೆ ಅಂದರೆ ಡಿಸೆಂಬರ್ ೧ರ ಬೆಳಿಗ್ಗೆ ೫ - ೫½ ಗಂಟೆಗೆ ಪಶ್ಚಿಮದಲ್ಲಿ ಚಂದ್ರನನ್ನು ನೋಡಿ. ಅದಕ್ಕೆ ಅಂಟಿದಂತಿರುವ ಶನಿಯನ್ನು ನೋಡಿ. ಅವುಗಳ ನಡುವಿನ ಅಂತರ ಕಡಿಮೆಯಾಗುತ್ತಿದೆ ಎಂದು ಗಮನಿಸಿ. ಇದರ ಅರ್ಥ ಸುಸ್ಪಷ್ಟ - ಚಂದ್ರ ಶನಿಯನ್ನು ಮರೆಮಾಡುವ ಸನ್ನಾಹದಲ್ಲಿದೆ ಎಂದು. ಈ ಬಗೆಯ ಗ್ರಹಣಕ್ಕೆ ''ಆಚ್ಛಾದನೆ'' (occultation) ಎಂಬ ಹೆಸರಿದೆ. ಈ ಘಟನೆಯ ನೋಟ ನಮಗೆ ಲಭ್ಯವಿಲ್ಲ. ಆದರೆ ಮುನ್ಸೂಚನೆ ಮಾತ್ರ ಸಿಗುತ್ತದೆ.

''ಹೊಸತು'' ನಿಮಗೆ ತಲುಪುವಲ್ಲಿ ಈ ಘಟನೆ ನಡೆದು ಹೋಗಿದ್ದರೆ ಏನೂ ಪರಿತಾಪ ಪಡಬೇಕಾಗಿಲ್ಲ. ಡಿಸೆಂಬರ್ ೧ರ ರಾತ್ರಿ ಎಂಟುಗಂಟೆಗೆ ''ಆಚ್ಛಾದನೆ'' ಮುಗಿಸಿಕೊಂಡಿರುವ ಶನಿ ಮತ್ತು ಚಂದ್ರ ನೋಡಲು ಸಿಗುತ್ತವೆ. ಎಂಟು ಗಂಟೆಯ ಹೊತ್ತಿಗೆ ಪೂರ್ವ ದಿಕ್ಕನ್ನು ಗಮನಿಸಿ. ಆರಿಗಾ ಮತ್ತು ಒರೈಯನ್ ನಕ್ಷತ್ರ ಪುಂಜಗಳ ನಡುವೆ ಚಂದ್ರ, ಅದಕ್ಕಿಂತ ಸ್ವಲ್ಪ ಮೇಲೆ ಶನಿ ಕಾಣುವುವು. ದಿಗಂತದ ಅಂಚಿನಲ್ಲಿ ಗುರುಗ್ರಹವೂ ಕಾಣುವುದು. ಸುಮಾರು ೯ ಗಂಟೆಗೆ ಮೂರೂ ಕಾಯಗಳು ಸ್ಪಷ್ಟವಾಗಿ ಕಾಣುವುವು.

೨೮ರ ರಾತ್ರಿ ಪುನಃ (ಒಂದು ಸುತ್ತು ಮುಗಿಸಿ ಬಂದ) ಚಂದ್ರ ಶನಿಯನ್ನು ಮರೆಮಾಡುವ ಸನ್ನಾಹ ನಡೆಯುತ್ತದೆ. ಇಡೀ ರಾತ್ರಿ ಶನಿ ಮತ್ತು ಚಂದ್ರ ಕಾಣಸಿಗುವುದರಿಂದ ಸಂಜೆ ಮತ್ತು ಮರುದಿನ ಬೆಳಿಗ್ಗೆ ಚಂದ್ರ ಮತ್ತು ಶನಿಯ ಓಟದ ಸ್ಪರ್ಧೆಯನ್ನು ಕಾಣಬಹುದು.

ರಾತ್ರಿ ಇಡೀ ಕಾಣುವ ಶನಿಗ್ರಹ ಸಾಕಷ್ಟು ಪ್ರಕಾಶಮಾನವಾಗಿದೆ. ದುರ್ಬೀನು ಅಥವಾ ದೂರದರ್ಶಕದಿಂದ ನೋಡಿದರೆ ಉಂಗುರಗಳನ್ನು ಗುರುತಿಸಬಹುದು.

ಪೂರ್ವದ ಅಂಚಿನಲ್ಲಿ (ಸಂಜೆ) ಕಾಣುವ ಗುರುಗ್ರಹ, ಈಗ ಗರಿಷ್ಠ ಪ್ರಕಾಶ ಪಡೆದಿದೆ. ಅದರ ಕಕ್ಷೆ ಭೂಮಿಯ ಕಕ್ಷಾತಲವನ್ನು ಹಾಯುವ ಪರ್ವಬಿಂದುವನ್ನು ಅದು ದಾಟುತ್ತಿರುವುದರಿಂದ ಮತ್ತು ಅದೇ ಹೊತ್ತಿಗೆ ಅದರ ದೂರ (ಭೂಮಿಯಿಂದ) ಕನಿಷ್ಠವಾಗುತ್ತಿರುವ ಕಾರಣ ಅದು ಗರಿಷ್ಠ ಪ್ರಕಾಶ ಪಡೆದಿದೆ. ದಕ್ಷಿಣದಂಚಿನಲ್ಲಿ ಕಾಣುವ ಸಿರಿಯಸ್‌ನ ಪ್ರಕಾಶವನ್ನು ಇದು ಮೀರಿಸುತ್ತಿದೆ. ೩ನೆಯ ತಾರೀಖು ಚಂದ್ರನ ಸಮೀಪವೇ ಕಾಣುವುದು. ೩೦ನೆಯ ತಾರೀಖು ಚಂದ್ರ ಅದನ್ನು ಮರೆಮಾಡುವ ಆಚ್ಛಾದನೆಯ ನೋಟ ನಮಗೆ ಲಭ್ಯವಿಲ್ಲ. ಆದರೆ ಓಟದ ನೋಟ ಲಭ್ಯ.

ಸಂಜೆಯಲ್ಲಿ ನೆತ್ತಿಯಲ್ಲಿ ಕಾಣುವ ಕೆಂಪು ಗ್ರಹ ಮಂಗಳ, ಮಕರ ರಾಶಿಯಿಂದ ಕುಂಭರಾಶಿಯತ್ತ ಚಲಿಸುತ್ತದೆ. ಸುತ್ತಲೂ ಕ್ಷೀಣ ನಕ್ಷತ್ರಗಳು. ೨೦-೨೧ ಈ ತಾರೀಖುಗಳಂದು ಚಂದ್ರ ಮಂಗಳದಿಂದ ದಕ್ಷಿಣಕ್ಕೆ ಹಾದುಹೋಗುತ್ತದೆ.

ಬೆಳಗಿನ ಪೂರ್ವದ ಅಂಚಿನಲ್ಲಿ ಕಾಣುವ ಶುಕ್ರ ದಿನೇದಿನೇ ಅಂಚಿಗೆ ಸರಿದು




*ಡಿಸೆಂಬರ್ ೧ರ ರಾತ್ರಿ, ಒಂಭತ್ತು ಗಂಟೆಗೆ ಪೂರ್ವ ದಿಕ್ಕಿನ ನೋಟ*




*ಭೂಮಿಯ ನೆರಳನ್ನು ಚಂದ್ರ ಹಾದು ಹೋಗುವುದೇ ಚಂದ್ರಗ್ರಹಣ*




ಕಾಣದಂತಾಗುತ್ತದೆ. ಬುಧ ಗ್ರಹ ಸಂಜೆ, ಸೂರ್ಯಾಸ್ತದ ನಂತರ ಪಶ್ಚಿಮದಲ್ಲಿ ಸ್ವಲ್ಪ ಹೊತ್ತು ಮಾತ್ರ ಕಾಣುತ್ತದೆ - ಹುಡುಕುವುದು ಕಷ್ಟವೇ.

೧೪ರ ಅಮಾವಾಸ್ಯೆಯಂದು ಕಂಕಣ ಗ್ರಹಣ. ಅಂದರೆ ಚಂದ್ರಬಿಂಬ ಸೂರ್ಯನನ್ನು ಪೂರ್ತಿಯಾಗಿ ಮುಚ್ಚದೇ ಸೂರ್ಯ ಬಳೆಯಂತೆ ಕಾಣುತ್ತದೆ. ಚಂದ್ರನ ನೆರಳು ಪೆಸಿಫಿಕ್ ಸಾಗರದುದ್ದಕ್ಕೂ ಬೀಳುವುದಾದರೂ, ಪನಾಮಾ ಕಾಲುವೆಯ ಬಳಿ ಮಾತ್ರ ಭೂಭಾಗದ ಮೇಲೆ ಬೀಳುತ್ತದೆ. ಉತ್ಸಾಹೀ ವೀಕ್ಷಕರು ಹಡಗುಗಳಲ್ಲಿ ಕುಳಿತು ಗ್ರಹಣ ವೀಕ್ಷಿಸುವ ಯೋಜನೆ ಹಾಕಿಕೊಂಡಿದ್ದಾರೆ.

ಗ್ರಹಣವಾದ ನಂತರ ೧೬ರ ಬಿದಿಗೆಯ ರೇಖಾ ಚಂದ್ರನನ್ನು ಹುಡುಕಿ, ಸಿಕ್ಕಿತೇ ? ಹಾಗಾದರೆ ಒಂದೇ ಡಿಗ್ರಿ ದಕ್ಷಿಣಕ್ಕೆ ಕಣ್ಣು ಹಾಯಿಸಿ. ಅಲ್ಲಿದೆ ಬುಧ ಗ್ರಹ.

೨೧ರ ಮಧ್ಯರಾತ್ರಿ ಸೂರ್ಯ ದಕ್ಷಿಣದ ತುದಿಯನ್ನು ಮುಟ್ಟಿ ಉತ್ತರಕ್ಕೆ ಹೊರಳುವುದು. ಇದೇ ಖಗೋಳ ವೈಜ್ಞಾನಿಕ ಉತ್ತರಾಯಣ.

ಗ್ರಹಣಗಳೆಷ್ಟಾದವು ? ಶನಿಯದು ಎರಡು, ಗುರುವಿನದು ಒಂದು, ಸೂರ್ಯನದು ಒಂದು – ಇಷ್ಟೇ ಅಲ್ಲ, ಚಂದ್ರನದೂ ಒಂದಿದೆ. ಆದರೆ ಇದನ್ನು ಜನಸಾಮಾನ್ಯರು ಗ್ರಹಣ ಎಂದು ಗುರುತಿಸಲಾರರು.

ಸಾಮಾನ್ಯವಾಗಿ ಚಂದ್ರ, ಭೂಮಿಯ ನೆರಳಿನ ಮಧ್ಯ ಭಾಗ, ಅಂದರೆ ಪೂರ್ಣ ಛಾಯಾ ಪ್ರದೇಶವನ್ನು ಹಾದು ಹೋದಾಗ ಮಾತ್ರ ನಮಗೆ ಅದು ಗೋಚರವಾಗುತ್ತದೆ. ಆದರೆ ಭೂಮಿಯ ನೆರಳಿನ ಇನ್ನೊಂದು ಭಾಗ ಪಾರ್ಶ್ವ ಛಾಯಾ ಪ್ರದೇಶವನ್ನು ಅದು ಹಾಯುವುದು ನಮಗೆ ತಿಳಿಯುವುದಿಲ್ಲ. ಡಿಸೆಂಬರ್ ೩೦ರಂದು ಚಂದ್ರ ನೆರಳಿನ ಮಧ್ಯ ಭಾಗವನ್ನು ಪ್ರವೇಶಿಸದೇ ಪಾರ್ಶ್ವ ಛಾಯಾ ಪ್ರದೇಶವನ್ನು ಮಾತ್ರ ದಾಟಿಹೋಗುತ್ತದೆ. ಇದನ್ನು penumbral eclipse ಅಂದರೆ ಪಾರ್ಶ್ವ ಛಾಯಾ ಗ್ರಹಣ ಎಂದು ಕರೆಯಬಹುದು. ಬೆಳಕಿನಲ್ಲಿ ಸ್ವಲ್ಪ ವ್ಯತ್ಯಾಸವಾಗಬಹುದು. ಆದರೆ ಬರಿಗಣ್ಣು ಈ ವ್ಯತ್ಯಾಸವನ್ನು ಗುರುತಿಸಲಾರದು.

ಡಿಸೆಂಬರ್ ಪೂರ್ತಿ ಚಟುವಟಿಕೆಗಳೇ ಆದುವಲ್ಲಾ ?! ವೀಕ್ಷಣೆಗೆ ಪ್ರಶಸ್ತವಾದ ಸಮಯ ಇದು. ಇಂದೇ ಆರಂಭಿಸಿ.

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

# ಭಾರತದಲ್ಲಿ ಕೈಗಾರಿಕಾ ಕ್ರಾಂತಿ ಏಕೆ ಆಗಲಿಲ್ಲ?

ಅಮೇರಿಕದ ಕಾಲೇಜು ವಿದ್ಯಾರ್ಥಿಗಳಲ್ಲಿ ಭಾರತದ ಬಗ್ಗೆ ವಿಶೇಷ ಆಸಕ್ತಿ ಇದೆ. ಅವರಲ್ಲಿ ಕೆಲವರ ತಿಳುವಳಿಕೆ ತಾವು ಓದುವ ದಿನಪತ್ರಿಕೆ ಅಥವಾ ನಿತ್ಯ ನೋಡುವ ದೂರದರ್ಶನದ ವರದಿಗಳ ಮೂಲಕ ಭಾರತದ ಬಗ್ಗೆ, ಭಾರತೀಯರ ಬಗ್ಗೆ ಪ್ರಚಾರದಲ್ಲಿರುವ ಯಥಾಪ್ರಕಾರದ ಪಡಿಯಚ್ಚುಗಳಿಗೆ ಸೀಮಿತವಾಗಿದ್ದರೂ ಇನ್ನು ಕೆಲವರು ಈ ಪಡಿಯಚ್ಚುಗಳನ್ನು ದಾಟಿ ಹೋಗಿ ಭಾರತದ ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆ, ಕುಟುಂಬ ವ್ಯವಸ್ಥೆ, ಸಾಮಾಜಿಕ ಮೌಲ್ಯಗಳ ಪ್ರಭಾವ, ಮತಧರ್ಮ ಮತ್ತು ತತ್ವಜ್ಞಾನ, ಭಾರತೀಯ ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಗಳು ಭಾರತೀಯರ ವ್ಯಕ್ತಿತ್ವವನ್ನು ಯಾವ ರೀತಿಯಲ್ಲಿ ರೂಪಿಸಿವೆ ಎನ್ನುವುದನ್ನು ತಿಳಿಯಲು ಪ್ರಾಮಾಣಿಕ ಪ್ರಯತ್ನ ನಡೆಸಿದ್ದಾರೆ.

ನಾನು ಸಂಘಟಿಸಿದ ಒಂದು ಸೆಮಿನಾರಿನಲ್ಲಿ ಎ. ಎಲ್. ಬ್ಯಾಷಮ್ ಅವರ 'ದಿ ವಂಡರ್ ದಟ್ ವಾಸ್ ಇಂಡಿಯಾ'ವನ್ನು ಓದಿ ಪ್ರಭಾವಿತಳಾದ ವಿದ್ಯಾರ್ಥಿನಿಯೊಬ್ಬಳ ಪ್ರಶ್ನೆ ಹೀಗಿತ್ತು : ''ಇಂಥ ವಿಶಿಷ್ಟವಾದ ಸಮಾಜ ಯಾಕೆ ಕೈಗಾರಿಕಾ ಕ್ರಾಂತಿಗೆ ಒಳಗಾಗಲಿಲ್ಲ?'' ಈ ಪ್ರಶ್ನೆಗೆ ಸಂಕ್ಷಿಪ್ತವಾದ ಉತ್ತರ ಕೊಡುವುದು ಕಷ್ಟ. ಈ ಸಂಕೀರ್ಣ ಪ್ರಶ್ನೆಯಿಂದ ಉದ್ಭವಿಸುವ ಕೆಲವು ವಿವಾದಾಂಶಗಳನ್ನು ವಿವರಿಸಲು ನಾನು ಮಾಡಿದ ಪ್ರಯತ್ನವನ್ನು ಇಲ್ಲಿ ಕನ್ನಡದಲ್ಲಿ ವರದಿ ಮಾಡಿದ್ದೇನೆ.

ಮೊದಲು ವಿಷದಪಡಿಸಬೇಕಾದ ಅಂಶವೆಂದರೆ ಬಂಡವಾಳಶಾಹಿ ಮತ್ತು ಕೈಗಾರಿಕಾ ಕ್ರಾಂತಿಯ ನಡುವಣ ಸಂಬಂಧ. ಬಂಡವಾಳಶಾಹಿ ಕೈಗಾರಿಕಾ ಕ್ರಾಂತಿಗೆ ಕಾರಣವಾಯಿತು ಎಂದು ಇತಿಹಾಸ ತಿಳಿಸುತ್ತದೆ. ಬಂಡವಾಳಶಾಹಿ ಎನ್ನುವುದು ಒಂದು ವಿಶಿಷ್ಟ ಮನೋವೃತ್ತಿ ಹಾಗೂ ಅದರಿಂದ ಪ್ರಭಾವಿತವಾದ ಒಂದು ಸಾಮಾಜಿಕ ವ್ಯವಸ್ಥೆ. ಈ ವ್ಯವಸ್ಥೆಯ ಗುಣಲಕ್ಷಣಗಳನ್ನು ತಿಳಿದುಕೊಂಡು ಅದು ಹೇಗೆ ಬೆಳೆಯಿತು ಎಂಬುದನ್ನು ಅವಲೋಕಿಸಬೇಕು. ಆಗ ಅದು ಕೇವಲ ಕೆಲವೇ ಸಮಾಜಗಳಲ್ಲಿ ಮಾತ್ರ ಏಕೆ ಬೆಳೆದು ಅಭಿವೃದ್ಧಿಗೊಂಡಿತು ಎನ್ನುವುದು ಸ್ಪಷ್ಟವಾಗುತ್ತದೆ.

ಮ್ಯಾಕ್ಸ್ ವೇಬರ್ (೧೮೬೪-೧೯೨೦) ಎಂಬ ಲೋಕ ವಿಖ್ಯಾತ ಜರ್ಮನ್ ಸಮಾಜಶಾಸ್ತ್ರಜ್ಞ ೧೯೦೫ರಲ್ಲಿ 'ದಿ ಪ್ರೊಟೆಸ್ಟಂಟ್ ಎಥಿಕ್ ಅ್ಯಂಡ್ ಸ್ಪಿರಿಟ್ ಆಫ್ ಕ್ಯಾಪಿಟಲಿಸ್ಮ್' ಎಂಬ ಸುಪ್ರಸಿದ್ಧ ಪ್ರಬಂಧ ಬರೆದು ಅದರಲ್ಲಿ ಪ್ರಾಟಸ್ಟಂಟ್ ನೀತಿಗೂ ಬಂಡವಾಳಶಾಹಿ ಮನೋವೃತ್ತಿಗೂ ನಿಕಟ ಸಂಬಂಧ ಕಲ್ಪಿಸಿದ್ದಾನೆ. ಪ್ರಾಟಸ್ಟಂಟ್ ಮತದ ನೀತಿಯಿಂದ ರೂಪುಗೊಂಡ ಸಮಾಜಗಳಲ್ಲಿ ಮಾತ್ರ ಬಂಡವಾಳಶಾಹಿ ಬೆಳೆಯಲು ಸಾಧ್ಯವಾಯಿತು ಎಂದು ಚಾರಿತ್ರಿಕ ಅಂಶಗಳನ್ನು ಆಧಾರವಾಗಿ ಕೊಟ್ಟು ತನ್ನ ವಾದವನ್ನು ಮಂಡಿಸಿದ್ದಾನೆ. ವೇಬರ್ ತನ್ನ ಇತರ ಕೃತಿಗಳಲ್ಲಿ ನಿರ್ದಿಷ್ಟವಾಗಿ ಚೀನಾ ಮತ್ತು ಭಾರತ ದೇಶಗಳ ಇತಿಹಾಸಗಳನ್ನು ಆಳವಾಗಿ ಅಭ್ಯಾಸ ಮಾಡಿ ಆ ದೇಶಗಳಲ್ಲಿ ವಿಜ್ಞಾನ, ಕಲೆ, ರಾಜನೀತಿ ಮತ್ತು ಆರ್ಥಿಕ ಬೆಳವಣಿಗೆ ಯಾಕೆ ಪಾಶ್ಚಿಮಾತ್ಯ ದೇಶಗಳಂತೆ ವೈಚಾರಿಕತೆಯನ್ನು ಮೈಗೂಡಿಸಿಕೊಂಡು ಮುಂದುವರಿಯಲಿಲ್ಲ ಎಂಬುದನ್ನು ವಿಶ್ಲೇಷಣೆ ಮಾಡಿದ್ದಾನೆ. ಇಲ್ಲಿ ಅದರ ಸಾರಾಂಶವನ್ನು ಕೊಡುವ ಪ್ರಯತ್ನ ಮಾಡಿದ್ದೇನೆ.

ಪ್ರಾಟಸ್ಟಂಟ್ ನೀತಿ ತತ್ವವನ್ನು ಪ್ರತಿಪಾದಿಸುವಾಗ ವೇಬರ್ ಕ್ಯಾಲ್ವಿನ್ ಪಂಗಡದ ಉದಾಹರಣೆ ಕೊಡುತ್ತಾನೆ. ಕ್ಯಾಲ್ವಿನರು ತಮ್ಮಲ್ಲಿ ಯಾರು ಮೋಕ್ಷ ಪಡೆಯುತ್ತಾರೆ, ಯಾರು ಶಾಪಗ್ರಸ್ತರಾಗಿ ನರಕವಾಸಿಗಳಾಗುತ್ತಾರೆ ಎಂಬುದನ್ನು ದೇವರು ಮೊದಲೇ ನಿರ್ಧರಿಸಿರುತ್ತಾನೆ ಎಂದು ನಂಬಿದ್ದರು. ಯಾರು ಮೋಕ್ಷಕ್ಕೆ ಅರ್ಹರು ಮತ್ತು ಯಾರಿಗೆ ನರಕವಾಸ ಕಾದಿದೆ ಎಂಬುದನ್ನು ಖಚಿತಪಡಿಸಿಕೊಳ್ಳಲು ಇಹಜೀವನದಲ್ಲಿ ಆ ನಿಟ್ಟಿನ ಲಕ್ಷಣಗಳಿಗಾಗಿ ಅವರು ಹುಡುಕತೊಡಗಿದರು. ಕಷ್ಟಪಟ್ಟು ನಿಷ್ಠೆಯಿಂದ ಕೆಲಸ ಮಾಡಿದರೆ ಮಾತ್ರ ಮೋಕ್ಷ ಸಾಧನೆಯ ಸೂಚನೆಗಳು ತೋರಿಬರುತ್ತವೆ ಎಂಬುದು ಅವರ ನಂಬಿಕೆಯಾಗಿತ್ತು. ಮೋಕ್ಷಕ್ಕೆ ಅರ್ಹರು ಎಂದು ಖಚಿತಪಡಿಸುವ ಒಂದು ಗುರುತರವಾದ ಸೂಚನೆಯೆಂದರೆ ಆರ್ಥಿಕ ಯಶಸ್ಸು. ಶ್ರೀಮಂತಿಕೆಯನ್ನು ಅವರು ಮೋಕ್ಷಾರ್ಹತೆಯ ಮುನ್ಸೂಚನೆ ಎಂದು ಪರಿಗಣಿಸಿ, ಪ್ರತಿಯೊಬ್ಬನೂ ಪ್ರಾಪಂಚಿಕ ವ್ಯವಹಾರಗಳಲ್ಲಿ ನಿಷ್ಠೆಯಿಂದ ಭಾಗವಹಿಸಿ ಉದ್ಯೋಗದಲ್ಲಿ ನಿರತನಾಗಲೇಬೇಕೆಂದು ಒತ್ತಾಯ ಪಡಿಸಿದರು. ಹೀಗೆ ಈ ನೀತಿ ತತ್ವದ ಪ್ರಕಾರ ಇಡೀ ಸಮುದಾಯ ಸಂಯಮದಿಂದ ವರ್ತಿಸಿ, ಶಿಸ್ತಿನ ಜೀವನ ನಡೆಸಬೇಕಾಗಿತ್ತು. ಈ ಸಂಯಮ ಮತ್ತು ಶಿಸ್ತು ಆರ್ಥಿಕ ವ್ಯವಹಾರದ ಅಡಿಗಲ್ಲಾಯಿತು.

ವೇಬರ್‌ನ ದೃಷ್ಟಿಯಲ್ಲಿ ಬಂಡವಾಳಶಾಹಿ ಬರಿ ಧನಲೋಭವಲ್ಲ. ಅದು ಲಾಭದಾಯಕ ಕೆಲಸಗಳನ್ನು ನೈತಿಕ ನಿಯಮಾನುಸಾರ ಸರ್ವರೂ ಅನುಸರಿಸುವಂತೆ ಮಾಡಿದ ಒಂದು ಸಾಮಾಜಿಕ ವ್ಯವಸ್ಥೆ. ಆರ್ಥಿಕ ಯಶಸ್ಸನ್ನು ಅನುಮೋದಿಸುವುದು ಅದರ ಒಂದು ಅಂಶ ಮಾತ್ರ. ಲಾಭ ಗಳಿಕೆಯನ್ನು ಒಂದು ನೈತಿಕ ಮೌಲ್ಯವನ್ನಾಗಿ ಮಾರ್ಪಾಡು ಮಾಡಿದ್ದು ಪಾಶ್ಚಿಮಾತ್ಯ ಸಮಾಜದಲ್ಲಿ ಕ್ರಾಂತಿಕಾರಕ ಬದಲಾವಣೆಗಳಿಗೆ ಕಾರಣವಾಯಿತು. ಬೇರೆ ಸಮಾಜಗಳಲ್ಲಿ ಲಾಭಗಳಿಕೆ ಒಂದು ವೈಯಕ್ತಿಕ ವಿಷಯವಾಗಿದ್ದು ಅದಕ್ಕೆ ಆ ವ್ಯಕ್ತಿಯ ಹಣದಾಸೆಯೇ ಮುಖ್ಯ ಕಾರಣವಾಗಿತ್ತು. ಇಂತಹ ಸಮುದಾಯಗಳಲ್ಲಿ ಅಲ್ಲೊಬ್ಬ, ಇಲ್ಲೊಬ್ಬ ಲಾಭದಾಯಕ ಕಸುಬಿನಲ್ಲಿ ನಿರತನಾಗಿದ್ದರೆ ಹೆಚ್ಚು. ಇಡೀ ಸಮುದಾಯ ಅಂತಹ ಕಸುಬುಗಳಲ್ಲಿ ನಿರತವಾಗಿರಬೇಕೆಂಬ ನೀತಿನಿಯಮವೇನಿರಲಿಲ್ಲ. ಪ್ರಾಟಸ್ಟಂಟ್ ನೀತಿ ಲಾಭ ಗಳಿಕೆಯನ್ನು ಒಂದು ರೀತಿಯ ಧರ್ಮಯುದ್ಧವಾಗಿ ಮಾರ್ಪಡಿಸುವುದರಲ್ಲಿ ಯಶಸ್ವಿಯಾಯಿತು. ಈ ನೈತಿಕ ವ್ಯವಸ್ಥೆಯ ಬಲದಿಂದ ಲಾಭಗಳಿಕೆಯ ವ್ಯವಹಾರಗಳು ವಿಸ್ತಾರಗೊಂಡು ಬಂಡವಾಳಶಾಹಿ ಬೆಳೆಯಿತು.

ಬಂಡವಾಳಶಾಹಿಯ ವೈಶಿಷ್ಟ್ಯವನ್ನು ಅದು ಅನುಮೋದಿಸುವ ನೀತಿನಿಯಮಗಳಲ್ಲಿ, ಮೌಲ್ಯಗಳಲ್ಲಿ ಕಾಣಬಹುದು. ಈ ವ್ಯವಸ್ಥೆಯ ಗುರಿ ಎಂದರೆ ವಿವೇಚನಾಯುತವಾಗಿ, ವ್ಯವಸ್ಥಿತ ರೀತಿಯಲ್ಲಿ ಲಾಭ ಗಳಿಸುವ ಮನೋವೃತ್ತಿಯನ್ನು ಜನರಲ್ಲಿ ಬೆಳೆಸುವುದು. ಅದು ದುಂದುಗಾರಿಕೆಯನ್ನು ಖಂಡಿಸಿ ದೈಹಿಕ ಶ್ರಮವನ್ನು ಶ್ಲಾಘಿಸುತ್ತದೆ. ಹಾಗೆಯೇ ''ವ್ಯವಹಾರದಲ್ಲಿ ಕುಶಲತೆಯುಳ್ಳವನು ದೇವರಿಗೆ ಪ್ರಿಯನಾಗುತ್ತಾನೆ,'' ''ಕಾಲವೆಂದರೆ ಹಣ,'' ''ಸದಾ ಕಾರ್ಯನಿರತರಾಗಿರಿ,'' ''ಮಿತವ್ಯಯಿಗಳಾಗಿರಿ,'' ''ಸಮಯ ಪ್ರಜ್ಞೆ ಬಗ್ಗೆ ನಿಗಾ ಇರಲಿ'' ಮುಂತಾದ ಕಾಯಕ ನಿಯಮಗಳನ್ನು ಸಮಾಜದಲ್ಲಿ ಅನುಷ್ಠಾನಕ್ಕೆ ಬರುವಂತೆ ಮಾಡಿತು. ಇವು ಬರಿಯ ವೈಯಕ್ತಿಕ ನಿಯಮಗಳಾಗಿ ಉಳಿಯದೆ ಇಡೀ ಸಮುದಾಯದ ಜೀವನವನ್ನು ರೂಪುಗೊಳಿಸಿ, ವ್ಯವಸ್ಥಿತವಾಗಿ ಮಾಡಿತು. ಹೀಗೆ ಬಂಡವಾಳಶಾಹಿ ಬರಡು ಸಂಪ್ರದಾಯ ಸಂಕೋಲೆಗಳನ್ನು ಕಿತ್ತೊಗೆದು ಶಿಸ್ತಿನಿಂದ ಕೂಡಿದ, ವೈಚಾರಿಕ ದೃಷ್ಟಿಯಿಂದ ಎಲ್ಲವನ್ನೂ ನೋಡುವ, ಆರ್ಥಿಕ ಅಭಿವೃದ್ಧಿಗೆ ಪ್ರಾಮುಖ್ಯತೆ ಕೊಡುವ ಸಮಾಜ ವ್ಯವಸ್ಥೆಯನ್ನು ಅನುಷ್ಠಾನಕ್ಕೆ ತಂದಿತು.

ಪ್ರಾಟಸ್ಟಂಟ್ ಸಮುದಾಯಗಳಲ್ಲಿ ವೈಚಾರಿಕತೆ ಮತ್ತು ಶಿಸ್ತು ನಿತ್ಯ ಜೀವನದ ಎಲ್ಲ ಕ್ಷೇತ್ರಗಳನ್ನೂ ಆವರಿಸಿಕೊಂಡವು. ಧಾರ್ಮಿಕ ವಿಧಿಗಳು ವೈಚಾರಿಕತೆಯಿಂದ ಮಾರ್ಪಾಡು ಹೊಂದಿದವು. ಸೃಜನಾತ್ಮಕ ಕಲೆಯಾದ ಸಂಗೀತ ಕೂಡ ವೈಚಾರಿಕತೆಯಿಂದ ಪ್ರಭಾವಿತಗೊಂಡು ವೇಬರ್ ಹೇಳುವಂತೆ ''ಅದು ಈಗಾಗಲೇ ಪರಿಚಿತವಾಗಿರುವ, ವಾದ್ಯಗಳ ಬಳಕೆಯೂ ಸೇರಿದಂತೆ, ರೀತಿ ನಿಯಮಗಳ ಇತಿಮಿತಿಯಲ್ಲೇ ಬದಲಾವಣೆಯ ಪ್ರಕ್ರಿಯೆಗೆ ಒಡ್ಡಿಕೊಂಡು ಸಾಗಿದೆ.''

ಕ್ರಿ. ಶ. ಹದಿನಾರು ಹಾಗೂ ಹದಿನೇಳನೆಯ ಶತಮಾನದ ಹೊತ್ತಿಗೆ ಪಾಶ್ಚಾತ್ಯ ಪ್ರಾಟಸ್ಟಂಟ್ ಸಮುದಾಯಗಳು ಬಂಡವಾಳಶಾಹಿ ವ್ಯವಸ್ಥೆಯನ್ನು ಮೈಗೂಡಿಸಿಕೊಂಡು ತ್ವರಿತಗತಿಯಿಂದ ಅಭಿವೃದ್ಧಿ ಹೊಂದಿದವು. ಆರ್ಥಿಕ ಅಭಿವೃದ್ಧಿ ಸಾಧಿಸಿದ ಇಂಥ ಸಮಾಜದಲ್ಲಿ ವ್ಯಾವಹಾರಿಕ ವಿದ್ಯೆ ಹರಡಿ, ವಿಜ್ಞಾನವು ಪ್ರಗತಿ ಹೊಂದಿದ್ದಲ್ಲದೆ ಯಂತ್ರ ಕುಶಲತೆಯೂ ಬೆಳೆದು ಕೈಗಾರಿಕಾ ಕ್ರಾಂತಿಗೆ ಎಡೆಮಾಡಿಕೊಟ್ಟಿತು.

ಭಾರತದಲ್ಲಿ ಕೈಗಾರಿಕಾ ಕ್ರಾಂತಿ ಆಗದಿರುವುದಕ್ಕೆ ಹಲವಾರು ಕಾರಣಗಳಿವೆ. ಕೆಲವು ಮುಖ್ಯ ಕಾರಣಗಳನ್ನು ಹೀಗೆ ಗುರುತಿಸಬಹುದು:

ಪುರಾತನಕಾಲದಿಂದಲೂ ಭಾರತದಲ್ಲಿ ಪಾರಮಾರ್ಥಿಕ ಮನೋಭಾವಕ್ಕೆ ಪ್ರಾಮುಖ್ಯತೆ ಕೊಡಲಾಗಿದೆ. ಹೊನ್ನು, ಮಣ್ಣು ಮುಂತಾದ ಭೌತಿಕ ವಸ್ತುಗಳೆಲ್ಲ ಮನುಷ್ಯರನ್ನು ಮಾಯಾಜಾಲದಲ್ಲಿ ಸಿಕ್ಕಿಸುವ ಸಾಧನಗಳೆಂದು ಪರಿಗಣಿಸಲಾಯಿತು. ಇದರಿಂದಾಗಿ ಪ್ರಪಂಚವನ್ನು ನಿರಾಕರಿಸುವ ವೈರಾಗ್ಯ ಭಾವನೆಗೆ ಒತ್ತುಕೊಡಲಾಯಿತು. ವೈಚಾರಿಕತೆಗೆ ಬದಲಾಗಿ ಅಂತರ್‌ದೃಷ್ಟಿಗೆ, ಆತ್ಮಜ್ಞಾನಕ್ಕೆ ಮಹತ್ವ ಕೊಡಲಾಯಿತು. ಪ್ರಾಪಂಚಿಕ ಕೆಲಸಗಳಲ್ಲಿ, ಕಸುಬುಗಳಲ್ಲಿ ನಿರತರಾಗುವುದಕ್ಕಿಂತ ಮಂತ್ರ ಕ್ರಿಯಾವಿಧಿಗಳು, ಕಾಡಿಗೆ ಹೋಗಿ ತಪಸ್ಸು ಮಾಡುವುದು ಮುಂತಾದವು ಪವಿತ್ರ ಕಾರ್ಯಗಳೆನಿಸಿಕೊಂಡವು.

ವೈ. ಆರ್. ಮೋಹನ್

ಶ್ರೀಕೃಷ್ಣ ಕರ್ಮಯೋಗ ಬೋಧಿಸಿದ. ಆದರೆ ಕರ್ಮ ಸಿದ್ಧಾಂತವು ಜಾತಿ ವ್ಯವಸ್ಥೆ ಮತ್ತು ಸಾಂಪ್ರದಾಯಿಕ ಆಚರಣೆಗಳಿಗೆ ಮಾತ್ರ ಸೀಮಿತವಾಯಿತು. 'ಕರ್ಮ ಮಾಡು, ಆದರೆ ಫಲಕ್ಕೆ ಆಸೆ ಪಡಬೇಡ' ಎಂಬುವ ನೀತಿ ಉನ್ನತ ಆದರ್ಶವಾಗಿ ತೋರಿದರೂ ಲಾಭ ಗಳಿಕೆಯ ದೃಷ್ಟಿಯಿಂದ ನಿಷ್ಪ್ರಯೋಜಕವಾಯಿತು. ವರ್ಣ ವ್ಯವಸ್ಥೆಯ ಮೇಲೆ ರಚಿತವಾದ ಸಮಾಜದಲ್ಲಿ ಸಾವಿರಾರು ಜಾತಿಗಳು ಹುಟ್ಟಿಕೊಂಡು ತಮ್ಮ ಕಟ್ಟುಕಟ್ಟಳೆಗಳಿಂದ ವ್ಯಕ್ತಿಗಳ ಸಾಮಾಜಿಕ ಏಳಿಗೆಯನ್ನು ಕುಂಠಿತಗೊಳಿಸಿದವು. ವಿದ್ಯೆ ಮೇಲ್ವರ್ಗದವರ ಸ್ವತ್ತಾಗಿ ಅದು ಕೇವಲ ಪವಿತ್ರ ಗ್ರಂಥಗಳ ಪಠಣಕ್ಕೆ, ಸಾಹಿತ್ಯ ವಿಷಯಗಳಿಗೆ ಸೀಮಿತವಾಯಿತು. ಪಾಂಡಿತ್ಯ ಪ್ರದರ್ಶನವೇ ವಿದ್ಯೆ ಎನಿಸಿಕೊಂಡಿತು. ಚೀನಾದ ಕನ್‌ಫ್ಯೂಷಿಯನ್ನರಂತೆ ಭಾರತದಲ್ಲೂ ವಿದ್ಯೆ ಕಲಿತವರು ಮೈ ಬಗ್ಗಿ ಕೆಲಸ ಮಾಡಿದರೆ ಅಂತಸ್ತಿಗೆ ಕಡಿಮೆ ಎನ್ನುವ ಮನೋಭಾವ ಬೆಳೆಸಿಕೊಂಡರು. ವೃತ್ತಿಗಳನ್ನೂ ಮೇಲು ಕೀಳು ಎಂದು ವರ್ಗೀಕರಣ ಮಾಡಲಾಯಿತು. ಜಪತಪ ಮಾಡುವುದು ನೇಗಿಲು ಹಿಡಿದು ಉತ್ತಿ ಬಿತ್ತುವುದಕ್ಕಿಂತ ಮೇಲು ಎನ್ನುವ ಭಾವನೆ ಆಳವಾಗಿ ಬೇರೂರಿತು. ''ಕೀಳು ಕಸುಬು''ಗಳನ್ನು ಮಾಡುವವರನ್ನು ಅಸ್ಪೃಶ್ಯರೆಂದು ಜರಿದು ಸಮಾಜದಿಂದ ಹೊರಗಿಡಲಾಯಿತು.

ಭಾರತದಲ್ಲಿ ನೀತಿತತ್ವ ಅನುಷ್ಠಾನದಲ್ಲಿ ನಕಾರಾತ್ಮಕವಾಯಿತು, ಎಂದರೆ - ಅದು ಮಾಡಬೇಡ, ಇದು ಮುಟ್ಟಬೇಡ, ಇದನ್ನು ತಿನ್ನಬೇಡ, ಕೀಳು ಜಾತಿಯವರ ಸಂಪರ್ಕ ಬೆಳೆಸಬೇಡ ಮುಂತಾದ ಮಡಿ ಮೈಲಿಗೆಯ ಕಟ್ಟು ಪಾಡುಗಳು ವಿಚಾರಪರತೆಯನ್ನು ಸ್ಥಗಿತಗೊಳಿಸಿದವು. ಮತಧರ್ಮ ತನ್ನ ಚೈತನ್ಯವನ್ನು ಕಳೆದುಕೊಂಡು ಸ್ವಾಮಿ ವಿವೇಕಾನಂದರು ಹೇಳಿದಂತೆ 'ಕಿಚನ್ ರಿಲಿಜನ್' ಆಯಿತು. ಜಾತೀಯತೆಯಿಂದ ವಿಭಜನೆಹೊಂದಿದ ಸಮಾಜದಲ್ಲಿ ಸಮಗ್ರವಾದ ಸಾಮುದಾಯಿಕ ಭಾವನೆ ಮೂಡಲಾಗದೆ, ಶಿಸ್ತುಗೇಡಿತನ ತಲೆದೋರಿತು. ಹೊರಗಿನಿಂದ ಬಂದವರು ಸುಲಭವಾಗಿ ಇಂತಹ ದುರ್ಬಲರಾದ ಜನರನ್ನು ಗೆದ್ದು ಸೂರೆಗೊಂಡಿದ್ದನ್ನು ಇತಿಹಾಸ ಸಾರಿ ಹೇಳುತ್ತದೆ. ಹೀಗೆ ವೇಬರ್ ಕೃತಿಗಳ ಸಾರಾಂಶ ಸಂಗ್ರಹಿಸಿದ ರಿಟ್ಜರ್ ಹೇಳಿರುವಂತೆ :

''ಬಂಡವಾಳಶಾಹಿ ಆರ್ಥಿಕ ಮೌಲ್ಯಗಳ ಆಧಾರದ ಮೇಲೆ ವ್ಯವಸ್ಥೆಯನ್ನು ರೂಪಿಸುವಂತಹ ಜನಸಮುದಾಯವನ್ನು ಸೃಷ್ಟಿಸುವ ನಿಟ್ಟಿನಲ್ಲಾಗಲಿ, ಅದಕ್ಕಿಂತಲೂ ಹೆಚ್ಚಾಗಿ ವೈಚಾರಿಕ ಚೌಕಟ್ಟಿನೊಳಗೆ ವ್ಯವಹರಿಸುವ ಸಮಾಜ ವ್ಯವಸ್ಥೆಯೊಂದನ್ನು ಅಸ್ತಿತ್ವಕ್ಕೆ ತರುವ ನಿಟ್ಟಿನಲ್ಲಾಗಲಿ ಹಿಂದೂ ಧರ್ಮ ಸಂಪೂರ್ಣವಾಗಿ ಸೋತಿದೆ.''

ಅಲ್ಲದೆ ಇನ್ನೂ ಅನೇಕ ಕಾರಣಗಳಿಂದಾಗಿ, ಮುಖ್ಯವಾಗಿ ಮತೀಯ ಹಾಗೂ ಸಾಮಾಜಿಕ ಅಡಚಣೆಗಳಿಂದಾಗಿ ಬಂಡವಾಳಶಾಹಿ ಮನೋವೃತ್ತಿ ಮತ್ತು ವ್ಯಾವಹಾರಿಕ ದೃಷ್ಟಿಯಿಂದ ವ್ಯವಸ್ಥಿತವಾದ ಸಮಾಜ ಭಾರತದಲ್ಲಿ ಅಸ್ತಿತ್ವಕ್ಕೆ ಬರಲು ಸಾಧ್ಯವಾಗಲಿಲ್ಲ. ಈ ಅಂಶಗಳು ಕೈಗಾರಿಕಾ ಕ್ರಾಂತಿಯು ಭಾರತದಲ್ಲಿ ಮೊದಲು ಏಕೆ ಸಂಭವಿಸಲಿಲ್ಲವೆನ್ನುವುದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳನ್ನು ನೀಡುತ್ತವೆ.

ಇತಿಹಾಸದಲ್ಲಿ ಸಮಾಜದ ಸ್ಥಿರತೆ ಹಾಗೂ ಬೆಳವಣಿಗೆಗೆ ಮಾನವ ವಿಭಿನ್ನ ದಾರಿಗಳನ್ನು ಕ್ರಮಿಸಿರುವುದು ನಮ್ಮ ಗಮನವನ್ನು ಸೆಳೆಯುತ್ತದೆ. ಗುಲಾಮಿ ಪದ್ಧತಿಯನ್ನು ಊಳಿಗಮಾನ್ಯ ಪದ್ಧತಿ ಪಲ್ಲಟಿಸಿತು. ಊಳಿಗಮಾನ್ಯ ಪದ್ಧತಿಗಿಂತ ಬಂಡವಾಳಶಾಹಿ ವ್ಯವಸ್ಥೆ ಹೆಚ್ಚು ಫಲಕಾರಿಯಾಗಿ ಔದ್ಯೋಗಿಕ ಕ್ರಾಂತಿಗೆ ಕಾರಣವಾಯಿತು. ಊಳಿಗಮಾನ್ಯ ವ್ಯವಸ್ಥೆಗಿಂತ ಬಂಡವಾಳಶಾಹಿ ವ್ಯವಸ್ಥೆ ಅಧಿಕ ಉತ್ಪನ್ನವನ್ನು ನೀಡುವ ಪ್ರಗತಿದಾಯಕ ಪಥವಾಯಿತು. ಸಮಾಜದ ಪ್ರತಿಯೊಂದು ಹಂತದಲ್ಲೂ ವಿಭಿನ್ನ ಪದ್ಧತಿಗಳ ನಡುವೆ ವೈರುಧ್ಯಗಳು ಉಂಟಾಗಿ ಅಧಿಕ ಉತ್ಪನ್ನ ಗಳಿಸುವ ವ್ಯವಸ್ಥೆ ಪ್ರಗತಿದಾಯಕವಾಗಿ ಪರಿಣಮಿಸಿತು. ಈ ಹಿನ್ನೆಲೆಯಲ್ಲಿ ಭಾರತದ ಅಭಿವೃದ್ಧಿ ಪಥವನ್ನು ಅವಲೋಕಿಸಿದಾಗ ಊಳಿಗಮಾನ್ಯ ಪದ್ಧತಿಯ ಅನೇಕ ಅಂಶಗಳು ಇಂದಿಗೂ ಉಳಿದಿರುವುದು ಸ್ಪಷ್ಟವಾಗಿದೆ. ಕೃಷಿ ಉತ್ಪನ್ನ ಅತ್ಯಧಿಕವಾಗದಿರಲು ಇದೂ ಒಂದು ತೊಡಕೆಂಬುದು ಗಮನಾರ್ಹವಾಗಿದೆ. ಒಂದು ಕಾಲಮಾನದಲ್ಲಿ ಪ್ರಗತಿದಾಯಕವಾಗಿರುವುದು ಮತ್ತೊಂದು ಕಾಲಮಾನದಲ್ಲಿ ಪ್ರಗತಿಗೆ ಅಡ್ಡ ಬಂದಿರುವುದನ್ನು ಚರಿತ್ರೆಯ ಘಟನೆಗಳು ಸಾಬೀತುಪಡಿಸುತ್ತವೆ.

ವೈ. ಆರ್. ಮೋಹನ್
ಟಸ್ಕಲೂಸ, ಅಲಬಾಮ, ಅಮೆರಿಕ

# ಬೆಂಗಳೂರಿನವರು ಮಂಗಳೂರಿಗೆ ಬಂದಾಗ



"ದಕ್ಷಿಣ ಕನ್ನಡದ (ಉಡುಪಿ ಸೇರಿ) ತುಳುವ ಜನರಾದ ನೀವು ಬುದ್ಧಿವಂತರು; ಮೀನು ತಿನ್ನುವವರು. ನಿಮ್ಮಲ್ಲಿ ತುಂಬ ಮೀನು ಸಿಗುತ್ತದಂತೆ" ಎಂದು ಮಂಗಳೂರಿನತ್ತ ಬಂದ ಬೆಂಗಳೂರಿನ ರಾಜಕಾರಣಿಗಳು, ಮಂತ್ರಿ ಮಾಗಧರು ಅನ್ನುವುದುಂಟು.

ಬುದ್ಧಿವಂತರೆಂಬ ಮಾತು ಪ್ರಶಂಸೆಯೂ ಇದ್ದೀತು, ವ್ಯಂಗ್ಯವೂ ಇದ್ದೀತು. ವ್ಯಂಗ್ಯ ಇಷ್ಟಕ್ಕೇನೇ: ಅವರ ಇಂಗಿತ "ನಿಮ್ಮ ಬುದ್ಧಿವಂತಿಕೆ ಎಷ್ಟೇ ಇರಲಿ, ಅದು ನಮ್ಮ ಬೆಂಗಳೂರಿನಲ್ಲಿ ನಡೆಯುವುದಿಲ್ಲ; ನಡೆಯಗೊಳಿಸೆವು; ನಿಮ್ಮ ಬೇಳೆ ಇಲ್ಲಿ ಬೇಯಲಿಕ್ಕೆ ನಾವು ಬಿಡೆವು" ಎಂದು ಅವರೆಂಬರು. "ನಮ್ಮಲ್ಲಿ ಕಾರುಬಾರುಗಳೆಲ್ಲ ಬೇರೆ ಬೇರೆ ಜಾತಿಗಳವರದು. ಅವರು ನಿಮ್ಮ ಜಿಲ್ಲೆಗಳ ಕೈ ಬೆರಳೆಣಿಕೆಯಲ್ಲಿರುವ ವಿಧಾನಸಭಾ ಸದಸ್ಯರ ಆರ್ಭಟೆಯನ್ನು ಅರಣ್ಯರೋದನವನ್ನಾಗಿಸುವವರು. ಅದೇನು ನಿಮ್ಮ ಜಿಲ್ಲೆಯಲ್ಲಿ ಸ್ವಾಗತವಿಲ್ಲವೆಂಬುದನ್ನು ಮರೆತಿಲ್ಲ.

"ನಿಮ್ಮವರು ಬೆಂಗಳೂರಿಗೆ ಬಂದು ತಂಗಿದಾಗ ನೀವು 'ಉಡುಪಿ'ನಿಂದ (ಬತ್ತಲೆಯಲ್ಲ) ಅಥವಾ ಮುಂಬಯಿನಿಂದ ಬಂದ ತುಳುವರು ಎಂದು ನನಗೆ ಆಗಲೇ ಗೊತ್ತಾಗಿಬಿಡುತ್ತದೆ ಎನ್ನುವರು ನಮ್ಮ ಹೋಟೆಲು ಮಾಲಿಕರು. ಮಾ'ನಿ', ನಮಗೆ ಗೋ'ಲಿ' ಬಜೆ, ಒ'ಲ್ಲೆ' ಮೆ'ನ'ಸಿನ ಖಡಾಕ್ ಕ'ಸಾ'ಯ ಅಂದಿದ್ದೀರಲ್ಲವೇ, ಎಂಬ ನಿಮ್ಮ ಮಾತನ್ನು ಪುನರುಚ್ಚರಿಸಿ ಲೇವಡಿ ಮಾಡುವರಂತೆ. ಅದಕ್ಕೆಲ್ಲ ನಿಮ್ಮ ಉಡುಪಿ ಹೋಟೆಲುಗಳೇ ವಾಸಿ. ನಮ್ಮಲ್ಲಿ ನಮ್ಮ ದೋಸೆ ತಿಂದು ನೋಡಿ - ಕಾಫಿಯೊಂದಿಗೆ. ಪೇಪರ್ ದೋಸೆ, ಫ್ಯಾಮಿಲಿ ದೋಸೆ, ಸೆಟ್ ದೋಸೆ – ಇನ್ನೂ ಹಲವಾರು" ಎಂದು ಪರ್ಯಾಯ ತಿಂಡಿಗಳ ವಿವರಣೆ ನೀಡುವರಂತೆ.

ಅದೇನು ದಕ್ಷಿಣ ಕನ್ನಡದ ನಿಮ್ಮ ವಿದ್ಯಾರ್ಥಿಗಳು ವರ್ಷಂಪ್ರತಿ ಪ್ರಥಮ ದರ್ಜೆಯಲ್ಲಿ ಪಾಸಾಗುವುದು !

ವಿಪರೀತವಾದ ಬೇಡಿಕೆಗಳು, ವಾದಗಳು, ಹೋರಾಟಗಳು ? ನೀವು 'ಕರೆಂಟ್' ಬೇಕೆನ್ನುವಿರಿ, ಆದರೆ ಬೃಹತ್ ವಿದ್ಯುತ್ ಘಟಕಗಳನ್ನು ಹಾಕಿಸಲು ವಿರೋಧಿಸುವಿರಿ. 'ನಿರುದ್ಯೋಗಿಗಳಿಗೆ ಉದ್ಯೋಗ ಕೊಡಿಸಿ' ಎನ್ನುವಿರಿ. ಆದರೆ 'ಎಂ. ಆರ್. ಪಿ. ಎಲ್. ನಂತಹ ಕೋಟಿಗಟ್ಟಲೆ ಬಂಡವಾಳವನ್ನು ಕಿತ್ತೊಗೆಯಿರಿ' ಎನ್ನುವಿರಿ. 'ಕಾಸರಗೋಡನ್ನು ರಾಜ್ಯಕ್ಕೆ ಸೇರಿಸಿ' ಎಂದು ಪಟ್ಟು ಹಿಡಿದಿರುವಿರಿ. ಆ ಬಗ್ಗೆ ನಮಗಿರುವ ಕಳಕಳಿಯನ್ನು 'ಬರೆ ಮೊಸಳೆಗಣ್ಣೀರಿಳಿಸುವಿಕೆ'ಯೆಂದು ಕಡೆಗಣಿಸಿರುವಿರಿ. ಇದ್ಯಾವ ನ್ಯಾಯ? 'ದಿನನಿತ್ಯ ಘಟಿಸುತ್ತಿರುವ ನಮ್ಮ ರಸ್ತೆಗಳ ಅವಘಡಗಳು, ರಕ್ತಸ್ರಾವ, ಪ್ರಾಣ ಬಲಿಗಳು ನಮ್ಮ ರಸ್ತೆಗಳ ಬಗ್ಗೆ ಸರಕಾರ ತೋರಿಸುತ್ತಿರುವ ದಿವ್ಯ ನಿರ್ಲಕ್ಷ್ಯತೆಯನ್ನು ಸಾರುತ್ತಿದೆ' ಎಂದೆನ್ನುವಿರಿ. ಆದರೆ ಇವೆಲ್ಲ ನಮ್ಮ ಮೇಲೆ ನೀವು ಹೊರಿಸುತ್ತಿರುವ ನಿರಾಧಾರ ಆಪಾದನೆಗಳು. ಪ್ರಾಣಗಳನ್ನು ಬಲಿ ತೆಗೆದುಕೊಳ್ಳುತ್ತಿರುವುದು ರಕ್ತ ಪಿಪಾಸಿಗಳಾದ ನಿಮ್ಮ ಭೂತಗಣಾದಿಗಳು, ರಕ್ತೇಶ್ವರಿಗಳು. ಅವು ಅದೃಶ್ಯವಾಗಿ ರಸ್ತೆಯುದ್ದಕ್ಕೂ ತಮ್ಮ ಕೆನ್ನಾಲಿಗೆಗಳನ್ನು ಚಾಚಿ ಕಾದುನಿಂತಿವೆ ಎಂಬುದು ನಿಮಗರಿಯದೇ ? ನಿಮ್ಮ ಜಿಲ್ಲೆಗಳಲ್ಲಿ ಅವುಗಳ ಪೀಳಿಗೆಗಳೆಷ್ಟು ? ಅವುಗಳಿಗಾಗಿ ರಚಿಸಿದ ಗುಡಿ ಗೋಪುರಗಳೆಷ್ಟು ? ನಾಗಬನಗಳೆಷ್ಟು ? ಅಲ್ಲಿ 'ನಾಗನಡೆ', ಇಲ್ಲಿ 'ನಡೆ', ಎಲ್ಲೆಲ್ಲಿಯೂ 'ನಡೆ' ಎಂದೆಂದುಕೊಂಡು ಅಭಿವೃದ್ಧಿ ಕಾರ್ಯಕ್ರಮಗಳಿಗೆ ಅಡ್ಡಿಯನ್ನೊಡ್ಡುವಿರಿ. ನಿಮ್ಮಲ್ಲಿ ಅದೆಷ್ಟು ದೈವ ದೇವಸ್ಥಾನಗಳು ? ಯಾವ ದಿನಗಳಲ್ಲಿಯೂ, ಎಲ್ಲೆಲ್ಲಿ ಕಂಡರೂ ಸಾರಿಗೆಯನ್ನು ಸ್ಥಗಿತಗೊಳಿಸುವ ಸಾರ್ವಜನಿಕ ಜಾತ್ರೆಗಳು, ಜನಜಂಗುಳಿ, ಪೂಜೆ, ಅರ್ಚನೆ, ದೇವಮಾನವರೆಂಬುವರ ವೈಭವೀಕರಣ, ಮೆರವಣಿಗೆಗಳು !" 'ಇವೆಲ್ಲ ನಮ್ಮ ಸಂಸ್ಕೃತಿಯ ಪ್ರತೀಕ'ವೆಂದಾಗ ಕುಚೋದ್ಯಕ್ಕೆ ಬೇಸತ್ತು ತಥಾಸ್ತು. "ಅದೇ ಗುಂಗಿನಲ್ಲಿರಿ. ಅದು ನಿಮಗೆ ಅಫೀಮು ಆಗಲಿ" ಎಂಬರು ಬೆಂಗಳೂರಿನಿಂದ ಬಂದ ರಾಜಕಾರಣಿಗಳು.

'ತುಳುವರಾದ ನಾವು ಶಾಂತಿ ಪ್ರಿಯರು; ನಮ್ಮ ಹೋರಾಟಗಳೆಲ್ಲ ಶಾಂತಿಯುತ. ನಕ್ಸಲೀಯರಂತೆ ಅಥವಾ ಬೋಡೊ ಜನರಂತೆ ನಾವು ಉಗ್ರವಾದಿಗಳಲ್ಲ. ಅದು ತಲಾಂತರದಿಂದ ನಡೆದುಬಂದ ನಮ್ಮ ಸಂಸ್ಕೃತಿಯಲ್ಲಿಲ್ಲ' ಎಂದೇನಾದರೂ ಅಂದರೆ "ಅದು ನಮಗೆ ಗೊತ್ತು. ತುಳುವರು 'ರಾಜಾ ಪ್ರತ್ಯಕ್ಷ ದೇವತಾ' ಎಂಬ ನಂಬಿಕೆಯುಳ್ಳವರು. ನಿಮ್ಮ ರಾಜಧಾನಿ ಬೆಂಗಳೂರಲ್ಲವೇ ?" ಎಂದೆನ್ನುವರು ಬೆಂಗಳೂರಿನ ರಾಜಕಾರಣಿಗಳು.

"ಅಂದು ನಿಮಗೆ ಲಭಿಸಿದ್ದ 'ಉಳುವವನೇ ಹೊಲದೊಡೆಯ' ಎಂಬ ಶಾಸನ ಬೆಂಗಳೂರಿನಲ್ಲಿ ನಡೆದ ನಿಮ್ಮ 'ಅರಸರ' ರಾಜಕೀಯ ಕೊಡುಗೆ ವಿನಾ ರೈತ ಚಳುವಳಿಯದಲ್ಲ ಎಂಬುದನ್ನು ಮರೆತಿರುವಿರೇ ? ಅದೊಂದು ನಿಮ್ಮೊಳಗಿನ ಕೊಡುಕೊಳ್ಳುವಿಕೆಯಾಗಿತ್ತು. ಅದರಿಂದಾಗಿ ನಮ್ಮ ಸರಕಾರಿ ಖಜಾನೆಗೆ ಯಾವ ಧಕ್ಕೆಯೂ ಆಗಿಲ್ಲ ಎಂಬ ಮಾತು ಅಲಾಯಿದ. ಈ ಶಾಸನ ಜಾರಿಗೆ ಬರುವ ಅದೆಷ್ಟೋ ದಶಕಗಳ ಹಿಂದೆ ನಿಮ್ಮ ಜಿಲ್ಲೆಯ ದಕ್ಷಿಣದ ತುತ್ತತುದಿಯಲ್ಲಿ ಕೇರಳೀಯ ವಾಮ ಪಂಥೀಯರಿಂದ ಪ್ರಭಾವಿತವಾದ 'ಕೈಯೂರ ರೈತ ಕ್ರಾಂತಿ' ಅಲ್ಲಿಯೇ ಕ್ಷಣಿಕವಾಗಿ ಮಿಂಚಿ ದಕ್ಷಿಣಾಭಿಮುಖವಾಗಿ ಮಾಯವಾಯಿತು. ಅದಕ್ಕೆ ನಿಮ್ಮ




ಅವರಷ್ಟು ಬುದ್ಧಿವಂತರಿರುವುದು ! ಮೀನು ತಿನ್ನುವುದರಿಂದಲೇ, ಎಂದು ಕುತೂಹಲವನ್ನು ತೋರಿಸಿದರೆ 'ಮೀನಿನಲ್ಲಿರುವ ಪೋಷಕಾಂಶ ಮೊಸರಿನಲ್ಲಿಯೂ ಇದೆ. ಸಮತೋಲನವಾಗಿ ಅಟ್ಟ ಕಾಯಿಪಲ್ಯಗಳಲ್ಲಿಯೂ ಇದೆ, ಗೆಡ್ಡೆಗೆಣಸುಗಳಲ್ಲಿಯೂ ಇದೆ' ಎನ್ನುವಿರಿ. 'ನಮ್ಮಲ್ಲಿ ಶುದ್ಧ ಶಾಕಾಹಾರಿಗಳಿದ್ದಾರೆ: ಬುದ್ಧಿಜೀವಿಗಳು, ಮೇಧಾವಿಗಳು ಪ್ರತಿಭಾವಂತರು ! ಹೊಟ್ಟೆ ತಣ್ಣಗಾಗಿರಿಸಿದರೆ ಮಾತ್ರ ತಲೆ ತಣ್ಣಗಾಗಿರುವುದು. ಆಗ ಓದಿದ್ದು ಮಂದಟ್ಟಾಗುವುದು. ಹೀಗಿರುವಾಗ ವಿದ್ಯಾರ್ಥಿಗಳು ಬುದ್ಧಿವಂತರಾಗುವುದರಲ್ಲಿ ಆಶ್ಚರ್ಯವೇನಿದೆ ?' ಅನ್ನುತ್ತಿರುವಿರಿ. 'ಇದಕ್ಕಾಗಿಯೇ ನಾವೆನ್ನುವುದು ನಮ್ಮ ನೆಲ ಜಲ ವಾಯು ವಾತಾವರಣವನ್ನು ಕಲುಷಿತಗೊಳಿಸಬೇಡಿ. ನೀವು ಈಗಾಗಲೇ ತೆರೆದ ತೋಡು ನಿರ್ಮಾಣದಿಂದಾಗಿ ಮಂಗಳೂರಿನ ಕುಳಾಯಿಯನ್ನು ಬೆಂಗಳೂರಿನ 'ಕೆಂಗೇರಿ' ಕೊಳಚೆಗೇರಿಯನ್ನಾಗಿಸಿರುವಿರಿ. ಕಾರ್ಖಾನೆಗಳ ಶುದ್ಧೀಕರಿಸದ ಕೊಳಕು ನೀರನ್ನು ಅದರಲ್ಲಿ ಹರಿಯಬಿಟ್ಟಿದ್ದೀರಿ. ಸಮುದ್ರದ ನೀರನ್ನು ಕೆಡಿಸಿದ್ದೀರಿ. ಮೀನಿನ ಸಂತತಿ ಪಲಾಯನಗೊಳ್ಳುತ್ತಿದೆ. ನೆಲ, ಜಲ, ವಾಯು ಪ್ರದೂಷಣದಿಂದಾಗಿ ನಾಡು ಬರಿದಾಗುತ್ತಿದೆ. ಉಳಕೊಳ್ಳಲು ಸ್ಥಳವಿಲ್ಲವೆಂಬಂತೆ ನಮ್ಮ ನಿಬಿಡ ಜನಸಂಖ್ಯೆಯ ಜನಗಳೆಲ್ಲ ಬೊಂಬಾಯಿ, ದುಬಾಯಿಯತ್ತ ವಲಸೆ ಹೋಗುತ್ತಿದ್ದಾರೆ. ಬೌದ್ಧಿಕ ಸ್ಫೋಟಗೊಳ್ಳುತ್ತಿರುವ ನಮ್ಮ ಜಿಲ್ಲೆಯ ಯುವಪೀಳಿಗೆಗೆ ಅಲ್ಲಿಯೂ ಕಡಿವಾಣ ಬೀಳುತ್ತಿದೆ. ಇದು ಮುಂದುವರಿದರೆ ಆಗ ಅವರಿಗೊಂದೇ ದಾರಿ - ತಮ್ಮ ರಾಜಧಾನಿಯಾದ ಬೆಂಗಳೂರಿನತ್ತ ವಲಸೆ ಹೋಗುವುದು. ಆಗ ಬೆಂಗಳೂರು ಮಂಗಳೂರಾದೀತು. ನಮ್ಮ ಸಹನೆಗೂ ಒಂದು ಮಿತಿ ಇದೆ ಎಂದು ತಿಳಿದೀತು' ಎಂದು ಎಚ್ಚರಿಕೆ ನೀಡುತ್ತಿರುವಿರಿ ಎಂದು ಅಂದುಕೊಂಡು "ಈ ತುಳುವರಲ್ಲಿ ಏನೆಲ್ಲ ದ್ವಂದ್ವಗಳು, ವಿಪರ್ಯಾಸಗಳು" ಎಂದು ಅಚ್ಚರಿ ಪಡುವರು ಬೆಂಗಳೂರಿನಿಂದ ಬಂದ ರಾಜಕಾರಣಿಗಳು.

ಈ ವಿಡಂಬನೆಯಿಂದ ಯಾರೂ ಕುಪಿತರಾಗುವುದಿಲ್ಲ, ಅಲ್ಲವೆ !

ಟಿ. ಸಿ. ಶ್ರೀಯಾನ್
'ಮನೋರಮಾ', ಮಾರಿಗುಡಿ ರಸ್ತೆ, ಸುರತ್ಕಲ್ -೫೭೫೦೧೪


ನೋಡಯ್ಯಾ, ಬಾಗೂರು ನವಿಲೂರು ಅಂತ ಈಗ ಕ್ಯಾತೆ ತೆಗೀಬೇಡ... ಈಗ ತಾನೆ ನಾನು ಪಾದಯಾತ್ರೆ ಮಾಡಿ ಬಂದಿದ್ದೀನಿ... ಇನ್ನು ನಿನ್ನ ಸಮಸ್ಯೆಗಳೆಲ್ಲ ಪರಿಹಾರ ಆಗುತ್ತದೆ
....
ಗೌಡಂಗೆ, ಜೈ!


ಅಮೆರಿಕ


ಏ, ಅದರ ಮೇಲೆ ಬೀಳಬೇಡ... ಪಕ್ಕದಲ್ಲಿ ಬೀಳು!
ಅಫಘಾನಿಸ್ತಾನ
ಅಧಿಕಾರ


ಪೋಟೋ ಸೆಷನ್...


WTO

# ಮೂಢನಂಬಿಕೆಯ ಹಾದಿಯಲ್ಲಿ...

ಶ್ರೀನಿವಾಸ ಕಾರ್ಕಳ

**ಮ**ಂಗಳೂರು ನಗರದ ಹೊರವಲಯ. ರಸ್ತೆ ಬದಿಯಲ್ಲಿ ಒಂದು ಆಲದ ಮರ. ಅದಕ್ಕೊಂದು ಭರ್ಜರಿಯಾದ ಸಿಮೆಂಟ್ ಕಟ್ಟೆ. ಹಳೆಯದಾದ ಮರ ಗಾಳಿ ಮಳೆಯ ಅಬ್ಬರಕ್ಕೆ ಧರೆಗೆ ಒರಗುವುದರಲ್ಲಿ ವಿಶೇಷವೇನೂ ಇಲ್ಲ ತಾನೇ ? ಹಾಗೆಯೇ ಈ ಆಲದ ಮರವೂ ಒಂದು ದಿನ ಕಟ್ಟೆ ಸಹಿತವಾಗಿ ಉರುಳಿಬಿತ್ತು. ಸಹಜವಾಗಿ ಅದೊಂದು ಸುದ್ದಿಯಾಗಲಿಲ್ಲ. ಆದರೆ ಕೆಲವೇ ದಿನಗಳಲ್ಲಿ ಯಾವ, ಯಾರ ನೆರವೂ ಇಲ್ಲದೆ ಆ ಮರ ಮತ್ತೆ ಮೊದಲಿನಂತೆ ಎದ್ದು ನಿಂತಿತು ! ಮತ್ತು ಇದೊಂದು ಭಯಂಕರ ಸುದ್ದಿಯಾಯಿತು. ತಗೊಳ್ಳಿ, ಮುಂದಿನ ಕತೆ ಹೇಳಬೇಕಾಗಿಯೇ ಇಲ್ಲ. ಎಲ್ಲ ಪವಾಡಗಳಂತೆ ಈ ಸುದ್ದಿಯೂ ಕಾಳ್ಗಿಚ್ಚಿನಂತೆ ಹಬ್ಬಿತು. ಕುತೂಹಲಿಗರು ತಂಡೋಪತಂಡವಾಗಿ ಮುಗಿಬೀಳತೊಡಗಿದರು. ಬಿದ್ದ ಮರ ಎದ್ದು ನಿಂತ ಘಟನೆಯ ಹಿಂದಿನ ಕಾರ್ಣಿಕದ ಬಗ್ಗೆ ಬಗೆಬಗೆಯ ಕತೆಗಳು ರಚಿತವಾದವು. ಕುತೂಹಲಿಗರೆಲ್ಲ ಭಕ್ತಾದಿಗಳಾಗಿ ಪರಿವರ್ತಿತರಾದರು. ಭಕ್ತಾದಿಗಳ ಹರಕೆಯನ್ನು ದೇವರಿಗೆ ತಲುಪಿಸಲು ಮಧ್ಯವರ್ತಿಗಳಾಗಿ ಅರ್ಚಕರೂ ಹಾಜರಾದರು. ಇವರೆಲ್ಲರ ಲೌಕಿಕ ಹಸಿವನ್ನು ನೀಗಿಸಲು ಗೂಡಂಗಡಿಗಳು ಹೋಟೆಲುಗಳು ಪ್ರತ್ಯಕ್ಷವಾದವು. ಸಿಟಿಬಸ್ಸಿನವರಿಗೆ ರಿಕ್ಷಾಗಳಿಗೆ ಸುಗ್ಗಿಯೋ ಸುಗ್ಗಿ. ದಕ್ಷಿಣೆ, ಪ್ರದಕ್ಷಿಣೆ, ಕಾಣಿಕೆ ಡಬ್ಬಿ, ಕುಂಕುಮ ಹೀಗೆ ದಿನ ಬೆಳಗಾಗುವುದರೊಳಗೆ ವಸ್ತುತಃ ಅದೊಂದು ತೀರ್ಥಕ್ಷೇತ್ರವಾಯಿತು.

ವ್ಯವಹಾರ ಹೀಗೆ ಸಾಗಿರುತ್ತಾ ಒಂದು ದಿನ, ಸತ್ಯವನ್ನು ಯಾರೋ ಬಯಲು ಮಾಡಿದರು. ಸತ್ಯ ಬಯಲಾಗುತ್ತಿದ್ದಂತೆ ಜನಜಂಗುಳಿ ಕರಗತೊಡಗಿತು. ಭಕ್ತಾದಿಗಳು ಇಲ್ಲದ ಮೇಲೆ ಅರ್ಚಕರಿಗೇನು ಕೆಲಸ ? ಅವರು ತಮ್ಮ ಹಾದಿ ಹಿಡಿದರು. ಗಿರಾಕಿಗಳು ಇಲ್ಲದ ಮೇಲೆ ಅಂಗಡಿಗಳವರು ಏನು ಮಾಡುವುದು ? ಅವರೂ ಗಿರಾಕಿಗಳನ್ನು ಅರಸುತ್ತಾ ಹೊರಟರು. ತೀರ್ಥಕ್ಷೇತ್ರ ಮತ್ತೆ ಮಾಮೂಲು ಸ್ಥಿತಿಗೆ ಮರಳಿತು.

ಇಲ್ಲಿನ ಕಾರ್ಣಿಕದ ಘಟನೆಯ ಹಿಂದಿನ ವಾಸ್ತವ ಹೀಗಿತ್ತು : ಗಾರೆಯ ಬಲವಾದ ಕಟ್ಟೆಯ ಕಾರಣವಾಗಿ ಮರಕ್ಕೆ ಬೇರು ವಿಸ್ತರಿಸಲು ಅಡಚಣೆಯಾಗಿತ್ತು. ಗೆಲ್ಲುಗಳೂ ಬೃಹತ್ತಾಗಿ ಬೆಳೆಯುತ್ತಲೇ ಹೋದವು. ಒಂದು ಗೆಲ್ಲಂತೂ ಉಳಿದೆಲ್ಲ ಗೆಲ್ಲುಗಳಿಗಿಂತ ಭಾರವಾಗಿತ್ತು. ಭಾರವನ್ನು ತಾಳಲಾರದೆ ಮರ, ಕಟ್ಟೆ ಸಹಿತವಾಗಿ ಪಕ್ಕದ ಗದ್ದೆಯ ಆವರಣ ಗೋಡೆಗೆ ಒರಗಿತು. ಗದ್ದೆಯ ಕೆಲಸಕ್ಕೆ ತೊಂದರೆಯಾಗುತ್ತದೆಂದು ಆ ಜಮೀನಿನ ಒಡೆಯರು ಆ ಭಾರವಾದ ನಿರ್ದಿಷ್ಟ ಗೆಲ್ಲನ್ನು ಕತ್ತರಿಸಿದರು. ಮರದ ಗುರುತ್ವ ಶಕ್ತಿ ಕೇಂದ್ರ ಹೊಂದಾಣಿಕೆಯಾಗಿ ತಕ್ಷಣ ಮರ ನೆಟ್ಟಗಾಯಿತು. ಈ ಸತ್ಯ ಬಯಲುಗೊಂಡುದರಿಂದ ಹೊಚ್ಚ ಹೊಸ ತೀರ್ಥಕ್ಷೇತ್ರವೊಂದು ಅಸ್ತಿತ್ವ ಕಳೆದುಕೊಂಡಿತು !

ಇಂತಹ ನೈಜ ಘಟನೆಗಳು ಈಗಲೂ, ಬುದ್ಧಿವಂತರ ಜಿಲ್ಲೆಯೆಂಬ ಹೆಗ್ಗಳಿಕೆ ಪಡೆದಿರುವ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಡೆಯುತ್ತಿವೆ. ಅನೇಕ ಸುದ್ದಿ ಮಾಧ್ಯಮಗಳು ಎಲ್ಲ ನೀತಿ ಸಂಹಿತೆಗಳನ್ನು ಗಾಳಿಗೆ ತೂರಿ ಈ ಘಟನೆಗಳನ್ನು ಅತಿರಂಜಿತವಾಗಿ ಸುದ್ದಿ ಮಾಡುತ್ತಿವೆ. (ಆಶ್ಚರ್ಯವೆಂದರೆ, ಇಂತಹ ಪವಾಡಗಳು ಠುಸ್ಸೆಂದಾಗ ಅವನ್ನು ಒಂದು ವಾಕ್ಯದ ಮೂಲಕವಾದರೂ ವರದಿ ಮಾಡುವುದಿಲ್ಲ!). ಸುದ್ದಿ ಮಾಧ್ಯಮಗಳು ನೀಡುವ ವರದಿಯನ್ನು ಕಣ್ಣು ಮುಚ್ಚಿ ನಂಬಿಬಿಡುವ ಅಮಾಯಕ ಮಂದಿ ಅಂತೆ ಕಂತೆಗಳ ಸಂತೆಗೆ ತಮ್ಮದೂ ಒಂದಷ್ಟು ಕೊಡುಗೆ ನೀಡಿ ಪರಿಸ್ಥಿತಿಯನ್ನು ಇನ್ನೂ ಬಿಗಡಾಯಿಸುತ್ತಾರೆ. ಅಕ್ಷರಸ್ಥರು - ಅನಕ್ಷರಸ್ಥರು, ವಿದ್ಯಾವಂತರು - ಅವಿದ್ಯಾವಂತರು,ಶ್ರೀಮಂತರು-ಬಡವರು, ಜಾತಿ, ಮತ, ಧರ್ಮ ಇತ್ಯಾದಿ ಭೇದ ಭಾವಗಳನ್ನು ಮೀರಿ ಬಹುಸಂಖ್ಯೆಯಲ್ಲಿ ಜನ ಕುರುಡು ನಂಬಿಕೆಗಳ ನೆರೆಯಲ್ಲಿ ಕೊಚ್ಚಿಹೋಗುತ್ತಿದ್ದಾರೆ. ಶಿಕ್ಷಣ, ಉದ್ಯಮ ಇತ್ಯಾದಿ ಕ್ಷೇತ್ರಗಳಲ್ಲಿ ಮುಂದಿರುವ, ಪರೀಕ್ಷಾ ಫಲಿತಾಂಶಗಳಲ್ಲಿ ಸದಾ ಮುಂಚೂಣಿಯಲ್ಲಿರುವ, ಬಹಳ ದೊಡ್ಡ ಸಂಖ್ಯೆಯ ಅಕ್ಷರಸ್ಥ ಸಮುದಾಯವನ್ನು ಹೊಂದಿರುವ ಜಿಲ್ಲೆಯಲ್ಲಿ ಏಕೆ ಹೀಗಾಗುತ್ತಿದೆ? ಬುದ್ಧಿವಂತರ ಜಿಲ್ಲೆಯದೇ ಒಂದು ಪತ್ರಿಕೆ ಪ್ರಳಯದ ಸುದ್ದಿ ಹಬ್ಬಿಸಿ ಜನರನ್ನು ಸಮೂಹಸನ್ನಿಗೆ ತಳ್ಳಿ ಚಾರಿತ್ರಿಕ ತಪ್ಪೆಸಗಿದ್ದು ಎಂತಹ ವಿಪರ್ಯಾಸ !

ಕಾಲಚಕ್ರ ಉರುಳುತ್ತಾ ಹೋಗುವಾಗ ಇತಿಹಾಸಗಳು ಮತ್ತೆ ಮರುಕಳಿಸುವುದು ಎಷ್ಟೊಂದು ವಾಸ್ತವ ಅನ್ನಿಸುತ್ತದೆ. ಕಳೆದ ಶತಮಾನದ ಮಧ್ಯಭಾಗದಲ್ಲಿದ್ದ ವೈಚಾರಿಕತೆ, ವೈಜ್ಞಾನಿಕ ದೃಷ್ಟಿಕೋನ ಶತಮಾನದ ಕೊನೆಯಲ್ಲಿ ಮಾಯವಾಗತೊಡಗಿತು. ಚಿಂತನೆಯ ದಾರಿಯಲ್ಲಿ ಜನ ಹಿಮ್ಮುಖ ಚಲಿಸತೊಡಗಿದರು. ಜಾತಿ ಸಂಘಗಳು ವಿಜೃಂಭಿಸಿದವು. ಅಂತೆಯೇ, ಜಾತಿ ಭೇದವನ್ನು ವೈಭವೀಕರಿಸುವ ಕಾರ್ಯಕ್ರಮಗಳು ವಿಜೃಂಭಿಸತೊಡಗಿದವು. ನವಪುರೋಹಿತಶಾಹಿಗೆ ರತ್ನಗಂಬಳಿ ಸ್ವಾಗತ ಆರಂಭವಾಯಿತು. ಬ್ರಾಹ್ಮಣರಿಗೆ ಮೊದಲು ಊಟ, ಮೊದಲ ಆದ್ಯತೆ, ಪ್ರತ್ಯೇಕ ಭೋಜನ ಇತ್ಯಾದಿಗಳು ಸರಿ ಎಂಬ ಹೊಸ ಸಮರ್ಥನೆ ಆರಂಭವಾಯಿತು. ಜಾತಕ, ಜ್ಯೋತಿಷ್ಯ, ಅಷ್ಟಮಂಗಲಗಳ ಮೂಲಕ ವಿವೇಚನೆಯನ್ನು ಅಡವಿಡುವ ಹೊಸ ಕಾರ್ಯಕ್ರಮಗಳು ಆರಂಭವಾದವು.

ಮೂವತ್ತು ವರ್ಷಗಳ ಹಿಂದೆ ಮದುವೆಯಾದ ನನ್ನೋರ್ವ ಕುಟುಂಬ ಸ್ನೇಹಿತರಿಗೆ ಆಗ ಜಾತಕಗಳು ಕಾಟ ಕೊಟ್ಟಿರಲಿಲ್ಲ. ಆದರೆ ಅವರ ಮಗಳನ್ನು ಮದುವೆ ಮಾಡಿಕೊಡುವ ಆಧುನಿಕ ಸಂದರ್ಭದಲ್ಲಿ ಕಂಪ್ಯೂಟರ್ ಇಂಜಿನಿಯರ್ ವರ ಮಹಾಶಯ ಹುಡುಗಿಯ ಜಾತಕ ಕೇಳುತ್ತಿದ್ದಾನೆ ! ಹುಡುಗಿಯ ಮೂಲಾ ನಕ್ಷತ್ರ ಅವರೆಲ್ಲರನ್ನೂ ಕಾಡುತ್ತಿದೆ.

ತನ್ನ ಮೇಲೆ ಕಿಂಚಿತ್ತೂ ನಂಬಿಕೆ ಇರದೆ ತಲೆಯನ್ನು ಪೂರ್ತಿಯಾಗಿ ಜ್ಯೋತಿಷ್ಯದ ಕಾಲ ಬಳಿ ಇರಿಸಿದವರೊಬ್ಬರು ಭವಿಷ್ಯ ಕೇಳಲು ಜೋಯಿಸರ ಬಳಿಗೆ ಹೋಗಿದ್ದರು. ಜಾತಕ ಪ್ರಕಾರ ವಾಹನಾಪಘಾತ ಸಂಭವನೀಯವಾದುದರಿಂದ ಒಂದು ತಿಂಗಳ ಕಾಲ ವಾಹನ ಚಲಿಸಬೇಡಿ ಎಂದು ಜೋಯಿಸರು ಸಲಹೆ ನೀಡಿದರು. ಇತರ ವಾಹನ ಸಂಪರ್ಕವೇ ಇರದ ಹಳ್ಳಿ ಮೂಲೆಯಲ್ಲಿ ಬದುಕುತ್ತಿದ್ದ ಆ ಮಹಾಶಯ ಪೇಟೆಯಲ್ಲಿ ತಾನು ಕೆಲಸ ಮಾಡುತ್ತಿದ್ದ ಕಛೇರಿಯಲ್ಲೇ ವಾಹನ ಬಿಟ್ಟು ಮನೆ ಸೇರಿದರು. ಅದೇ ದಿನ ಹಳ್ಳಿಗಾಡಿನ ಮನೆಯಲ್ಲಿ ಮಗನಿಗೆ ಹಾವು ಕಚ್ಚಿತು. ಪೇಟೆಗೆ ಒಯ್ಯಲು ವಾಹನವಿರಲಿಲ್ಲ ; ಮಗ ಸತ್ತುಹೋದ.

ನೆಮ್ಮದಿಯಲ್ಲಿರುವ ಜನರ ಮಂಡೆ ಹಾಳುಮಾಡುವುದಕ್ಕೆ ಹೊಸ ಹೊಸ ಹುನ್ನಾರಗಳು ಈಚಿನ ದಿನಗಳಲ್ಲಿ ಬಗೆ ಬಗೆಯ ಹೆಸರಿನಲ್ಲಿ ಬರುತ್ತಿರುತ್ತವೆ. ಇದಕ್ಕೆ ಜನರು ವಾಸ್ತವದ ಯೋಚನೆಯನ್ನೇ ಮಾಡದೆ ಬಲಿಯಾಗುತ್ತಿರುವುದು ಮಾತ್ರ ವಿಷಾದದ ಸಂಗತಿ. ವಾಸ್ತುವಿನ ಹೆಸರಿನಲ್ಲಿ ಜನ, ಮನೆ ಕೆಡವಿ ಬೇರೆ ಮನೆ ಕಟ್ಟಿಸುತ್ತಿದ್ದಾರೆ. ಅವೈಜ್ಞಾನಿಕವಾಗಿ, ಸೌಂದರ್ಯಪ್ರಜ್ಞೆ ಇಲ್ಲದೆ ಮನೆ ಕಟ್ಟಿಸುತ್ತಿದ್ದಾರೆ. ಅನಗತ್ಯ ನಷ್ಟ ಮಾಡಿಕೊಂಡು ಬದುಕನ್ನು ಗೊಂದಲಮಯವಾಗಿಸುತ್ತಿದ್ದಾರೆ.

ಸರಕಾರಿ ಕಾಲೇಜಿನ ಪ್ರಾಂಶುಪಾಲರಾಗಿದ್ದವರೊಬ್ಬರು ಹೆಚ್ಚು ವ್ಯವಸ್ಥೆಯಿದ್ದ ಕಡಿಮೆ ಬಾಡಿಗೆಯ ಮನೆಯೊಂದನ್ನು ತೊರೆದು ಕಡಿಮೆ ವ್ಯವಸ್ಥೆಯಿದ್ದ ಹೆಚ್ಚು ಬಾಡಿಗೆಯ ಮನೆಯೊಂದನ್ನು ಅರಸಿಕೊಂಡು ಹೋಗಿ ಸೇರಿಕೊಂಡರು. ಕಾರಣ, ವಾಸ್ತು ತಜ್ಞರ 'ಜಾತಕಾಧಾರಿತ' ಸಲಹೆ.

ರಾಜ್ಯದ ಪ್ರತಿಷ್ಠಿತ ರಸಗೊಬ್ಬರ ಕಾರ್ಖಾನೆಯೊಂದು ಅನುಭವಿಸುತ್ತಿರುವ ನಷ್ಟಗಳಿಗೆ ಕಾರಣವನ್ನು ಕವಡೆ ಜೋಯಿಸರೊಬ್ಬರ ಬಳಿಯಲ್ಲಿ ಕೇಳಲಾಯಿತು. ಕಚೇರಿಯ ಮುಖ್ಯಸ್ಥರು ಕುಳಿತುಕೊಳ್ಳುವ ಕೋಣೆಯ ವಾಸ್ತು ಸರಿಯಿಲ್ಲ ಮತ್ತು ಕಾರ್ಖಾನೆಯೊಳಗಡೆ ಒಂದು ಗಣಪತಿ ದೇವಸ್ಥಾನ ಕಟ್ಟಬೇಕೆಂಬ ಸಲಹೆ ಬಂತು. ಸಲಹೆಯನ್ನು ಚಾಚೂ ತಪ್ಪದೆ ಹಲವು ಲಕ್ಷ ಖರ್ಚು ಮಾಡಿ (ಈಗಾಗಲೇ ಆಗಿರುವ ನಷ್ಟಕ್ಕೆ



ಇನ್ನಷ್ಟು ನಷ್ಟ ಸೇರಿಸಿ) ಪಾಲಿಸಲಾಯಿತು. ಇಷ್ಟಾಗಿಯೂ ಕಾರ್ಖಾನೆಯಲ್ಲಿ ಭಾರಿ ಮುಷ್ಕರ ನಡೆಯಿತು. ಮರುವರ್ಷ ಭಾರಿ ದುರಂತವೊಂದು ಸಂಭವಿಸಿ ನಾಲ್ಕು ಮಾನವ ಜೀವಹಾನಿ ಸಂಭವಿಸಿತು. ದೇವಸ್ಥಾನ ಸ್ಥಾಪಿಸಿದ ನಂತರವೂ ಜೀವಹಾನಿ ಸಂಭವಿಸಬಾರದಿತ್ತಲ್ಲ ಎಂಬ ಜಿಜ್ಞಾಸೆಗೆ ಬಂದ ಉತ್ತರ : ದೇವಸ್ಥಾನ ಸ್ಥಾಪಿಸಿದ್ದರಿಂದ ಕಡಿಮೆ ಜೀವಹಾನಿ ಸಂಭವಿಸಿತು. ಇಲ್ಲವಾದರೆ ಇನ್ನೂ ಹೆಚ್ಚಾಗುತ್ತಿತ್ತು !

ಜನರ ಅಜ್ಞಾನ, ಅಂಧಶ್ರದ್ಧೆ ಮಾಯವಾಗದೆ ಎಷ್ಟೇ ಸಂಖ್ಯೆಯ ಹೈಟೆಕ್ ಆಸ್ಪತ್ರೆಗಳು ತಲೆ ಎತ್ತಿದರೂ ಪ್ರಯೋಜನವಿಲ್ಲ ಎಂಬುದಕ್ಕೂ ಇಲ್ಲಿ ಅಸಂಖ್ಯ ಉದಾಹರಣೆಗಳಿವೆ. ಇದೇ ಕಾರಣವಾಗಿ ಜನರು ನಾನಾ ಸಂಕಷ್ಟಗಳಿಗೆ ಈಡಾಗಿ ಎಲ್ಲವೂ ಕೈಮೀರಿದಾಗ ಆಸ್ಪತ್ರೆಯ ಹಾದಿ ಹಿಡಿಯುತ್ತಾರೆ. ಸುಳ್ಯದ ಬಳಿಯ ರೈತರೊಬ್ಬರು ಬಾಳೆಯ ಎಲೆ ಕೊಯ್ಯುವಾಗ ಕಣ್ಣಿಗೆ ಸಣ್ಣ ಗಾಯವಾಯಿತು. ಪಕ್ಕದ ದೇವಸ್ಥಾನದ ಕೆರೆಯ ಮಣ್ಣಿಗೆ ಒಂದಿಷ್ಟು ಲಿಂಬೆರಸ ಸೇರಿಸಿ ಕಣ್ಣಿಗೆ ಬಿಟ್ಟರೆ ವಾಸಿಯಾಗುತ್ತದೆಂದು 'ಬಲ್ಲವ'ರೊಬ್ಬರು ಮದ್ದು ಹೇಳಿದರು. ಹಾಗೆಯೇ ಮಾಡಲಾಯಿತು. ಪರಿಸ್ಥಿತಿ ಕೈಮೀರಿದಾಗ ಜಿಲ್ಲಾಸ್ಪತ್ರೆಗೆ ಒಡಲಾಯಿತು. ಅಲ್ಲಿ ಅಂತೂ ಅವರು ಇನ್ನೊಂದು ಕಣ್ಣನ್ನು ಮಾತ್ರ ಉಳಿಸಲು ಶಕ್ತರಾದರು.

ಮಂತ್ರ, ಮಾಟ, ಜಾತಕ, ಜ್ಯೋತಿಷ್ಯ ಹೀಗೆ ಜನ ಬದುಕನ್ನು ಗೊಂದಲದ ಗೂಡಾಗಿಸುವ, ನಾಶಪಡಿಸುವ ಅಸಂಖ್ಯ 'ವಿದ್ಯೆಗಳು' ಇಲ್ಲಿ ಪುನರುತ್ಥಾನಗೊಳ್ಳುತ್ತಲೇ ಇವೆ. ಜನರ ಅಜ್ಞಾನ, ಮುಗ್ಧತೆ, ಅವಿವೇಕ ಇತ್ಯಾದಿಗಳ ಹೊಲದಲ್ಲಿ ಸಮೃದ್ಧ ಬೆಳೆ ತೆಗೆಯಲು ನಾನಾ ವೇಷಗಳಲ್ಲಿ ಅನೇಕ ಮಂದಿ ಪವಾಡ ಪುರುಷರು ಇಲ್ಲಿ ನಿತ್ಯವೂ ತಲೆ ಎತ್ತುತ್ತಿರುತ್ತಾರೆ. ಎಲ್ಲೋ ಗುತ್ತಿಗೆ ಕೆಲಸ ಮಾಡುತ್ತಿದ್ದ ವ್ಯಕ್ತಿಯೊಬ್ಬ ಮಾರನೇ ದಿನ ಬೂದಿ ಬಾಬಾ ಆಗಿ ಅವತರಿಸುತ್ತಾನೆ. ರಕಣೆಗೆ ಭಂಟರನ್ನು ಇರಿಸಿಕೊಂಡು ಭಕ್ತಾದಿಗಳನ್ನು ಸೆಳೆಯುತ್ತಾನೆ. ನಿನ್ನೆ ಮೊನ್ನೆ ಸಿಟಿ ಬಸ್‌ನಲ್ಲಿ ನಿರ್ವಾಹಕನಾಗಿ ದುಡಿಯುತ್ತಿದ್ದವನು ಕಡಿಮೆ ಶ್ರಮದ, ಅಧಿಕ ಆದಾಯದ ಹೊಸ ಉದ್ಯೋಗ ಹಿಡಿಯುತ್ತಾನೆ; ಸ್ವಾಮೀಜಿಯಾಗುತ್ತಾನೆ; ಭಕ್ತರು ಮುಗಿಬೀಳುತ್ತಾರೆ; ಮಠ-ದೇವಸ್ಥಾನ ನಿರ್ಮಾಣವಾಗುತ್ತದೆ. ದೇಣಿಗೆ, ಆಶೀರ್ವಚನ ಹೀಗೆ ಪ್ರಕ್ರಿಯೆ ಮುಂದುವರಿಯುತ್ತದೆ. ಪವಾಡ ಪುರುಷರಾಗಿ ಅವತರಿಸುವುದು ಇಲ್ಲೀಗ ಹೆಚ್ಚು ಆಕರ್ಷಕ ದಂಧೆಯಾಗಿದೆ. ಸ್ವಾಮಿ ವಿವೇಕಾನಂದರನ್ನು ಕೂಡಾ ಮೈಯಲ್ಲಿ ಆವಾಹಿಸಿಕೊಂಡು ಮಡಿ ನೀಡುವವರು ಇಲ್ಲಿದ್ದಾರೆ. ಎಷ್ಟೇ ಸ್ವಾಮೀಜಿಗಳು ಅವತರಿಸಲಿ ಭಕ್ತರಿಗೇನೂ ಇಲ್ಲಿ ಕೊರತೆ ಇಲ್ಲ. ಈ ಬಾಬಾಗಳ ವರ ಪ್ರಸಾದದಿಂದ ರಕ್ತದ ಕ್ಯಾನ್ಸರ್ ಗುಣವಾಗುತ್ತದೆ, ಮಕ್ಕಳಿಲ್ಲದವರಿಗೆ ಮಕ್ಕಳಾಗುತ್ತದೆ ಎಂದರೂ ಜನ ನಂಬುತ್ತಾರೆ !

ಶಾಲೆಗಳು ಆಸ್ಪತ್ರೆಗಳು ಕಾಯಕಲ್ಪ ಕಾಣದಿದ್ದರೂ, ಗಲ್ಲಿ ಗಲ್ಲಿಯ ದೈವಸ್ಥಾನ - ದೇವಸ್ಥಾನಗಳು ಹಲವು ಲಕ್ಷ ಖರ್ಚಿನಲ್ಲಿ ಜೀರ್ಣೋದ್ಧಾರ ಕಂಡು ಅಷ್ಟಬಂಧ ಬ್ರಹ್ಮ ಕಲಶೋತ್ಸವ ಸಂಭ್ರಮಿಸುತ್ತಿವೆ. 'ಅಷ್ಟ ಮಂಗಲ ಪ್ರಶ್ನೆ' ಎಂಬ ಲೇಟೆಸ್ಟ್ ಮಾಯಕವೊಂದು ಇತ್ತೀಚಿಗೆ ಹಳ್ಳಿಯ ಬಡವ ಬಲ್ಲಿದರನ್ನೆಲ್ಲ ಬಲಿತೆಗೆದುಕೊಳ್ಳುತ್ತಿದೆ. ಕೇರಳದ ಕಡೆಯ ಕೆಲವು ಅಷ್ಟಮಂಗಲ 'ಗುತ್ತಿಗೆದಾರರು' ಜನರಿಗೆ ಮಂಕುಬೂದಿ ಎರಚಿ ಕಿಸೆ ತುಂಬಿಸಿಕೊಳ್ಳುತ್ತಿದ್ದಾರೆ. ಈಗಾಗಲೇ ಕೃಷಿ ಧಾರಣೆಯಿಂದ ತತ್ತರಿಸಿರುವ ಬಡವರಿಗೆ ಲಕ್ಷ ಲಕ್ಷ ಖರ್ಚಿಗೆ ಹಾದಿ ಮಾಡಿಕೊಡುತ್ತಿದ್ದಾರೆ. ಏಕೆ ಹೀಗೆ ? ಶಿಕ್ಷಣ, ಉದ್ಯಮ, ತಂತ್ರಜ್ಞಾನಗಳಲ್ಲಿ ಮುಂದೆ ಓಡುತ್ತಿರುವಷ್ಟೇ ವೇಗವಾಗಿ ಏಕೆ ಜನ ಕುರುಡು ನಂಬಿಕೆಗಳಲ್ಲಿಯೂ ಮುಂದೆ ಓಡುತ್ತಿದ್ದಾರೆ ? ಅಂದರೆ ಎಲ್ಲವೂ ಸರಿಯಾಗಿಲ್ಲ ಎಂದೇ ಅರ್ಥ. ಎಲ್ಲೋ ಏನೋ ಕೊಂಡಿ ಕಳಚಿದೆ. ನಮಗೆ ವಿಜ್ಞಾನ - ತಂತ್ರಜ್ಞಾನಗಳು ಒದಗಿಸುವ ಎಲ್ಲ ಸುಖಗಳೂ ಬೇಕು. ಆದರೆ ಅವು ಹೇಳುವ ವೈಜ್ಞಾನಿಕ ಮನೋಭಾವ ಬೇಕಾಗಿಲ್ಲ. ದುಡ್ಡು ಮಾಡುವ ವಿಷಯವನ್ನೇ ಕೇಂದ್ರವಾಗಿರಿಸಿಕೊಂಡಿರುವ ನಮ್ಮ ಶಿಕ್ಷಣದಲ್ಲಿ ವೈಜ್ಞಾನಿಕ ಮನೋಭಾವಕ್ಕೆ ಜಾಗ ಇಲ್ಲ. ಜನರ ಮೌಢ್ಯ ನಿವಾರಿಸುವ ಪಾಠಗಳಿಲ್ಲ. ಸೂರ್ಯ ಚಂದ್ರಗ್ರಹಣವನ್ನು ನೆರಳಿನಾಟ ಎಂದು ಸವಿವರವಾಗಿ ತರಗತಿಯೊಳಗಡೆ ಬೋಧಿಸುವ ವಿಜ್ಞಾನದ ಅಧ್ಯಾಪಕರೂ ಗ್ರಹಣದ ದಿನ ಉಪವಾಸ ಕುಳಿತು ಗ್ರಹಣ ಮುಗಿದೊಡನೆ ಸ್ನಾನ ಮಾಡಿ ಶುದ್ಧರಾಗುತ್ತಾರೆ ! ಬೋಧಿಸುವುದಕ್ಕೊಂದು ಸಿದ್ಧಾಂತ, ಆಚರಿಸುವುದಕ್ಕೊಂದು ಸಿದ್ಧಾಂತ.

ನಾವೆಷ್ಟೇ ಅಭಿವೃದ್ಧಿಯಾಗಿದ್ದೇವೆಂದು ಹೇಳಿಕೊಂಡರೂ ಬೌದ್ಧಿಕ ಅಭಿವೃದ್ಧಿ ಸಾಧಿತವಾಗದೆ ಇತರ ಯಾವ ಅಭಿವೃದ್ಧಿಯೂ ನಿಜವಾದ ಅರ್ಥದ ಅಭಿವೃದ್ಧಿ ಎನಿಸದು. ಹಾಗಾಗಿಯೇ, ವೈಜ್ಞಾನಿಕ ಮನೋಭಾವ ವ್ಯಾಪಕವಾಗಿ ನಮ್ಮಲ್ಲಿ ಮೂಡುವತನಕ ಸದ್ಯ ಕಾಡುತ್ತಿರುವ ಅನೇಕ ಪಿಡುಗುಗಳಿಂದ ನಮಗೆ ಬಿಡುಗಡೆಯೇ ಇಲ್ಲ.

ಶ್ರೀನಿವಾಸ ಕಾರ್ಕಳ
೩-೧೩೦, ಎಂ.ಸಿ.ಎಫ್. ಟೌನ್‌ಶಿಪ್, ಕುಂಜತ್ತಬೈಲು, ಮಂಗಳೂರು - ೫೭೫ ೦೧೫

# ಮರಾಠಿ ದಲಿತ ಸಾಹಿತ್ಯ : ಹೊಸ ಹೆಜ್ಜೆ, ಹೊಸ ಆಹ್ವಾನ

ಅಮೆರಿಕಾದ ಬ್ಲಾಕ್ ಪ್ಯಾಂಥರಿನ ಪ್ರಭಾವದಿಂದ ದಲಿತ ಪ್ಯಾಂಥರ್ - ದಲಿತ ಸಾಹಿತ್ಯವು ಮಹಾರಾಷ್ಟ್ರದಲ್ಲಿ ಮೊಟ್ಟ ಮೊದಲು ಅಡಿಯಿಟ್ಟಿತು. ಆದರೆ ಸಾಹಿತ್ಯ ಚಳುವಳಿಯಲ್ಲಿ 'ದಲಿತ ಸಾಹಿತ್ಯ' ಎಂಬ ಹೆಸರು ಬೇಡವೆಂದು ೧೯೬೧ರಲ್ಲಿ 'ಮಹಾರಾಷ್ಟ್ರ ಬೌದ್ಧ ಸಾಹಿತ್ಯ' ಎಂದು ನಾಮಕರಣ ಮಾಡಲಾಯಿತು. ಇದಕ್ಕೆ ೫೬ರಲ್ಲಿ ನಡೆದ ಮತಾಂತರದ ಸಮರ್ಥನೆ ನೀಡಲಾಯಿತು. ಶ್ರೀ ಥಾಲೆ ಎಂಬ ಲೇಖಕರು ದಲಿತ ಸಾಹಿತ್ಯ ನಾಮಾಂತರ ಚಳುವಳಿಯನ್ನು 'ಕ್ರಾಂತಿಕಾರಿ ಘಟನೆ' ಎಂದು ಕರೆದರು. ತಾನು 'ಅಂಬೇಡ್ಕರ್ ಪ್ರೇರಣೆಯ ಸಾಹಿತ್ಯ'ವೆಂದು ಕರೆಯುವುದಾಗಿ ಘೋಷಿಸಿದರು. ಈ ಮೊದಲಿನ ಎರಡನ್ನೂ ನಿರಾಕರಿಸಿದರೂ ೧೯೭೬ರಲ್ಲಿ ಈ ಹೆಸರೂ ಬದಲಾಗಿ 'ಫುಲೇ-ಅಂಬೇಡ್ಕರ್ ಪ್ರೇರಣೆಯ ಸಾಹಿತ್ಯ'ವೆಂದು ಮತ್ತೊಮ್ಮೆ ಬದಲಾಯಿಸಿದರು.

೧೯೮೨ರ ವರೆಗೆ 'ದಲಿತ ಸಾಹಿತ್ಯ'ವೇ, 'ಬೌದ್ಧ ಸಾಹಿತ್ಯವೇ', 'ಫುಲೇ-ಅಂಬೇಡ್ಕರ್ ಪ್ರೇರಣೆಯ ಸಾಹಿತ್ಯವೇ' ಎಂಬುದು ಚರ್ಚೆಯಲ್ಲಿತ್ತು. ಆದರೆ ೧೯೮೨ರಲ್ಲಿ ಯಶವಂತ ಮನೋಹರ ಅವರು 'ದಲಿತ ಸಾಹಿತ್ಯದ ನಾಮಾಂತರ - ಅಂಬೇಡ್ಕರವಾದಿ ಸಾಹಿತ್ಯ' ಎಂಬ ಲೇಖನ ಬರೆದ ನಂತರ 'ಅಂಬೇಡ್ಕರವಾದಿ ಸಾಹಿತ್ಯ' ಎಂಬುದೂ ಚರ್ಚೆಯಲ್ಲಿ ಸಮಾವೇಶಗೊಂಡಿತು. ಅದಕ್ಕೆ ಅವರು ನೀಡಿದ ಸಮರ್ಥನೆ ಹೀಗಿದೆ: ''ಅಂಬೇಡ್ಕರ ವಾದವು ಒಂದು ಸಂಪೂರ್ಣ ತತ್ವಜ್ಞಾನವಾಗಿದೆ. ಅದು ಧರ್ಮಾತೀತ ಹಾಗೂ ಈಶ್ವರಾತೀತವಾಗಿದೆ... ಅಂಬೇಡ್ಕರ ಈ ದೇಶದ ಪ್ರಕಾಶ ಪರಂಪರೆಯ ಇತ್ಯರ್ಥವಾಗಿದ್ದಾರೆ. ಅವರೊಳಗೆ ಬುದ್ಧ, ಫುಲೇ ಇದ್ದಾರೆ. ಎಲ್ಲ ಗೌರವಶಾಲಿ ಬೆಳಕಿನ ಸಂಕಲನವೆಂದರೆ ಅಂಬೇಡ್ಕರ. ಆದ್ದರಿಂದ ನಮ್ಮ ಸಾಹಿತ್ಯಕ್ಕೆ 'ಅಂಬೇಡ್ಕರವಾದಿ ಸಾಹಿತ್ಯ' ಎನ್ನುವುದು ಯೋಗ್ಯವಾದ ಹೆಸರು.''

ಆದರೆ ದಲಿತ ಸಾಹಿತ್ಯ ಸಮರ್ಥಕರ ಅಂಬೋಣ ಹೀಗಿದೆ : 'ದಲಿತ ಸಾಹಿತ್ಯ' ಎನ್ನುವುದು ಕರಿಕಲ್ಲಿನ ಮೇಲೆ ಕೊರೆದ ರೇಖೆಯಾಗಿದೆ. ದಲಿತ ಸಾಹಿತ್ಯ ಎಂಬ ಸಂಕಲ್ಪನೆಯು ಎಲ್ಲ ಭಾರತೀಯ ಸಾಹಿತ್ಯದಲ್ಲೂ ಬೇರೂರಿದೆ. ಇದನ್ನು ಬದಲಾಯಿಸುವುದೆಂದರೆ ಹುಡುಗಾಟ ವಾಗುತ್ತದೆ. ಇಡೀ ಬಹಿಷ್ಕೃತ ಸಮಾಜ ಹಾಗೂ ಆ ಸಮಾಜದ ಲೇಖಕರು ಉದಯವಾಗುತ್ತಿದ್ದಾರೆ. ಅವರೂ ಫುಲೇ, ಅಂಬೇಡ್ಕರರ ಪ್ರೇರಣೆಯನ್ನು ಒಪ್ಪುತ್ತಾರೆ. ಆದ್ದರಿಂದ ಈ ದಲಿತ ಸಾಹಿತ್ಯ ಸಂಕಲ್ಪನೆಯೇ ವ್ಯಾಪಕ ಹಾಗೂ ಯೋಗ್ಯವಾಗಿದೆ. ಕೆಲವರಂತೂ 'ನಾವು ದಲಿತರು ಅಂದಮೇಲೆ ದಲಿತ ಸಾಹಿತ್ಯ ಎನ್ನಲು ಏಕೆ ನಾಚಿಕೆ?' ಎಂದು ವಾದಿಸುತ್ತಾರೆ.

ಈ ಎಲ್ಲ ಹೇಳಿಕೆಯನ್ನು ಕ್ರೋಢೀಕರಿಸಿ ಯೋಚಿಸಿದಾಗ ದಲಿತ ಸಾಹಿತ್ಯ ಸಂಕಲ್ಪನೆಯ ಬಗ್ಗೆ ಕೆಲವು ಪ್ರಶ್ನೆಗಳು ಉದ್ಭವಿಸುತ್ತವೆ: 'ಫುಲೆ - ಅಂಬೇಡ್ಕರರನ್ನು ಪ್ರಮಾಣಿಸಿ ಬರೆಯಲು ಹೊರಟ ಮೇಲೆ ನಿಮ್ಮ ಸಾಹಿತ್ಯಕ್ಕೆ 'ದಲಿತ ಸಾಹಿತ್ಯ' ಎಂಬ ಹೆಸರೇಕೆ ಬೇಕು ? ಅವರಿಬ್ಬರ ವಿಚಾರದಲ್ಲಿ ದಲಿತತ್ವವಿಲ್ಲ. ಬದಲು, ದಲಿತತ್ವವನ್ನು ನಿರಾಕರಿಸುವುದಲ್ಲದೆ ಈ 'ದಲಿತ' ಎಂಬ ಶಬ್ದದ ಹೊರೆ ಇನ್ನೆಷ್ಟು ದಿನ? ಇದು ಅಭಿಮಾನ ಪಡುವ ಶಬ್ದವೇ ? ಅಲ್ಲದೆ ಅಂಬೇಡ್ಕರ ತತ್ವಕ್ಕೆ ವಿರುದ್ಧವಾಗಿ ಬದುಕುತ್ತ ಬರೆಯುತ್ತ ಇನ್ನೆಷ್ಟು ದಿನ ಕಳೆಯುವುದು ? ಇಂದು 'ದಲಿತ' ಶಬ್ದಕ್ಕೆ ನಾನಾರ್ಥಗಳು ಹುಟ್ಟಿಕೊಳ್ಳುವಂತೆ, ನಾಳೆ ಫುಲೆ-ಅಂಬೇಡ್ಕರ ತತ್ವಕ್ಕೂ ನಾನಾರ್ಥಗಳು ಹುಟ್ಟಿಕೊಳ್ಳುವುದಿಲ್ಲೆನ್ನುವುದಕ್ಕೇನು ಗ್ಯಾರಂಟಿ ?

ದಲಿತ ಬರವಣಿಗೆ, ಫುಲೆ - ಅಂಬೇಡ್ಕರ ವಿಚಾರ ಧಾರೆಯ ಸಮಾಜ ನಿರ್ಮಾಣ ಮಾಡಲೆಂದೇ ಬರೆದುದಾಗಿರಬೇಕು. ಈ ಬರವಣಿಗೆ ಬರೇ ಮನರಂಜನೆಗಾಗಿ ಇರದೇ ವೈಚಾರಿಕ ಶಸ್ತ್ರವಾಗಿರಬೇಕು (ಖಡ್ಗವಾಗಲಿ ಕಾವ್ಯ - ಡಿ. ಆರ್. ನಾಗರಾಜರ ಹೇಳಿಕೆ ನೆನಪಿಸಿಕೊಳ್ಳಿ). ಇದನ್ನೆಲ್ಲ ಯೋಚಿಸಿದರೆ ದಲಿತ ಸಾಹಿತ್ಯದಲ್ಲಿ ಅಂಬೇಡ್ಕರ ವಿಚಾರ ಎಷ್ಟಿದೆ ? ಎಂಬ ಪ್ರಶ್ನೆಯೂ ಏಳುತ್ತದೆ.

ಫುಲೆ - ಅಂಬೇಡ್ಕರ ವಿಚಾರಗಳ ಕುರಿತೇ ಬರೆದರೆ ಅದು ಪ್ರಚಾರ ಸಾಹಿತ್ಯವಾಗುವುದಿಲ್ಲವೇ ? ಎಂಬ ಪ್ರಶ್ನೆಯೂ ಇದೆ. ಇಂಥ ಬರವಣಿಗೆ ಕಲಾಕೃತಿಯಾಗುವುದು ಸಾಧ್ಯವೇ ? ಅದಕ್ಕೆ ಅವರು ನೀಡುವ ಉತ್ತರವೇನೆಂದರೆ, ನಮ್ಮದು ಫುಲೆ, ಅಂಬೇಡ್ಕರ ಪ್ರಣಾಳಿ ಸಾಹಿತ್ಯ. ಪರಿವರ್ತನೆಯೇ ಇದರ ಮೂಲೋದ್ದೇಶ. ತಾತ್ವಿಕವಾಗಿ ಉಳಿದ ಎಲ್ಲಾ ಪ್ರಶ್ನೆಗಳಿಗೆ ಉತ್ತರಿಸುವ ಬದಲು, ಇದು 'ಮಾನವ ಮುಕ್ತಿ'ಯನ್ನು ಸಾಧಿಸುತ್ತದೆಯೋ ಇಲ್ಲವೋ ಎಂಬುದನ್ನೇ ಮುಖ್ಯವಾಗಿ ಯೋಚಿಸಬೇಕು. ಮಾನವ ಮುಕ್ತಿ - ಸಮಗ್ರ ಪರಿವರ್ತನೆ ಇದೇ ಫುಲೆ - ಅಂಬೇಡ್ಕರರ ವಿಚಾರಧಾರೆಯ ಅಂತಿಮ ಉದ್ದೇಶ. ಹೀಗಾಗಿ ಈ ಸಾಹಿತ್ಯ ವನ್ನು ಫುಲೆ-ಅಂಬೇಡ್ಕರ ಪ್ರೇರಣೆಯ ಸಾಹಿತ್ಯವೆಂದು ರಾಜಾ ಢಾಲೆ ಕರೆದಾಗ ಯೋಗ್ಯವೆನಿಸುತ್ತದೆ.

ಈಗ ದಲಿತ ಲೇಖಕರ ಎದುರು ಹಲವು ಪ್ರಶ್ನೆಗಳಿವೆ - ನಾವೆಷ್ಟು ಉದಾತ್ತ ಜೀವನ ಮೌಲ್ಯ, ಸಾಂಸ್ಕೃತಿಕ ಮೌಲ್ಯ, ಸಾಹಿತ್ಯದಲ್ಲಿ ಮಂಡಿಸಿದ್ದೇವೆ ? ನಮ್ಮ ಮನೋಭಾವನೆ ವಿಶಾಲಗೊಂಡಿದೆಯೋ ? ಉಪೇಕ್ಷಿತರ ದುಃಖಕ್ಕೆ ನಾವೇನಾದರೂ ಪರಿಹಾರ ಸೂಚಿಸಿದ್ದೇವೆಯೋ ? ಅವರ ಉನ್ನತಿಗಾಗಿ ನಾವು ಮಂಡಿಸಿದ ವಿಚಾರಗಳಾವುವು ? - ಇಂಥ ಹತ್ತು ಹಲವು ಪ್ರಶ್ನೆಗಳಿಗೆ ಉತ್ತರಿಸುವಾಗ ದಲಿತ ಸಾಹಿತ್ಯ ಮುಗ್ಗರಿಸುತ್ತದೆ ಎಂಬ ಆರೋಪವೂ ಇದೆ. ಇದಕ್ಕೆ ಕೆಲ ಲೇಖಕರು, ಸಾಹಿತ್ಯ ಕೃತಿ, ಅಪವಾದವಾಗಿರಲೂಬಹುದು (ಕನ್ನಡದ ದೇವನೂರು) ಎಂಬುದನ್ನು ಅವರು ಒಪ್ಪುತ್ತಾರೆ.

ಇದನ್ನು ಆಮೂಲಾಗ್ರವಾಗಿ ಬದಲಾಯಿಸಬೇಕಾದರೆ, ಮೊದಲು ದಲಿತತ್ವ ಕಿತ್ತೊಗೆಯಬೇಕು. ದಲಿತ ಮನಸ್ಸೂ ಬದಲಾಗಬೇಕು. ಫುಲೇ - ಅಂಬೇಡ್ಕರ ವಿಚಾರಗಳ ದಿಶೆಯಲ್ಲೇ ಸಾಹಿತ್ಯ ನಿರ್ಮಾಣವಾಗಬೇಕು. ದಲಿತತ್ವ ನಿರಾಕರಿಸಲು, ನ್ಯೂನಗಂಡದಿಂದ ಪಾರಾಗಲು ಆ ವಿಚಾರವೇ ಆಧಾರ. ಅದು ಅಸ್ಮಿತೆಯನ್ನು ಜಾಗೃತಗೊಳಿಸಿ, ಪರಿವರ್ತನದ ಹಾದಿ ತೋರಿಸುತ್ತದೆ. ಇದು ಈ ಶತಮಾನದ ಆಹ್ವಾನ ಎನ್ನಬಹುದೇ?

ಕನ್ನಡದ ದಲಿತ ಸಾಹಿತ್ಯ, ದಲಿತ ಪ್ರಪಂಚ ಇದಕ್ಕೇನು ಉತ್ತರ ನೀಡುತ್ತದೆ ?

ಚಂದ್ರಕಾಂತ ಪೋಳ
ಜೂನಿಯರ್ ಕಾಲೇಜ್
ಬೇಡಕಿಹಾಳ - ೫೯೧೨೧೪, ಬೆಳಗಾವಿ




ಹೀಗೇಕೆ ಹತಾಶರಾಗಿ ಕುಳಿತಿರಿ, ಸಾಹಿತಿ ದಿಗ್ಗಜರೆ ? ಈ ವರ್ಷ ಅದು ನಾಯಿ-ಪಾಲಿಗೆ; ಮುಂದಿನ ಬಾರಿ ನಿಮ್ಮ ಪಾಲಿಗೆ. ನಿಮ್ಮ ಪ್ರತಿಭೆಯೂ ಹಿಂದುತ್ವದಲ್ಲಿ ಮಿಂಚಿದ್ದಲ್ಲವೆ ?

# ಪ್ರಮುಖ ಭಯೋತ್ಪಾದಕ ಪ್ರಭುತ್ವ ಅಮೆರಿಕ

– ನೋಮ್ ಚೋಮ್‌ಸ್ಕಿ

**ಪ್ರಶ್ನೆ** : ಭಯೋತ್ಪಾದನೆಯ ವಿರುದ್ಧ ಹೋರಾಡುತ್ತಿರುವುದಾಗಿ ಅಮೆರಿಕ ಹೇಳುತ್ತಿದೆ. ಆ ನಿರೂಪಣೆಯ ಎಲ್ಲ ಅಂಶಗಳ ವಿಷಯದಲ್ಲಿ ನಿಮ್ಮ ತಕರಾರು ಇದೆಯೆಂದು ಭಾವಿಸುತ್ತೇನೆ.

**ಉತ್ತರ** : ಭಯೋತ್ಪಾದನೆ ಕುರಿತ ನಿರೂಪಣೆಯನ್ನು - ಅಮೆರಿಕದ ನ್ಯಾಯ ಸೂತ್ರದಲ್ಲಿ ಹಾಗೂ ಸೈನ್ಯ ಕೈಪಿಡಿಯಲ್ಲಿ ಕಾಣಸಿಗುವ ಅಧಿಕೃತ ನಿರೂಪಣೆಯನ್ನು ಒಪ್ಪಲು ನನಗೆ ಸಂತೋಷವೆ. ವಾಸ್ತವದಲ್ಲಿ ನಾನು ೨೦ ವರ್ಷಗಳಿಂದ ಅಂತರರಾಷ್ಟ್ರೀಯ ಭಯೋತ್ಪಾದನೆಯ ಕುರಿತು ಬರೆಯುತ್ತಿದ್ದೇನೆ ಹಾಗೂ ಅದನ್ನು ನಾನು ನಿರಂತರ ಬಳಸುತ್ತಿದ್ದೇನೆ. ಅದು ಸರಿಯಾದ ನಿರೂಪಣೆ ಎಂದು ನಾನು ಭಾವಿಸುತ್ತೇನೆ.

ರಾಜಕೀಯ, ಧಾರ್ಮಿಕ, ಸೈದ್ಧಾಂತಿಕ ಅಥವಾ ಇತರಗಳಿಕೆಗಾಗಿ ಭಯ ಹುಟ್ಟಿಸುವ ಅಥವಾ ದಬ್ಬಾಳಿಕೆ ನಡೆಸುವ ಉದ್ದೇಶದಿಂದ ಸಾಮಾನ್ಯ ನಾಗರಿಕರ ವಿರುದ್ಧ ಯೋಜಿತ ದೌರ್ಜನ್ಯ ನಡೆಸುವುದನ್ನು ಭಯೋತ್ಪಾದನೆಗೆ ಅಧಿಕೃತ ನಿರೂಪಣೆಯಾಗಿ ನೀಡಲಾಗಿದೆ. ಅದು ಒಳ್ಳೆಯ ನಿರೂಪಣೆಯೆ. ಅದಕ್ಕೆ ನಾನು ಸಮ್ಮತಿಸುತ್ತೇನೆ. ಭಯೋತ್ಪಾದಕ ರಾಜ್ಯಗಳಿವೆ, ರಾಜ್ಯ ರಹಿತ ಭಯೋತ್ಪಾದಕ ನಟರಿದ್ದಾರೆ. ವಾಸ್ತವದಲ್ಲಿ ಅಮೆರಿಕಾದ ವಿದೇಶಾಂಗ ಇಲಾಖೆಯು ಭಯೋತ್ಪಾದಕ ರಾಜ್ಯಗಳ ಒಂದು ಪಟ್ಟಿಯನ್ನು ಹೊಂದಿದೆ.

ಸರಿಯೆ. ಆದರೆ ಆ ನಿರೂಪಣೆಯನ್ನು ಅನ್ವಯಿಸಲಾಗದು, ಬಳಸಲಾಗದು. ಏಕೆಂದರೆ ಅದು ಬಾಯಿಮಾತಿನ ನಿರೂಪಣೆಯಾಗಿದೆ. ಅದನ್ನು ಯಾಕೆ ಅನ್ವಯಿಸಲಾಗದು ಎಂಬುದಕ್ಕೆ ಎರಡು ಕಾರಣಗಳಿವೆ. ಅದು ಕಾರ್ಯತಃ ಅಮೆರಿಕದ ಅಧಿಕೃತ ಸಿದ್ಧಾಂತದ ಸರಳಾನುವಾದವಾಗಿದೆ. ಇದನ್ನು ಪ್ರತಿ – ಬಂಡಾಯ ಅಥವಾ ಅಷ್ಟೇನೂ ತೀವ್ರವಲ್ಲದ ಸಂಘರ್ಷ ಎನ್ನಲಾಗುತ್ತದೆ. ಸೈನ್ಯ ಕೈಪಿಡಿಗಳತ್ತ ಕಣ್ಣಾಡಿಸಿದರೆ ಸರಿಸುಮಾರು ಅದೇ ರೀತಿಯಲ್ಲಿ ನಿರೂಪಿಸಿರುವುದನ್ನು ಕಾಣಬಹುದು. ಆದರೆ ಅದು ಅಧಿಕೃತ ನೀತಿ.

ಈಗ ಅದನ್ನು ಯಾಕೆ ಅನ್ವಯಿಸಲಾಗದು ಎಂಬುದಕ್ಕೆ ಎರಡನೇ ಕಾರಣ : **ಹಾಗೆ ಅನ್ವಯಿಸಿದ ಪಕ್ಷದಲ್ಲಿ ಜಗತ್ತಿನ ಅತ್ಯಂತ ಬಲಿಷ್ಠ ರಾಷ್ಟ್ರವಾದ ಅಮೆರಿಕ ಪ್ರಮುಖ ಭಯೋತ್ಪಾದಕ ರಾಜ್ಯವಾಗಿದೆ ಎಂಬುದು ನಿಮಗೆ ತತ್‌ಕ್ಷಣವೇ ಮನವರಿಕೆಯಾಗುತ್ತದೆ.** ನನ್ನ ಮಾತಿನ ಅರ್ಥವೆಂದರೆ, ಭಯೋತ್ಪಾದಕತೆಯು ಬಲಹೀನರ ಅಸ್ತ್ರವೆಂದು ಕರೆಯುವುದು ಭಾರಿ ವಿಶ್ಲೇಷಣಾತ್ಮಕ ತಪ್ಪಾಗುತ್ತದೆ. ಅದು ಇತರ ಅಸ್ತ್ರಗಳಂತೆಯೇ ಬಲಾಢ್ಯರ ಅಸ್ತ್ರವಾಗಿದೆ; ಮಾತ್ರವಲ್ಲ, ಯಾವಾಗಲೂ ಹಾಗೆಯೇ ಇರುತ್ತಾ ಬಂದಿದೆ.

**ಪ್ರಶ್ನೆ** : ಇದನ್ನು ಸ್ವಲ್ಪ ವಿವರಿಸಿ ಹೇಳಿ ಪ್ರೊ॥ ಚೋಮ್‌ಸ್ಕಿಯವರೆ. ಇತ್ತೀಚಿನ ನಿಮ್ಮ **ರೋಗ್ ಸ್ಟೇಟ್ಸ್** ಕೃತಿಯಲ್ಲಿ ಆ ವಿಷಯವೂ ಸೇರಿದೆ. 'ದುಷ್ಟ' ರಾಜ್ಯಗಳೆಂದು ಅಮೆರಿಕ ವರ್ಗೀಕರಿಸಿರುವ ಇರಾನ್ ಅಥವಾ ಆಫಘಾನಿಸ್ತಾನ ದೇಶಗಳಿಗೆ ಪ್ರತಿಯಾಗಿ, ಅಮೆರಿಕದ ಹಸ್ತಕ್ಷೇಪಕಾರಿ ವಿದೇಶಾಂಗ ನೀತಿಯ ಇತಿಹಾಸವನ್ನು ಗಮನಿಸಿದಾಗ, ಅಮೆರಿಕವೇ 'ದುಷ್ಟ' ರಾಜ್ಯವಾಗಿ ಪರಿಣಮಿಸಿದೆ ಎಂಬುದನ್ನು ನೀವು ಸಮರ್ಥ ರೀತಿಯಲ್ಲಿ ಎತ್ತಿ ತೋರಿಸಿದ್ದೀರಿ.



**ಉತ್ತರ** : ಅದೇನೂ ಅಸಂಬದ್ಧವೆಂದು ನಾನು ಭಾವಿಸುವುದಿಲ್ಲ. ಸಾಮಾನ್ಯವಾಗಿ ಅತ್ಯಂತ ಬಲಿಷ್ಠ ದೇಶಗಳು ಅತ್ಯಂತ ಕ್ರೂರವೂ ಆಗಿರುತ್ತವೆ ಮತ್ತು ದುಷ್ಟ ರಾಜ್ಯವಾಗಿ ವರ್ತಿಸಲು ಸಮರ್ಥವೂ ಆಗಿರುತ್ತವೆ ಎಂಬುದು ವಾಸ್ತವ. ದುಷ್ಟ ರಾಜ್ಯವು ಅಂತರರಾಷ್ಟ್ರೀಯ ಕಾನೂನನ್ನು ಮತ್ತು ಅಂತರರಾಷ್ಟ್ರೀಯ ಅಭಿಪ್ರಾಯವನ್ನು ಹಾಗೂ ಇತರ ನಿರ್ಬಂಧಗಳನ್ನು ನಿರ್ಲಕ್ಷಿಸುವ ಮಾರ್ಗ ಅನುಸರಿಸುತ್ತದೆ. ಇದನ್ನು ಮಾಡಲು ಯಾರಿಗೆ ಸಾಧ್ಯ ? ಅತ್ಯಂತ ಬಲಿಷ್ಠ ರಾಜ್ಯಗಳಿಗೆ ಮಾತ್ರ ಇದು ಸಾಧ್ಯ.

ಹತ್ತೊಂಬತ್ತನೆಯ ಶತಮಾನದತ್ತ ಗಮನ ಹರಿಸಿದಾಗ ಬ್ರಿಟನ್ ಪ್ರಮುಖ ದುಷ್ಟ ರಾಷ್ಟ್ರಗಳ ಸಾಲಿನಲ್ಲಿತ್ತು. ೨೦ನೇ ಶತಮಾನದ ಉತ್ತರಾರ್ಧದಲ್ಲಿ ಅಮೆರಿಕಾ ಈ ವಿಷಯದಲ್ಲಿ ಸರ್ವಪ್ರಥಮವೆನ್ನಿಸಿಕೊಂಡಿತು. ಇತರ ರಾಜ್ಯಗಳಂತೆಯೇ ವರ್ತಿಸತೊಡಗಿತು. ನನ್ನ ಮಾತಿನ ಉದ್ದೇಶವೆಂದರೆ, ನಿಭಾಯಿಸಿಕೊಳ್ಳಲು ಸಾಧ್ಯವಾಗುವುದಾದರೆ ಅಂಡೋರ ಕೂಡ ದುಷ್ಟ ರಾಜ್ಯವಾಗಬಹುದು. ಆದರೆ ನಿಭಾಯಿಸಲು ಸಾಧ್ಯವಾಗದು.

ಅವಿವಾದಾತ್ಮಕ ಪ್ರಕರಣವೊಂದನ್ನು ತೆಗೆದುಕೊಳ್ಳೋಣ : ಅಂತರರಾಷ್ಟ್ರೀಯ ಭಯೋತ್ಪಾದನೆ ನಡೆಸಿದುದಕ್ಕಾಗಿ ಜಾಗತಿಕ ನ್ಯಾಯಾಲಯವು ಅಮೆರಿಕವನ್ನು ಖಂಡಿಸಿತು. ದೌರ್ಜನ್ಯಕ್ಕೆ ಈಡಾದ ದೇಶ ನಿಕರಾಗುವ. ಅದು ಸಾಧಾರಣ ಭಯೋತ್ಪಾದನೆಯಾಗಿರಲಿಲ್ಲ. ಸಾವಿರಾರು ಮಂದಿಯನ್ನು ಹತ್ಯೆ ಮಾಡಲಾಯಿತು. ದೇಶವನ್ನು ನಾಶಗೊಳಿಸಲಾಯಿತು. ಅದು ಮತ್ತೆ ಹಿಂದಿನ ಸ್ಥಿತಿಗೆ ಮರಳಲಾರದು. ನಿಕರಾಗುವ ಜಾಗತಿಕ ನ್ಯಾಯಾಲಯಕ್ಕೆ ಪ್ರಕರಣವನ್ನು ಕೊಂಡೊಯ್ಯಿತು. ನ್ಯಾಯಾಲಯದಲ್ಲಿ ನಿಕರಾಗುವಾಕ್ಕೆ ಜಯ ಲಭಿಸಿತು. ಅಮೆರಿಕ ಆ ತೀರ್ಪನ್ನು ತಿರಸ್ಕಾರದಿಂದ ತಳ್ಳಿಹಾಕಿತು. ಭಯೋತ್ಪಾದನೆಯನ್ನು ಕೈಬಿಡುವಂತೆ ಅಮೆರಿಕಕ್ಕೆ ಆದೇಶಿಸಲಾಯ್ತು. ಅಮೆರಿಕ ತತ್‌ಕ್ಷಣವೇ ಯುದ್ಧವನ್ನು ವಿಸ್ತರಿಸುವ ಮೂಲಕ ಆ ತೀರ್ಪಿಗೆ ಪ್ರತಿಕ್ರಿಯೆ ತೋರಿಸಿತು !

**ಪ್ರಶ್ನೆ** : ಅಮೆರಿಕದಂಥ ಬಲಿಷ್ಠ ದೇಶದ ಮಾತಿರಲಿ ಯಾವುದೇ ಸಣ್ಣ ದೇಶವಾದರೂ ಸೆಪ್ಟೆಂಬರ್ ೧೧ರಂಥ ಘಟನೆಗೆ ಯಾವುದೇ ಪ್ರತೀಕಾರ ಕ್ರಮ ಕೈಗೊಳ್ಳದೆ ಇರಲಾರದು ಎಂದು ಕೆಲವರು ವಾದಿಸುತ್ತಾರೆ. ಪ್ರತೀಕಾರ ಕ್ರಮ ಕೈಗೊಂಡ ರೀತಿಯಲ್ಲಿ ಅಮೆರಿಕ ಎಲ್ಲಿ ತಪ್ಪಿತೆಂದು ಭಾವಿಸುವಿರಿ ?

**ಉತ್ತರ** : ನಿಕರಾಗುವಾದ ವಿಷಯದಲ್ಲಿಯೂ ಇದನ್ನು ಹೇಳಬಹುದು. ಭಯೋತ್ಪಾದಕ ದಾಳಿಯಿಂದ ಸಾವಿರಾರು ಮಂದಿ ಹತರಾಗಿ ದೇಶಕ್ಕೆ ಸಾಕಷ್ಟು ಹಾನಿ ಸಂಭವಿಸಿರುವಾಗ

*ಆಫಘಾನಿಸ್ತಾನದ ಮೇಲೆ ಅಮೆರಿಕ ದಾಳಿ ನಡೆಸುತ್ತಿರುವ ಸಂದರ್ಭದಲ್ಲಿ 'ಅಮೆರಿಕದಲ್ಲಿ ಭಿನ್ನಮತೀಯರ ದನಿ ಕೇಳಿಸುತ್ತಿಲ್ಲವಲ್ಲ' – ಎಂಬುದು ಜಗತ್ತಿನ ಜನರೆಲ್ಲರ ಮುಂದಿರುವ ಪ್ರಶ್ನೆಯಾಗಿದೆ. ಈ ಸಂದರ್ಭದಲ್ಲಿ ಪ್ರೊ॥ ನೋಮ್ ಚೋಮ್‌ಸ್ಕಿಯವರು ಇಲ್ಲಿಗೆ ಬಂದಿರುವುದು ನಮ್ಮ ಸುದೈವ. ಅಮೆರಿಕಾದ ಮ್ಯಾಸೆಚ್ಯೂಸೆಟ್ಸ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯಲ್ಲಿ ಇವರು ವಿಖ್ಯಾತ ಪ್ರಾಧ್ಯಾಪಕರು, ಭಾಷಾಶಾಸ್ತ್ರಜ್ಞರು, ರಾಜಕೀಯ ವಿಶ್ಲೇಷಕರು. ಅನೇಕರು ಇವರನ್ನು ಅಮೆರಿಕದ ವಿದೇಶಾಂಗ ನೀತಿಯ ಉಗ್ರ ಟೀಕೆಗಾರ ಎಂದು ಬಣ್ಣಿಸುತ್ತಾರೆ. ಅಂತರರಾಷ್ಟ್ರೀಯ ವ್ಯವಹಾರಗಳ ಕುರಿತ, ಅಮೆರಿಕದ ವಿದೇಶಾಂಗ ನೀತಿ ಕುರಿತ ಅವರ ಲೇಖನಗಳು ಮತ್ತು ಭಾಷಣಗಳಿಂದ ಹಾಗೂ ಮಾಧ್ಯಮಗಳ ಮೂಲಕ ಅಮೆರಿಕ ನಡೆಸುವ ಹುನ್ನಾರಗಳನ್ನು ಬಯಲಿಗೆಳೆಯುವುದರ ಮೂಲಕ ಜಗತ್ತಿನಾದ್ಯಂತ ಅವರು ಹಲವಾರು ಜನರ ಅಭಿಮಾನಕ್ಕೆ ಪಾತ್ರರಾಗಿದ್ದಾರೆ. ದೂರದರ್ಶನದ ಚಾನಲ್ ಒಂದರಲ್ಲಿ ಶ್ರೀನಿವಾಸನ್ ಜೈನ್ ಅವರಿಗೆ ನೀಡಿದ ಸಂದರ್ಶನದ ಭಾಗಗಳನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ.*

ನಿಕರಾಗುವ ಹೇಗೆ ಪ್ರತಿಕ್ರಿಯೆ ತೋರಿಸಬೇಕಿತ್ತು ?

ನಿಕರಾಗುವ ಪ್ರತಿಕ್ರಿಯಿಸಬೇಕಾಗಿದ್ದ ರೀತಿಯಲ್ಲಿ ಪ್ರತಿಕ್ರಿಯಿಸಲಿಲ್ಲ. ಆದರಿಂದ ಯಾವ ಪ್ರಯೋಜನವೂ ಲಭಿಸುತ್ತಿರಲಿಲ್ಲ. ಯಾಕೆಂದರೆ, ಅದು ದುಷ್ಟ ರಾಜ್ಯವನ್ನು, ಅದರಲ್ಲೂ ಅತ್ಯಂತ ಪ್ರಬಲವಾದ ದುಷ್ಟ ರಾಜ್ಯವನ್ನು, ಎದುರಿಸಬೇಕಾಗಿತ್ತು. ಅಮೆರಿಕ ಆ ಮಾರ್ಗವನ್ನು ಅನುಸರಿಸಿದರೆ ಅಡ್ಡಿಪಡಿಸುವವರು ಯಾರೂ ಇಲ್ಲ.

ಈ ವಿಶಿಷ್ಟ ಪ್ರಕರಣದಲ್ಲಿ ಅದರ ವರ್ತನೆ ವಾಸ್ತವದಲ್ಲಿ ನಿಚ್ಚಳವಾಗಿದೆ. ಕಾರ್ಯಾಚರಣೆ ಪ್ರಾರಂಭಿಸುವ ಮೊದಲು ಅಮೆರಿಕ ಭದ್ರತಾ ಮಂಡಲಿಯ ನಿರ್ಣಯ ಕೋರಬಹುದಿತ್ತು. ಮಹತ್ವದ ಕಾರಣಕ್ಕಾಗಿ ಅಲ್ಲ, ಆದರೂ ಕೋರಬಹುದಿತ್ತು. ಆದರೆ ಹಾಗೆ ಮಾಡಲಿಲ್ಲ. ಅದಕ್ಕೆ ಕಾರಣ, ಐದು ರಾಜ್ಯಗಳಿಗಿರುವ ವೀಟೊ ಚಲಾಯಿಸುವ ಹಕ್ಕು. ಹೇಗೂ ಅವೆಲ್ಲ ಬಲಿಷ್ಠ, ಪ್ರಭಾವಶಾಲಿ ಮತ್ತು ಕ್ರೂರ ಭಯೋತ್ಪಾದಕ ರಾಜ್ಯಗಳು. ತಾವು ನಡೆಸುವ ಭಯೋತ್ಪಾದಕ ಕೃತ್ಯಗಳಿಗೆ ಅಮೆರಿಕದ ಬೆಂಬಲ ಗಳಿಸುವ ತಮ್ಮವೇ ಕಾರಣಗಳಿಗಾಗಿ ಅವು ಅಮೆರಿಕವನ್ನು ಬೆಂಬಲಿಸುತ್ತಿದ್ದವು. ಬ್ರಿಟನ್ ಒಂದು ಪ್ರತಿಬಿಂಬದಂತೆ ಅಮೆರಿಕವನ್ನು ಅನುಸರಿಸುತ್ತಿದೆ; ಫ್ರಾನ್ಸ್ ಯಾವುದೇ ಆಕ್ಷೇಪಣೆ ಎತ್ತುತ್ತಿರಲಿಲ್ಲ. ಚೆಚ್ನೆಯದಲ್ಲಿ ನಡೆಸುತ್ತಿರುವ ದೌರ್ಜನ್ಯಗಳಿಗೆ ಬೆಂಬಲ ಗಳಿಸಲು ರಷ್ಯಾ ಅಮೆರಿಕಕ್ಕೆ ಬೆಂಬಲ ನೀಡಲು ಸಂತೋಷಪಡುತ್ತಿತ್ತು. ಚೀಣಾದ ಪಶ್ಚಿಮ ಭಾಗಗಳಲ್ಲಿ ಮುಸ್ಲಿಮರನ್ನು ಕ್ರೂರವಾಗಿ ಹತ್ತಿಕ್ಕುವ ಕೃತ್ಯಕ್ಕೆ ಬೆಂಬಲ ಗಳಿಸುವುದಕ್ಕಾಗಿ ಅಮೆರಿಕಕ್ಕೆ ಬೆಂಬಲ ನೀಡಲು ಚೀಣಾಕ್ಕೆ ಸಂತೋಷವೇ ಆಗುತ್ತಿತ್ತು. ಯಾರೂ ವೀಟೊ ಚಲಾಯಿಸುವ ಅವಕಾಶವಿರಲಿಲ್ಲ. ಆದರೆ ಅಮೆರಿಕ ಭದ್ರತಾ ಮಂಡಲಿಯ ನಿರ್ಣಯವನ್ನು ಕೋರಲಿಲ್ಲ. ಯಾಕೆಂದರೆ ಯಾವ ಅಧಿಕಾರದ ಆಧಾರವೂ ಇಲ್ಲದೆ ಕಾರ್ಯಾಚರಣೆ ನಡೆಸಲು ಅಪೇಕ್ಷಿಸಿತು. 'ನಾನು ಭದ್ರತಾ ಮಂಡಲಿಯ ನಿರ್ಣಯವನ್ನು ಸಮ್ಮತಿಸಲಾರೆ, ಯಾಕೆಂದರೆ ಮುಂದೆ ಯಾವಾಗಲೂ ಏಕಪಕ್ಷೀಯವಾಗಿ ನಡೆದುಕೊಳ್ಳುವ "ಸ್ವಾತಂತ್ರ್ಯ" ದೊರೆಯದೆ ಹೋಗುತ್ತದೆ,' ಇದು ಅಮೆರಿಕಾ ನಿಲುವು.

**ಪ್ರಶ್ನೆ**: ವಿಮಾನ ದಾಳಿಗಳ ಹೊರತು, ಬೂಟಾಟಿಕೆಯಿಂದ ತುಂಬಿರುವ ಭದ್ರತಾ ಮಂಡಲಿಯ ನಿರ್ಣಯದ ಹೊರತು ಬೇರೇನಾದರೂ ಮಾರ್ಗವಿತ್ತೆ? ಅಮೆರಿಕ ಅನುಸರಿಸಬಹುದಾಗಿದ್ದ ಮತ್ತೊಂದು ಪರ್ಯಾಯ ಕ್ರಮವಿತ್ತೆ ?

**ಉತ್ತರ** : ಇತ್ತು. ಅಪರಾಧ ಸಂಭವಿಸಿದಾಗ ಯಾವ ಕ್ರಮ ಅನುಸರಿಸಲಾಗುತ್ತದೋ ಅದನ್ನು ಅನುಸರಿಸುವುದು. ಅದು ಸಣ್ಣ ಪಾತಕವಾಗಿರಬಹುದು. ದೊಡ್ಡ ಪಾತಕವಾಗಿರಬಹುದು. ಬೀದಿಗಳಲ್ಲಿ ನಡೆದ ದರೋಡೆ ಪ್ರಕರಣವಾಗಿರಬಹುದು ಅಥವಾ ನಿಕರಾಗುವಾದಂಥ ಅನ್ಯ ದೇಶದ ಮೇಲೆ ನಡೆಸಿದ ಭಯೋತ್ಪಾದಕ ಕೃತ್ಯವಾಗಿರಬಹುದು. ಅಪರಾಧಿಗಳನ್ನು ಪತ್ತೆ ಮಾಡಲು ಪ್ರಯತ್ನಿಸುತ್ತೀರಿ, ಅವರಿಗೆದುರಾಗಿರುವ ಸಾಕ್ಷ್ಯಗಳನ್ನು ಹಾಜರುಪಡಿಸುತ್ತೀರಿ ಹಾಗೂ ಅವರಿಗೆ ದಂಡನೆ ಕೊಡಿಸುತ್ತೀರಿ. ವಾಸ್ತವದಲ್ಲಿ ನಿಕರಾಗುವಾ ಮಾಡಿದ್ದು ಅದನ್ನೇ. ಅಪರಾಧಿಗಳನ್ನು ಪತ್ತೆಮಾಡಿ, ಸರಿಯಾದ ಸಾಕ್ಷ್ಯಾಧಾರ ಒದಗಿಸಲು ಅದಕ್ಕೇನೂ ತೊಡಕಾಗಲಿಲ್ಲ.

ಅಮೆರಿಕ ಸಹ ಇದನ್ನೇ ಮಾಡಬಹುದಿತ್ತು. ಅದು ಬೇರೆಯೇ ಕ್ರಮವನ್ನು ಅನುಸರಿಸಿತು. ಅಪರಾಧಿಗಳನ್ನು ಹತ್ತಿಕ್ಕುವ ಕ್ರಮವಲ್ಲ ಅದು. ಆಫಘಾನಿಸ್ತಾನದಲ್ಲಿ ಸತ್ತ ಜನರು ಭಯೋತ್ಪಾದಕರಲ್ಲ. ಅವರು ಆ ದೇಶದ ಪ್ರಜೆಗಳು. ಪರೋಕ್ಷ ಹಾನಿ ಎಂಬುದಕ್ಕೆ ಹೆಚ್ಚು ಒತ್ತು ನೀಡಲಾಗುತ್ತಿದೆ ಎಂದರೆ, ಬಾಂಬು ಗುರಿ ತಪ್ಪಿದರೆ, ಸಾಮಾನ್ಯ ಜನರು ಬಲಿಯಾಗುತ್ತಾರೆ. ಅದೇನೂ ಒಳ್ಳೆಯದಲ್ಲ. ಒತ್ತು ನೀಡಲು ಮುಖ್ಯ ಕಾರಣ ಅದು ಅತ್ಯಂತ ಸಣ್ಣ, ದೌರ್ಜನ್ಯಗಳ ತೀರಾ ಸಣ್ಣ ಭಾಗವಾಗಿದೆ ಎಂಬುದು.

ಸುಗ್ರಾಹ್ಯವಾದ ಹಾಗೂ ಪ್ರಾರಂಭದಿಂದಲೂ ತಿಳಿದುಬಂದಿರುವ ಮುಖ್ಯ ದೌರ್ಜನ್ಯಗಳೆಂದರೆ, ಬಹುಸಂಖ್ಯೆಯ ಜನರು ಸಾಮೂಹಿಕವಾಗಿ ಹಸಿವಿನಿಂದ ಬಳಲುವಂತೆ ವಿಧಿಸಲಾಗಿರುವ ಉದ್ದೇಶಪೂರ್ವಕ, ಪ್ರಜ್ಞಾಪೂರ್ವಕ ನಿರ್ಬಂಧ. ಮಿಲಿಯಗಟ್ಟಲೆ ಜನರು ಈ ನಿರ್ಬಂಧಕ್ಕೊಳಗಾಗಿದ್ದಾರೆ. ಅದು, ಈ ಜನರು ಹಸಿವಿನಿಂದ ಸಾಯಲಿದ್ದಾರೆ, ಸಾಯುತ್ತಿದ್ದಾರೆ ಎಂದು ತತ್‌ಕ್ಷಣ ಕೈಗೊಂಡ ನಿರ್ಣಯವಾಗಿದೆ. ಅವರು ತಾಲಿಬಾನ್‌ಗಳು ಅಥವಾ ತಾಲಿಬಾನ್ ಬೆಂಬಲಿಗರಲ್ಲ, ಬಹುಮಟ್ಟಿಗೆ ಅವರೆಲ್ಲ ತಾಲಿಬಾನ್‌ಗಳ ದೌರ್ಜನ್ಯಕ್ಕೊಳಗಾದವರೇ.

**ಪ್ರಶ್ನೆ** : ಭಾರತದಿಂದ ಗಮನಿಸುತ್ತಿರುವ ನಮ್ಮಂಥವರಿಗೆ, ನೀವು ಸೂಚಿಸುತ್ತಿರುವ ಅಭಿಪ್ರಾಯಗಳು ಅಮೆರಿಕದ ಮುಖ್ಯ ಮಾಧ್ಯಮಗಳಲ್ಲಿ, ಕೊಲ್ಲಿ ಯುದ್ಧದ ಸಂದರ್ಭದಲ್ಲಿನಂತೆಯೇ ಈಗಲೂ ಸಂಪೂರ್ಣವಾಗಿ ಕೇಳಿಬರುತ್ತಿಲ್ಲವೆನಿಸುತ್ತದೆ. ಅಮೆರಿಕದ ಮುಖ್ಯ ಮಾಧ್ಯಮ ಜಾಲಗಳು ಅಥವಾ ಪತ್ರಿಕೆಗಳು ಈ ಯುದ್ಧದ ಬಗ್ಗೆ ವರದಿ ಮಾಡುವಲ್ಲಿ ಏನಾದರೂ ಬದಲಾವಣೆ ಆಗಿದೆಯೇ ?

**ಉತ್ತರ** : ಅವು ಮೊದಲಿದ್ದುದಕ್ಕಿಂತ ಈಗ ಸ್ವಲ್ಪ ತೆರೆದುಕೊಂಡಿವೆ. ಉದಾಹರಣೆಗೆ, ವಿಯೆತ್ನಾಂ ಯುದ್ಧ ತೆಗೆದುಕೊಳ್ಳಿ. ಆ ಸಂದರ್ಭದಲ್ಲಿ ಒಂದು ಸಣ್ಣ ಟೀಕೆಗೂ ಅವಕಾಶವಿರಲಿಲ್ಲ. ಸಂಪೂರ್ಣ ನಿರ್ಬಂಧವಿತ್ತು. ೧೯೬೦ರ ದಶಕ ಸಮಾಜವನ್ನು ಬದಲಾಯಿಸಿತು. ಅದು ಅನೇಕ ರೀತಿಯಲ್ಲಿ ಹೆಚ್ಚು ತೆರೆದ ನಾಗರಿಕ ಸಮಾಜವಾಯಿತು. ಅದು ಮಾಧ್ಯಮಗಳ ಮೇಲೂ ಪರಿಣಾಮ ಉಂಟುಮಾಡಿತು. ಅವು ಸ್ವಲ್ಪಮಟ್ಟಿಗೆ ತಮ್ಮನ್ನು ತೆರೆದುಕೊಂಡವು.

ಆದರೆ, ನಾನು ಚಟುವಟಿಕೆ ನಡೆಸುತ್ತ ಬಂದಿರುವ ೫೦ ವರ್ಷಗಳ ನನ್ನ ನೆನಪಿನಿಂದ ಹೇಳುವುದಾದರೆ, ವಿಶಿಷ್ಟವಾಗಿ ಈ ಪ್ರಕರಣದಲ್ಲಿ ರಾಷ್ಟ್ರೀಯ ಮಾಧ್ಯಮವಾಗಲಿ, ಅಮೆರಿಕದ ಅರ್ಥದಲ್ಲಿ ಸೋಷಲ್ ಡೆಮಾಕ್ರಟರನ್ನು ಸೂಚಿಸುವ ಲಿಬರಲ್ ಮಾಧ್ಯಮವಾಗಲಿ, ಸಾರ್ವಜನಿಕ ರೇಡಿಯೋ ವ್ಯವಸ್ಥೆಯಾಗಲಿ, **ನ್ಯೂಯಾರ್ಕ್ ಟೈಂಸ್** ಆಗಲಿ ಯಾವುದೂ ಬಹಿರಂಗ ಚರ್ಚೆಗೆ ತೊಡಗಿಕೊಂಡಿಲ್ಲ. ಆದರೆ ಆ ಕ್ಷೇತ್ರದಿಂದ ಹೊರಗೆ ಬಂದಾಗ, ಸ್ವಲ್ಪಮಟ್ಟಿಗೆ ಬಹಿರಂಗವಾದ, ಸಾಕಷ್ಟು ಚರ್ಚೆ ನಡೆಯುತ್ತಿದೆ.

**ಪ್ರಶ್ನೆ** : ಹಾಗೇಕೆ ? ಈ ಬಾರಿ ಈ ಬದಲಾವಣೆಗೆ ಕಾರಣವೇನೆನ್ನುವಿರಿ ?

**ಉತ್ತರ** : ಹಲವು ಕಾರಣಗಳು. ಮುಖ್ಯವಾಗಿ ಪತ್ರಿಕೆಗಳ ಉತ್ತೇಜಕ ತಲೆ ಬರಹಗಳಿಗೆ ಪ್ರತಿಯಾಗಿ ಜನರು ಭೀತಿಗೊಂಡಿದ್ದಾರೆ, ಕೋಪಗೊಂಡಿದ್ದಾರೆ, ಕಂಗೆಟ್ಟಿದ್ದಾರೆ, ಗೊಂದಲಕ್ಕೊಳಗಾಗಿದ್ದಾರೆ, ಇದರ ಹಿನ್ನೆಲೆಯ ಬಗ್ಗೆ ಕಳವಳಗೊಂಡಿದ್ದಾರೆ. ಹಾಸಿಗೆಯಡಿಯಲ್ಲಿ ಬಚ್ಚಿಟ್ಟಿದ್ದ ಹಾಗೂ ಯಾವಾಗಲೂ ಚರ್ಚಿಸದಿದ್ದ ಸಮಸ್ಯೆಗಳ ಬಗ್ಗೆ ತಿಳಿದುಕೊಳ್ಳಲು ಅಪೇಕ್ಷಿಸುತ್ತಾರೆ. ವಾಲ್ ಸ್ಟ್ರೀಟ್ ಜರ್ನಲ್ ನಂಥ ವಾಣಿಜ್ಯ ಪತ್ರಿಕೆಗಳ ಬಗ್ಗೆ ಹೇಳುವುದಾದರೆ, ಅವು ಸೆಪ್ಟೆಂಬರ್ ೧೧ರ ಘಟನೆಯ ಕೂಡಲೇ ಅಮೆರಿಕದ ವಿದೇಶಾಂಗ ನೀತಿಗೆ ಸಂಬಂಧಿಸಿದಂತೆ ಮುಸ್ಲಿಂ ಜಗತ್ತಿನ ಧೋರಣೆಗಳ ಕುರಿತು ಗಂಭೀರ ಲೇಖನಗಳನ್ನು ಪ್ರಕಟಿಸುತ್ತಿವೆ. ಈಗ ಭಯೋತ್ಪಾದಕ ವೃಂದಗಳಿಗೆ ತಮ್ಮವೇ ವಿಷಯಗಳಿವೆ. ಅವನ್ನು ಸಿ.ಐ.ಎ. ಸಂಸ್ಥೆಯಷ್ಟು ಚೆನ್ನಾಗಿ ಬಲ್ಲವರು ಯಾರೂ ಇಲ್ಲ. ಸಿ.ಐ.ಎ. ಅವುಗಳಿಗೆ ಸಹಾಯ ನೀಡಿತು. ವಾಸ್ತವದಲ್ಲಿ ಹತ್ತು ವರ್ಷಗಳ ಕಾಲ ಅವನ್ನು ಪೋಷಿಸಿತು. ಕೇವಲ ಸಿ.ಐ.ಎ. ಮಾತ್ರವಲ್ಲ. ಬ್ರಿಟಿಷ್ ಗೂಢಚಾರ ಸಂಸ್ಥೆ, ಫ್ರೆಂಚ್ ಗೂಢಚಾರ ಸಂಸ್ಥೆ, ಈಜಿಪ್ಟ್, ಸೌದಿ ಅರೇಬಿಯಾ, ಪಾಕಿಸ್ತಾನ ಇವೆಲ್ಲ ದೊಡ್ಡ ಕೂಲಿ ಪಡೆಗಳನ್ನು ಸಂಘಟಿಸಿದವು. ಉತ್ತರ ಆಫ್ರಿಕ, ಸೌದಿ ಅರೇಬಿಯ ಮುಂತಾದ ದೇಶಗಳಲ್ಲಿ ಉಗ್ರಗಾಮಿ, ಮೂಲಭೂತ ಇಸ್ಲಾಮ್‌ವಾದಿಗಳನ್ನು ಗುರುತಿಸಿ ಅವರನ್ನು ಉಗ್ರ ಕೊಲೆಗಾರರಾಗಿ ಪರಿವರ್ತಿಸಿದರು. ಅವರಿಗೆ ಶಸ್ತ್ರಾಸ್ತ್ರ ನೀಡಿದರು, ತರಬೇತು ನೀಡಿದರು. ಅವರನ್ನು ಪೋಷಿಸಿದರು. ರಷ್ಯನರಿಗೆ ಸಾಕಷ್ಟು ಕಿರುಕುಳ ನೀಡುವುದು ಅವರ ಮುಖ್ಯ ಉದ್ದೇಶವಾಗಿತ್ತು. ನಿಮಗೆ ತಿಳಿದಿರುವಂತೆ ಅವರಿಗೆ ಆಫಘಾನಿಸ್ತಾನದ ಬಗ್ಗೆ ಏನೂ ಕಾಳಜಿ ಇರಲಿಲ್ಲ. ವಾಸ್ತವದಲ್ಲಿ ಅದನ್ನು ಹಾಳುಗೆಡವಿ ಅವರು ಅಲ್ಲಿಂದ ತೆರಳಿದರು. ಈ ಉಗ್ರ ಹಂತಕರು ಪ್ರಾರಂಭದಿಂದಲೂ ತಮ್ಮದೇ ಕಾರ್ಯಸೂಚಿಯನ್ನು ಅನುಸರಿಸುತ್ತಿದ್ದರು ಎಂಬುದೇನೂ ರಹಸ್ಯವಲ್ಲ. ಇಪ್ಪತ್ತು ವರ್ಷಗಳ ಹಿಂದೆ ಅವರು ಈಜಿಪ್ಟಿನ ಅಧ್ಯಕ್ಷ ಅನ್ವರ್ ಸಾದತ್‌ರನ್ನು ಹತ್ಯೆ ಮಾಡಿದರು ಮತ್ತು ಅಲ್ಲಿಂದೀಚೆಗೆ ಹಲವಾರು ಭಯೋತ್ಪಾದಕ ಕೃತ್ಯಗಳನ್ನು ನಡೆಸಿದರು. ಅವರ ಭಯೋತ್ಪಾದಕ ಚಟುವಟಿಕೆಗಳು, ಅವರ ದ್ವೇಷಗಳು ಮತ್ತು ಅವರ ಮತಾಂಧತೆಗಳು ಅಮೆರಿಕದ ಉದ್ದೇಶಗಳಿಗೆ ಸಹಾಯಕವಾಗುವವರೆಗೆ ಅಮೆರಿಕದ ದೃಷ್ಟಿಯಲ್ಲಿ ಅವರೆಲ್ಲ ಒಳ್ಳೆಯವರಾಗೇ ಇದ್ದರು. ಮುಂದೆ ಈ ಪರಿಸ್ಥಿತಿ ಬದಲಾಯಿತು. ವಾಸ್ತವದಲ್ಲಿ ಆಗಿರುವ ಬದಲಾವಣೆ ಆಶ್ಚರ್ಯವೆನಿಸುವಷ್ಟು ಅತ್ಯಲ್ಪ. ಜಾಗತಿಕ ವಾಣಿಜ್ಯ ಕೇಂದ್ರದ ಮೇಲೆ ಎರಡನೆ ಬಾರಿಗೆ ದಾಳಿ ನಡೆಯಿತು – ೧೯೯೩ರಲ್ಲಿ ಸಹ ದಾಳಿ ನಡೆದಿತ್ತು. ಈ ಬಾರಿ ಯಶಸ್ವಿಯಾದರು. ಇನ್ನೂ ಭಾರಿ ಯೋಜನೆಗಳನ್ನು – ವಿಶ್ವಸಂಸ್ಥೆಯ ಕಟ್ಟಡ, ಸುರಂಗ ಮಾರ್ಗಗಳು, ಎಫ್‌ಬಿಐ ಕಟ್ಟಡ ಇತ್ಯಾದಿಗಳನ್ನು ಸ್ಫೋಟಿಸುವ ಯೋಜನೆಗಳನ್ನು – ಹಾಕಿಕೊಂಡಿದ್ದರು. ಮೊದಲ ಸಲದ ಭಯೋತ್ಪಾದಕ ದಾಳಿಯ ಅಪರಾಧಕ್ಕಾಗಿ ಈಗ ಜೈಲಿನಲ್ಲಿರುವ ವ್ಯಕ್ತಿಗಳಲ್ಲೊಬ್ಬ ಈಜಿಪ್ಟ್ ದೇಶಕ್ಕೆ ಸೇರಿದ ಮುಲ್ಲಾ. ಈ ಘಟನೆ ಸಂಭವಿಸುವುದಕ್ಕೆ ಮೂರು ವರ್ಷಗಳಿಗೆ ಮುಂಚೆ ಆತ ಅಮೆರಿಕಕ್ಕೆ ಬಂದ. ಆತ ಸಿ.ಐ.ಎ.ನ ವ್ಯಕ್ತಿಯಾಗಿದ್ದುದರಿಂದ, ವಲಸೆ ಹಾಗೂ ರಾಷ್ಟ್ರೀಯ ಸೇವಾ ಸಂಸ್ಥೆಯ ಆಕ್ಷೇಪಣೆಯನ್ನು ಕಡೆಗಣಿಸಿ, ಸಿ.ಐ.ಎ. ಮಧ್ಯಪ್ರವೇಶದ ಕಾರಣ ಪ್ರವೇಶ ನೀಡಲಾಯಿತು. ಆ ವ್ಯಕ್ತಿ ಅಮೆರಿಕದಲ್ಲಿರಬೇಕೆಂದು ಅವರು ಅಪೇಕ್ಷಿಸಿದರು. ಆತ ಈಜಿಪ್ಟಿನಲ್ಲಿ ಭಯೋತ್ಪಾದಕ ಚಟುವಟಿಕೆಯ ಆಪಾದನೆ ಹೊತ್ತವನಾಗಿದ್ದ. ಆದರೂ ಆತನನ್ನು ಬರಗೊಟ್ಟರು. ಕಾರಣ ಸ್ಪಷ್ಟವಿದೆಯಲ್ಲವೆ ? ಅವರು ಬೆಳೆಸುವುದು ಇಂಥವರನ್ನು.

**ಪ್ರಶ್ನೆ** : ಈ ಎಲ್ಲ ವಿಷಯಗಳು ಮುಖ್ಯ ಮಾಧ್ಯಮಗಳಲ್ಲಿ ವರದಿಯಾಗುತ್ತವೆಯೇ ? ಪ್ರಾಯಶಃ ಆಗಬೇಕಾದಷ್ಟು ಪ್ರಮಾಣದಲ್ಲಿಲ್ಲ ಅಲ್ಲವೆ ?

**ಉತ್ತರ** : ಬಹಳ ಕಡಮೆ. ಸ್ವತಃ ತಾನೂ ಭಯೋತ್ಪಾದಕ ರಾಜ್ಯವಾದ, ಪ್ಯಾರಾಮಿಲಿಟರಿ ಮೂಲಕ ಭಯೋತ್ಪಾದನೆಗೆ ಒತ್ತಾಸೆ ಕೊಡುವ ರಾಜ್ಯವಾದ ಭಾರತದ ಬಗ್ಗೆ ಬಹಳ ಕಡಮೆ

ವರದಿಯಾಗುತ್ತದೆ. ಭಾರತ ಬಹಿರಂಗವಾಗಿ ಉತ್ತರದ ಮೈತ್ರಿಕೂಟಕ್ಕೆ ಬೆಂಬಲ ನೀಡುತ್ತಿದೆ. ಈ ಕೂಟವಾದರೂ ಆಫಘಾನಿಸ್ತಾನವನ್ನು ನಿಯಂತ್ರಣದಲ್ಲಿಟ್ಟುಕೊಳ್ಳಲು ಆಪೇಕ್ಷಿಸುತ್ತಿರುವ ಸೈನ್ಯಾಧಿಕಾರಿಗಳ ಒಕ್ಕೂಟವಾಗಿದೆ. 'ಮಾನವ ಹಕ್ಕುಗಳ ನಿಗಾವಣೆ' ಸಂಸ್ಥೆಯ ಅಂದಾಜಿನಂತೆ ಈ ಮೈತ್ರಿಕೂಟ ನಡೆಸಿದ ದೌರ್ಜನ್ಯಗಳಿಂದ ೯೦ರ ದಶಕದಲ್ಲಿ ಸುಮಾರು ೫೦ ಸಾವಿರಕ್ಕೂ ಹೆಚ್ಚು ಜನರು ಸತ್ತಿದ್ದಾರೆ. ಈ ಕಾರಣದಿಂದಾಗಿ ಅಲ್ಲಿನ ಜನರು ತಾಲಿಬಾನ್‌ಗಳನ್ನು ಬಹಿರಂಗವಾಗಿ ಸ್ವಾಗತಿಸುವಂತಾಯಿತು. ಈಗ ಅಮೆರಿಕ ಅಂಥ ಭಯೋತ್ಪಾದಕ ಸಂಘಟನೆಗೆ ಬೆಂಬಲ ನೀಡುತ್ತಿದೆ. ಅಮೆರಿಕ, ಬ್ರಿಟನ್ ಮತ್ತು ಭಾರತ ಈಗ ಅಮೆರಿಕದಿಂದ ಮಾನವ ಹಕ್ಕುಗಳ ವಿರುದ್ಧ ನಡೆಯುತ್ತಿರುವ ಭೀಕರ ಉಲ್ಲಂಘನೆಯನ್ನು ಮಾನ್ಯ ಮಾಡುವುದನ್ನು ನಾವು ಕಾಣುತ್ತಿದ್ದೇವೆ. ಭಾರೀ ಉಲ್ಲಂಘನೆಗಳು ಪ್ರತ್ಯೇಕ ಹಾನಿಯಲ್ಲ, ಆಸ್ಪತ್ರೆಗಳ ಮೇಲೆ ಸಿಡಿಯುವ ಬಾಂಬು ದಾಳಿಯಲ್ಲ. ಬದಲು ಉದ್ದೇಶಪೂರ್ವಕವಾಗಿ ಬಹುಸಂಖ್ಯೆಯ ಜನರು ಹಸಿವಿಗೆ ತುತ್ತಾಗುವಂತೆ ನಿರ್ಬಂಧಿಸಲಾಗುತ್ತಿದೆ. ಈ ವಿಷಯ ಎಲ್ಲರಿಗೂ ತಿಳಿದಿದೆ. ನಾನು ಹೇಳುವುದೇನೆಂದರೆ ಆ ದೇಶ ಆಗಲೇ ವಿನಾಶದ ಅಂಚಿನಲ್ಲಿದೆ. ಬಾಂಬ್ ದಾಳಿ ಪ್ರಾರಂಭವಾಗುವ ಮೊದಲೇ ಅಂದಾಜಿನಂತೆ ಆರು ಮಿಲಿಯ ಮಂದಿ, ಸಹಾಯ ನೀಡಲಾಗುವ ಆಹಾರವನ್ನು ಅವಲಂಬಿಸಿದ್ದರು. ಹಸಿವಿಗೆ ತುತ್ತಾಗುವ ಹಂತದಲ್ಲಿದ್ದರು. ಬಾಂಬ್ ದಾಳಿಯ ಅಪಾಯದ ನಂತರ ಪರಿಸ್ಥಿತಿ ಹದಗೆಟ್ಟಿತು. ಸಹಾಯ ಸಂಸ್ಥೆಗಳ ಸೇವೆಯನ್ನು ಹಾಗೂ ಆಹಾರ ಧಾನ್ಯಗಳನ್ನು ಹಿಂದೆಗೆದುಕೊಳ್ಳಲಾಯಿತು. ಜನರು ಮನೆಮಠಗಳನ್ನು ತ್ಯಜಿಸಿ ಹೋದರು. ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿತು. ಬಾಂಬ್ ದಾಳಿ ಪ್ರಾರಂಭವಾದ ನಂತರ ಪರಿಸ್ಥಿತಿ ತೀರಾ ಗಂಭೀರವಾಯಿತು. ವಾಸ್ತವದಲ್ಲಿ ಹಸಿವಿಗೆ ತುತ್ತಾದ ಜನರ ಸಂಖ್ಯೆ ಶೇ. ೫೦ರಷ್ಟು ಹೆಚ್ಚಿ ೭.೫ ಮಿಲಿಯವನ್ನು ತಲುಪಿದೆ ಎಂದು *ನ್ಯೂಯಾರ್ಕ್ ಟೈಂಸ್* ಸಹ ಅಂದಾಜು ಮಾಡಿತು. ಆಹಾರಧಾನ್ಯ ಕಡಿತದಿಂದ ಮಾತ್ರವಲ್ಲದೆ ಬಾಂಬು ದಾಳಿಯಿಂದ ಶೇ. ೮೦ರಷ್ಟು ಕೃಷಿ ಕಾರ್ಯಕ್ಕೆ ಅಡಚಣೆ ಉಂಟಾಗಿ ಮುಂದಿನ ವರ್ಷ ಬರಗಾಲ ತಲೆದೋರಿ ಭಾರಿ ಅನಾಹುತ ಸಂಭವಿಸಲಿದೆ ಎಂದು ವಿಶ್ವಸಂಸ್ಥೆಯ ಆಹಾರ ಮತ್ತು ಕೃಷಿ ಸಂಘಟನೆ ಪ್ರಕಟಿಸಿತು. ಈ ವರದಿ ಅಮೆರಿಕದ ಮಾಧ್ಯಮಗಳಲ್ಲಿ ಪ್ರಕಟವಾಗಲಿಲ್ಲ. ಅವು ಉದ್ದೇಶಪೂರ್ವಕವಾದ, ಪ್ರಜ್ಞಾಪೂರ್ವಕವಾದ ಕೃತ್ಯಗಳು. ಅವು ಭಾರಿ ಕ್ರೌರ್ಯದ ಭಯೋತ್ಪಾದಕ ಕೃತ್ಯಗಳು. ಇವು ಯಾವುವೂ ಸೆಪ್ಟೆಂಬರ್ ಹನ್ನೊಂದರ ಘೋರ ಕೃತ್ಯಗಳನ್ನು ಸಮರ್ಥಿಸಲಾರವು. ಅವು ಸಹ ಅತ್ಯಂತ ಘೋರ ಕೃತ್ಯಗಳೇ. ಇಪ್ಪತ್ತೊಂದನೇ ಶತಮಾನ ಎರಡು ದೊಡ್ಡ ಘೋರ ಕೃತ್ಯಗಳೊಂದಿಗೆ ಪ್ರಾರಂಭವಾಗುತ್ತಿದೆ. ಅವುಗಳೆರಡರಲ್ಲೂ ನಾವು ನೇರವಾಗಿ ಸಂಬಂಧಪಟ್ಟಿದ್ದೇವೆ.

**ಪ್ರಶ್ನೆ** : ಪ್ರೊ॥ ಚೋಮ್‌ಸ್ಕಿಯವರೇ, ನಿಮ್ಮ ಹಿಂದಿನ ಲೇಖನಗಳಲ್ಲಿ, ನಿಮ್ಮದೇ ಮಾತಿನಲ್ಲಿ ಹೇಳುವುದಾದರೆ, ಅಮೆರಿಕದ ಬುದ್ಧಿಜೀವಿಗಳ ಮಧ್ಯೆ ಒಂದು ರೀತಿಯಲ್ಲಿ ಸಾರ್ವಜನಿಕಾಭಿಪ್ರಾಯವನ್ನು ಉಂಟುಮಾಡುವ ಅಥವಾ ರೂಪಿಸುವ ಕ್ರಮ ಕುರಿತು ಸೂಚಿಸಿದ್ದೀರಿ. ಅದು ಮತಧರ್ಮದಿಂದ ದೂರವಿರಬೇಕು ಮತ್ತು ಕೇವಲ ಉಪದೇಶಾತ್ಮಕವಾಗಿರಕೂಡದು ಎಂದು ಹೇಳಿದ್ದಿರೆಂದು ವರದಿಯಾಗಿದೆ.

**ಉತ್ತರ** : ಇಂಥ ಪ್ರಯತ್ನ ಕುರಿತು ಹೇಳಿದ್ದೆ. ಪ್ರಯತ್ನಿಸುವುದಕ್ಕೂ ಯಶಸ್ವಿಯಾಗುವುದಕ್ಕೂ ಮಧ್ಯೆ ಭಾರಿ ವ್ಯತ್ಯಾಸವಿದೆ. ಅದು ಯಶಸ್ವಿಯಾಗಲಾರದು. ಅದರಿಂದೇನೂ ಬಾಧಕವಿಲ್ಲ. ಯಾಕೆಂದರೆ ದೇಶದಲ್ಲಿರುವುದು ಕೆಲವೇ ಪ್ರತಿಷ್ಠಿತರ ಆಡಳಿತ ವ್ಯವಸ್ಥೆ. ತಾಂತ್ರಿಕವಾಗಿ ಅದು ಪ್ರಜಾಪ್ರಭುತ್ವದ ದೇಶವೇ. ಆದರೆ ಸಾರ್ವಜನಿಕರು ಯಾವ ಗಣನೆಗೂ ಬಾರದವರಾಗಿದ್ದಾರೆ. ಅಂತೆಯೇ ನಿರ್ಣಯ ಕೈಗೊಳ್ಳುವವರು ಅಲ್ಪಸಂಖ್ಯೆಯವರು. ನೀವು ಗಮನಿಸಿದಿರಾದರೆ ಅವರು ಸಾರ್ವಜನಿಕರಿಂದ ತೀರಾ ಪ್ರತ್ಯೇಕವಾಗಿ ಉಳಿದಿರುವುದನ್ನು ಕಾಣಬಹುದು. ವಿಯೆತ್ನಾಂ ಯುದ್ಧದ ವಿಷಯ ತೆಗೆದುಕೊಳ್ಳಿ – ಇದು ಅತ್ಯಂತ ದೊಡ್ಡ ಪ್ರಶ್ನೆ. ಸುಮಾರು ೩೦ ವರ್ಷಗಳಿಂದಲೂ ವಿಯೆತ್ನಾಂ ಯುದ್ಧದ ಬಗ್ಗೆ ಸಾರ್ವಜನಿಕರ ನಿಲುವು ಕುರಿತು ಕ್ರಮಬದ್ಧವಾದ, ವಿವರವಾದ, ಸಾರ್ವಜನಿಕಾಭಿಪ್ರಾಯ ಸಂಗ್ರಹಿಸಲಾಗುತ್ತಿದೆ. ಯುದ್ಧದ ಕುರಿತು ನಿಮ್ಮ ಅಭಿಪ್ರಾಯವೇನು ಎಂಬ ಪ್ರಶ್ನೆಗೆ ಸುಮಾರು ಶೇ. ೭೦ರಷ್ಟು ಜನರು, ಪಟ್ಟುಬಿಡದೆ ಮೂಲಭೂತವಾಗಿ ಸರಿಯಲ್ಲ ಮತ್ತು ಅನೈತಿಕ, ಎಂದು ಉತ್ತರಿಸುತ್ತಾರೆ. ಯಾವ ಬುದ್ಧಿಜೀವಿಯೂ ಇಂಥ ಉತ್ತರ ನೀಡಲಾರ. ಶೇ. ೭೦ರ ಈ ಸಂಖ್ಯೆ ಆಶ್ಚರ್ಯ ಹುಟ್ಟಿಸುವಂತಿದೆ. ಯಾಕೆಂದರೆ ಆ ಪೈಕಿ ಎಲ್ಲರೂ ತಮ್ಮಷ್ಟಕ್ಕೆ ತಾವಿರುವವರು. ಅವರು ಯಾವುದಾದರೂ ಕ್ರಿಯಾಶೀಲ ಚಳುವಳಿಯಲ್ಲಿ ಭಾಗವಹಿಸದಿದ್ದ ಪಕ್ಷದಲ್ಲಿ ಆ ವಿಷಯವನ್ನು ಎಲ್ಲಿಯೂ ಕೇಳಿರಲಾರರು, ಓದಿರಲಾರರು. ಆದರೆ ಅವರ ಅಭಿಪ್ರಾಯದ ಪ್ರಭಾವ ಕಾಣಬರುತ್ತಿಲ್ಲ.

**ಪ್ರಶ್ನೆ** : ಈ ಯುದ್ಧದ ಸಂದರ್ಭದಲ್ಲಿಯೂ ಬುದ್ಧಿಜೀವಿಗಳ ವ್ಯಾವಹಾರಿಕ ರಚನೆಯೊಂದು ಸಾರ್ವಜನಿಕ ಸಮ್ಮತಿ ರೂಪಿಸಲು ಪ್ರಯತ್ನಿಸುತ್ತಿದೆಯೇ ?

**ಉತ್ತರ** : ಹೌದು ಪ್ರಯತ್ನಿಸುತ್ತಿದೆ. ಅಮೆರಿಕದ ಮುಖ್ಯ ಮಾಧ್ಯಮಗಳಲ್ಲಿ ನಾನು ನಿಮಗೆ ಹೇಳಿದ ವಿಚಾರಗಳನ್ನು ಕಾಣಲಾರಿರಿ. ಸಾರ್ವಜನಿಕರು ಸಮ್ಮತಿಸುತ್ತಾರೆಂದು ಹೇಳಲಾರೆ. ಅವರು ಗೊಂದಲಗೊಂಡಿದ್ದಾರೆ.

ಉದಾಹರಣೆಗೆ, ಯುದ್ಧದ ಗುರಿ ಆಫಘಾನ್ ಪ್ರಜೆಗಳು – ಎಂಬ ತಿಳಿವಳಿಕೆ ಬಹಳ ಕಡಿಮೆ ಮಂದಿ ಸಾರ್ವಜನಿಕರಿಗೆ ಮಾತ್ರ ಇದೆ. ಅಮೆರಿಕದ ಮಾಧ್ಯಮಗಳಲ್ಲಿ ಸಹಾಯ ಸಂಸ್ಥೆಗಳ, ರೆಡ್‌ಕ್ರಾಸ್‌ನ, ಜಾಗತಿಕ ಆಹಾರ ಕಾರ್ಯಕ್ರಮ ಸಂಸ್ಥೆಯ ಪ್ರಕಟಣೆಗಳಿಗೆ, ವಿಶ್ವಸಂಸ್ಥೆಯ ಆಹಾರ ಸಂಬಂಧದ ವಿಶೇಷ ವರದಿಗೆ ಸಿಕ್ಕಿದ ಅವಕಾಶವನ್ನು ನೀವು ನೋಡಬೇಕು. ಮಾನವ ಹಕ್ಕುಗಳ ಹೈ ಕಮಿಷನರಾದ ಮೇರಿ ರಾಬಿನ್‌ಸನ್‌ರ ಹೇಳಿಕೆಗಳನ್ನು ಇಡೀ ಅಮೆರಿಕದ ಪತ್ರಿಕೆಗಳು ಮೂರು ವಾಕ್ಯಗಳಲ್ಲಿ - ಚಿಲ್ಲಾಪಿಲ್ಲಿಯಾದ ಮೂರು ವಾಕ್ಯಗಳಲ್ಲಿ - ವರದಿ ಮಾಡಿದವು. ಇತರರಿಗೆ ಹೇಗೆ ತಿಳಿಯುತ್ತದೆ ?

**ಪ್ರಶ್ನೆ** : ಕೊನೆಯದಾಗಿ, ಪ್ರೊ॥ ಚೋಮ್‌ಸ್ಕಿಯವರೇ, ಯಾವಾಗಲೂ ಅಧಿಕಾರಾರೂಢ ಸಾಂಸ್ಥಿಕ ವ್ಯವಸ್ಥೆಯನ್ನು ಎದುರಿಸುತ್ತಾ ಬಂದಿರುವ ನೀವು ಸ್ವತಃ ಒಂದು ಸಂಸ್ಥೆಯಾಗುತ್ತಿರುವ ಬಗ್ಗೆ ನಿಮಗೆ ವ್ಯಥೆಯಾಗುತ್ತದೆಯೆ ?

**ಉತ್ತರ** : ಇಲ್ಲ, ಈ ವಿಷಯದಲ್ಲಿ ಭಾರಿ ಅಪಾಯವಿದೆ ಎನ್ನಿಸುವುದಿಲ್ಲ. ನಾನು ಯಾವುದೇ ರೀತಿಯಲ್ಲಿ ಅಪೂರ್ವ ವ್ಯಕ್ತಿಯಲ್ಲ. ನನ್ನಂತೆಯೇ ಜೀವಿಸುತ್ತಿರುವ, ನನಗಿಂತ ಮೊದಲೇ ಕಾರ್ಯನಿರತರಾಗಿದ್ದ ಹಲವಾರು ಜನರಿದ್ದಾರೆ. ಯುವಕರೂ ಇದ್ದಾರೆ. ಆದ್ದರಿಂದ ನಾನೇ 'ಸಂಸ್ಥೆ'ಯಾಗುವ ಅಪಾಯವೇನೂ ಇಲ್ಲ.

*(ಸಿದ್ಧಗೊಳಿಸಿದವರು : ಕೆ. ಪಿ. ಸ್ವಾಮಿ)*

❑

## ಆಕ್ರಮಣ

ಎಲ್ಲ ಸಂಸ್ಕೃತಿಗಳ ನುಂಗಿ
ತನ್ನದಾಗಿರಿಸಿಕೊಳ್ಳುವ ಹೆಗ್ಗಳಿಕೆ ನಮ್ಮದು
ಅಂದು ಆರ್ಯರೂ
ನಂತರದ ಮುಸಲರೂ
ಮೊನ್ನೆ ಮೊನ್ನೆಯ ಆಂಗ್ಲರೂ
ಒಳಸೇರಿದ್ದಾರೆ. ನಮ್ಮ ಸಂಸ್ಕೃತಿಯ ಹೊಟ್ಟೆಗೇ.
ಆಗಿದೆ ಅವರ ರೀತಿರಿವಾಜು ಭಾಷೆಗೆ
ನಮ್ಮ ಪರಕಾಯ ಪ್ರವೇಶ
ನಡೆದಿದೆ ಈಗೊಂದು ಹೊಸ ಆಕ್ರಮಣ
ಹಿಂದೆಂದೂ ಕಾಣದಂತೆ
ಕಾಣದೆಯೆ ಉಡುಗಿಸುವ ವೈರಸ್‌ಗಳಂತೆ
ನಮ್ಮ ಹೊಟ್ಟೆಯ ಸೇರಿ ಎಬ್ಬಿಸಿದೆ ಕೋಲಾಹಲ
ಎದೆ ಮಿಡಿತ ಕೈಗೆ ಸಿಗದೇರುಪೇರು
ನರ ನಾಡಿಗಳಿಗೆಲ್ಲ ಏರಿದೆ
ದ್ರವ್ಯ ಪಿಪಾಸೆಯ ಮತ್ತು
ದಾಹ ತೀರದ ಸ್ವಾಹಾಕಾರ.
ಪ್ರಜ್ಞೆ ಮರೆಸಿದೆ ಹೊಸ
ವಶೀಕರಣದ ಮದ್ದು
ಎಲ್ಲೆಲ್ಲೂ ಅದರದೇ ಯಂತ್ರ
ಮಾರುತಂತ್ರ ಉತ್ಕರ್ಷ ಮಂತ್ರ
ಬೀಸಿಬಂದಾವರಿಸಿದೆ
ಪಶ್ಚಿಮದ ಗಾಳಿಯಲಿ



ನಮ್ಮ ಮಿದುಳ ಬಳ್ಳಿಗಳ
ದಿಕ್ಕು ತಿಳಿಯದಂತೆ ಆಗಿದೀಗ
ಅಪೂರ್ವ ಪಶ್ಚಿಮ.
ಅರಗಿಸುವೆವೇ ಅಗಸ್ತ್ಯನಂತೀ
ನವವಾತಾಪಿಗಳ ?
ತುಳಿವೆವೆ ಭೂಗತ ತ್ರಿವಿಕ್ರಮನಾಗಿ
ಕಲಿಯುಗದೀ ಅದೃಶ್ಯ ಬಲಿಗಳ ?

ಶ್ರೀ ಯದುನಂದನ
ಮೈಸೂರು

# ಮಕ್ಕಳಲ್ಲಿ ಮೂಢನಂಬಿಕೆಯನ್ನು ತೊಲಗಿಸಿ : ವೈಜ್ಞಾನಿಕ ಮನೋಭಾವನೆ ಬೆಳೆಸುವಲ್ಲಿ ಶಿಕ್ಷಕರ ಪಾತ್ರ

"ಅಜ್ಜ ನೆಟ್ಟ ಆಲದ ಮರಕ್ಕೆ ಮೊಮ್ಮಗ ಜೋತು ಬಿದ್ದಂತೆ" ಎಂಬ ಅರ್ಥಪೂರ್ಣ ವ್ಯಾಖ್ಯೆಯು "ಮೂಢನಂಬಿಕೆ" ಎಂಬ ಪದದ ಅರ್ಥಕ್ಕೆ ಸಮರ್ಥನೀಯವಾದುದಾಗಿದೆ.

ಯಾವುದೇ ವಸ್ತು, ವ್ಯಕ್ತಿ, ಸ್ಥಳಗಳ ಬಗ್ಗೆ ಸಂಪೂರ್ಣವಾಗಿ ತಿಳಿದುಕೊಳ್ಳದೇ ಸಾರ್ವಜನಿಕ ಆಚಾರ ವಿಚಾರ, ಲೋಕರೂಢಿಗಳಿಗೆ ಶರಣು ಹೋಗಿರುವುದನ್ನು ಮೂಢನಂಬಿಕೆ ಎನ್ನಬಹುದು. ವಿವಿಧ ಧರ್ಮ, ಜಾತಿ, ಭಾಷೆ, ವೇಷಗಳಿಂದ ಕೂಡಿ ವೈವಿಧ್ಯಮಯವಾಗಿರುವ ಸಮಾಜದಲ್ಲಿ ಗೊಡ್ಡು ಮೂಢನಂಬಿಕೆಗಳು ಆಳವಾಗಿ ಬೇರೂರಿವೆ. ಪ್ರಾಥಮಿಕ ಮಟ್ಟದ ಶಾಲಾಮಕ್ಕಳಿಂದ ಬಿಳಿಮೀಸೆಯ ವೃದ್ಧರವರೆಗೂ ಮೂಢನಂಬಿಕೆಗಳು ವ್ಯಾಪಿಸಿವೆ.

ಜಾತೀಯತೆ, ಮತಾಂಧತೆ, ಅರ್ಥವಿಲ್ಲದ ಆಚರಣೆಗಳು, ಹಳತೆನಿಸುವ ಲೋಕರೂಢಿಗಳು ಮೂಢನಂಬಿಕೆಗೆ ಕಾರಣವಾಗಿವೆ. ಹಾಗೇ ಅನಕ್ಷರಸ್ಥ ತಂದೆ-ತಾಯಿಗಳು, ಆರ್ಥಿಕತೆ, ಮೌಲ್ಯರಹಿತ ಶಿಕ್ಷಣ ಇವುಗಳೂ ಕೂಡ.

ದಿನಾಂಕ ೨೧ ಸೆಪ್ಟೆಂಬರ್ ೧೯೯೫ರಂದು ಗಣೇಶನ ಹಬ್ಬ. ಅಂದು "ಗಣೇಶ ವಿಗ್ರಹಗಳು ಹಾಲು ಕುಡಿಯುತ್ತವೆ" ಎಂಬ ವಿಚಿತ್ರಸುದ್ದಿ ತೀವ್ರವಾಗಿ ದೇಶಾದ್ಯಂತ ಹಬ್ಬಿದ್ದು ಮೂಢನಂಬಿಕೆಗೆ ಒಂದು ಗಟ್ಟಿ ಉದಾಹರಣೆ.

ಮುಹೂರ್ತ ನೋಡಿ ವಿದ್ಯಾರ್ಜನೆ ಆರಂಭಿಸುವುದು, ಮೂರು ಜನ ಕೂಡಿ ಯಾವುದೇ ಕೆಲಸಕ್ಕೆ ಹೋಗದಿರುವುದು, 'ಕಾಗೆ ಕೂಗಿತಲ್ಲಾ' ಎಂದು ಅನುಮಾನ ತಾಳುವುದು, ಬೆಕ್ಕು ಅಡ್ಡ ಬಂದಿತೆಂದು ನಿಂತು ಮುಂದೆ ಹೋಗುವುದು, ಎದುರು ಬಂದವನು ಕಟ್ಟಿಗೆ ಹೊರೆ ಹೊತ್ತು ಬಂದ ಎಂದು ಬಯ್ಯುವುದು, ಒಂಟಿ ಸೀನು ಸೀನಬಾರದು ಎಂದು ಕೃತಕವಾಗಿ ಮತ್ತೊಮ್ಮೆ ಸೀನುವುದು ಇಂತಹ ಮೂಢನಂಬಿಕೆಗಳು ಸಾಕಷ್ಟಿವೆ. ತಾಂತ್ರಿಕರಂಗದಲ್ಲಿ ಮೇರುಘಟ್ಟವನ್ನೇರಿದ ಡಾ॥ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ವಿದ್ಯಾರ್ಜನೆ ಮಾಡುವಾಗ ಮುಹೂರ್ತ ತೆಗೆಸಿದ್ದರೆ ? ಮೂರು ಜನ ಕೂಡಿ ಕೆಲಸಕ್ಕೆ ಹೋದರೆ ಕೆಲಸದಲ್ಲಿ ವಿಳಂಬವೆ ? ಹಾಗಾದರೆ ಮೂರು ಜನ ಕೂಡಿ ಚಂದ್ರಲೋಕಕ್ಕೆ ಹೋಗಿ ಯಶಸ್ವಿಯಾಗಿ ಮರಳಿ ಬರಲಿಲ್ಲವೆ ? ಕಾಗೆ ಕೂಗುವುದು ಅಪರಾಧವಾದರೆ ಅದು ಕೂಗುವುದೇ ಬೇಡವೆ? ಬೆಕ್ಕು ಅಡ್ಡ ಬರಬಾರದೆಂದರೆ..... ಅದು ನಡೆದಾಡಲೇ ಬಾರದೆ ? ಕಟ್ಟಿಗೆ ಹೊರೆ ಹೊತ್ತುಕೊಂಡು ಎದುರಿಗೆ ಬರುವುದು ಅನಿಷ್ಟವಾದರೆ ಬಡವ ಬದುಕುವುದೇ ಬೇಡವೆ ? ಒಂಟಿ ಸೀನು ಸೀನಿದರೆ ಅಪಶಕುನವೆಂದು ಮತ್ತೊಮ್ಮೆ ಕೃತಕವಾಗಿ ಸೀನುವುದು, ಇಲ್ಲವೆ ಸೀನಿದವರ ಮೂಗನ್ನೆ ಕೀಳುವಷ್ಟು ಸಿಟ್ಟಿಗೇಳುವುದು ಹೀಗೆಯೇ ಮೂಢನಂಬಿಕೆಗಳನ್ನು ವಿವರಿಸಬಹುದು.

ಮಗು ಸಾಮಾಜೀಕರಣ ಹೊಂದುವಾಗ ಮೂಢನಂಬಿಕೆಗಳನ್ನು ಮೈಗೂಡಿಸಿಕೊಂಡೇ ಬೆಳೆಯುತ್ತದೆ. ಆದ್ದರಿಂದ ಶಾಲಾಕಾಲೇಜುಗಳಲ್ಲಿ ವಿದ್ಯಾರ್ಥಿಗಳಲ್ಲಿ ಬೆಳೆದ ಮೂಢನಂಬಿಕೆಗಳನ್ನು ತೊಲಗಿಸಲು ಶಿಕ್ಷಕರು ಮಕ್ಕಳಲ್ಲಿ ವೈಜ್ಞಾನಿಕ ಮನೋಭಾವನೆಯನ್ನು ಬೆಳೆಸಬೇಕು.

ಕಾರ್ಯಕಾರಣ ಸಂಬಂಧವನ್ನು ಹುಡುಕುವುದು, ಎಲ್ಲಿ? ಏಕೆ ? ಹೇಗೆ ? ಏನು ? ಇತ್ಯಾದಿ ಪ್ರಶ್ನಿಸುವ ಮನೋಭಾವವನ್ನು "ವೈಜ್ಞಾನಿಕ ಮನೋಭಾವ" ಎನ್ನಬಹುದು. ಪ್ರತಿನಿತ್ಯ ಕಾಣುವ, ಅನುಭವಿಸುವ ಹತ್ತು ಹಲವಾರು ಘಟನೆಗಳನ್ನು ಅರ್ಥ ಮಾಡಿಕೊಳ್ಳುವ ತವಕವಿರುವ, ಅಂಥವರು ಹೇಳಿದ್ದು ಇಂಥವರು ಹೇಳಿದ್ದು ಎಂದು ನಂಬದೆ ತಾನೇ ಪರೀಕ್ಷಿಸಿ, ದೃಢಪಡಿಸಿ ನಿರ್ಧರಿಸುವ ಮನೋಭಾವವೇ ವೈಜ್ಞಾನಿಕ ಮನೋಭಾವ. ಇದಕ್ಕೆ ಸಂಬಂಧಿಸಿದಂತೆ ಕ್ರಿ. ಪೂ.ದಲ್ಲಿಯೇ ಗೌತಮ ಬುದ್ಧನು ಹೀಗೆ ಹೇಳಿದ್ದಾನೆ:

"ಸಂಪ್ರದಾಯವಾಗಲಿ ಅಥವಾ ಯಾರೋ ಹೇಳಿದ್ದಾರೆಂದಾಗಲಿ ಅಥವಾ ನೀನೇ ಊಹಿಸಿಕೊಂಡಿದ್ದೀ ಎಂಬ ಮಾತ್ರದಿಂದಲೇ ಯಾವುದನ್ನೂ ನಂಬದಿರು, ಯಾವುದು ನಿನ್ನ ಪರೀಕ್ಷೆಯಿಂದ ಸಿದ್ಧವಾಗುವುದೋ ಅದನ್ನು ಮಾತ್ರ ನಂಬು."

ಮನುಷ್ಯ ತನ್ನ ಜೀವನವನ್ನು ಅರ್ಥಪೂರ್ಣಗೊಳಿಸಿ ಕೊಳ್ಳಲು ಹಿಂದಿನಿಂದ ಬೆಳೆಸಿಕೊಂಡು ಬಂದ, ಉಳಿಸಿಕೊಂಡು ಬಂದ ತಪ್ಪು ತಿಳಿವಳಿಕೆಗಳನ್ನು ಸರಿಯಾದ ರೀತಿಯಲ್ಲಿ ತುಲನೆ ಮಾಡಿ, ಅವುಗಳ ಸತ್ಯಾಸತ್ಯತೆಯನ್ನು ತಿಳಿಯಲು ಈ ವೈಜ್ಞಾನಿಕ ಮನೋಭಾವ ಅಗತ್ಯವಾಗುತ್ತದೆ.

ನಮ್ಮ ದೇಶದಲ್ಲಿ ಇತ್ತೀಚೆಗೆ ವೈಜ್ಞಾನಿಕ ಮನೋಭಾವದ ಬೆಳವಣಿಗೆಗೆ ಅಲ್ಲಲ್ಲಿ ಪ್ರಯತ್ನಗಳು ನಡೆಯುತ್ತಿವೆ. ಭಾರತದ ಸಂವಿಧಾನದಲ್ಲಿ "ಪೌರರ ಮೂಲಭೂತ ಕರ್ತವ್ಯಗಳು" ಎಂಬ ಅಧ್ಯಾಯದಲ್ಲಿ ಪ್ರಮುಖವಾಗಿ ಎಂಟು ಕರ್ತವ್ಯಗಳ ನಿರೂಪಣೆ ಇದೆ. ಇದರಲ್ಲಿ ಒಂದು : ವೈಜ್ಞಾನಿಕ ಮನೋಭಾವವನ್ನು, ವೈಚಾರಿಕತೆಯನ್ನು ಬೆಳೆಸಿಕೊಳ್ಳುವುದು, ಮಾನವೀಯತೆಯನ್ನು ಅಳವಡಿಸಿಕೊಳ್ಳುವುದು, ಪ್ರತಿಯೊಬ್ಬ ಪ್ರಜೆಯ ಆದ್ಯ ಕರ್ತವ್ಯವಾಗಿರಬೇಕು.

೧೯೮೬ರ ಹೊಸ ಶಿಕ್ಷಣ ನೀತಿಯಲ್ಲಿ ಬಹುಮುಖ್ಯ ಹತ್ತು ಬೀಜಾಂಶಗಳನ್ನು ಶಾಲಾಕಾಲೇಜುಗಳ ಎಲ್ಲ ಹಂತಗಳ ಪಠ್ಯ ಪುಸ್ತಕಗಳಲ್ಲಿ ಅಳವಡಿಸಬೇಕೆಂದೂ ತಿಳಿಸಲಾಗಿದೆ. ಅದರಲ್ಲಿ ವೈಜ್ಞಾನಿಕ ಮನೋಭಾವದ ಅಳವಡಿಕೆಯೂ ಒಂದು. ಇದರಿಂದ ಶಿಕ್ಷಣ ಕ್ಷೇತ್ರದಲ್ಲಿ ಇದರ ಮಹತ್ವವೇನೆಂಬುದು ಅರಿವಾಗುತ್ತದೆ. ಶಾಲಾ ಕಾಲೇಜುಮಟ್ಟದಲ್ಲಿ ಈ ತಿಳಿವಳಿಕೆ ಬಹುಮುಖ್ಯ. ಎಳೆಯ ಮಕ್ಕಳ ಮನಸ್ಸಿನಲ್ಲಿ ಸಲ್ಲದ ಮೂಢನಂಬಿಕೆಗಳನ್ನು ಬೆಳೆಸದೆ ಅವರಲ್ಲಿ ಸುತ್ತಮುತ್ತಲಿನ ವಾಸ್ತವದ ಬಗ್ಗೆ ಅರಿವು ಮೂಡಿಸಬೇಕು. ಇದಕ್ಕಾಗಿ ಉತ್ತಮ ಪಠ್ಯ, ವೈಜ್ಞಾನಿಕವಾದ ವಿಜ್ಞಾನ ಚಟುವಟಿಕೆಗಳು, ಕ್ರೀಡಾ ಮನೋಭಾವ ಹಾಗೂ ಅದಕ್ಕೆ ಬೇಕಾದ ಸಲಕರಣೆಗಳ ಪೂರೈಕೆ ಜೊತೆಗೆ ವೈಜ್ಞಾನಿಕ ಮನೋಭಾವ ಹೊಂದಿದ ಶಿಕ್ಷಕರು ಮುಂತಾದ ಅಂಶಗಳು ಈ ನಿಟ್ಟಿನಲ್ಲಿ ಸಹಾಯಕವಾಗುತ್ತವೆ. ಮಕ್ಕಳ ಮನಸ್ಸಿನಲ್ಲಿ ಏಳುವಷ್ಟು ಪ್ರಶ್ನೆಗಳು ಇನ್ನಾರ ಮನಸ್ಸಿನಲ್ಲೂ ಏಳುವುದಿಲ್ಲ. ಏಕೆಂದರೆ ಮಕ್ಕಳದು ಚಿಕಿತ್ಸಕ ನೋಟ, ತೀಕ್ಷ್ಣ ಬುದ್ಧಿ. ಶಿಕ್ಷಕರಾಗಲಿ ಪಾಲಕರಾಗಲಿ ಅವರ ಪ್ರಶ್ನೆಗಳಿಗೆ ಸಮಂಜಸವಾಗಿ ಉತ್ತರಿಸಿ, ಪ್ರೋತ್ಸಾಹಿಸಿ ಅವರ ಆಲೋಚನಾ ಲಹರಿಯನ್ನು ವೈಜ್ಞಾನಿಕಗೊಳಿಸಿದಾಗ ಮಾತ್ರ ಹೊಸ ತಲೆಮಾರು ಉತ್ತಮವಾಗಿರುತ್ತದೆ.

ಎಷ್ಟೇ ದೊಡ್ಡವರು ವಿದ್ವಾಂಸರು ಹೇಳಿದ್ದನ್ನೆಲ್ಲಾ ಸುಲಭವಾಗಿ ನಂಬಬೇಕಾಗಿಲ್ಲ. ಅವರ ಹೇಳಿಕೆಗಳನ್ನು ತಮ್ಮ ತಾರ್ಕಿಕ ಚಿಕಿತ್ಸಕ ಬುದ್ಧಿಯಿಂದ ಪರೀಕ್ಷಿಸಿ ಸರಿಯಾಗಿದ್ದರೆ ಮಾತ್ರ ಒಪ್ಪಿಕೊಳ್ಳಬೇಕು. ಇಲ್ಲದಿದ್ದರೆ ಪ್ರಶ್ನಿಸಬೇಕು. ಹಾಗೇ ಪುರಾತನ ಕಾಲದ ಧರ್ಮ ಗ್ರಂಥಗಳು ಏನೇ ಹೇಳಲಿ ಅವುಗಳನ್ನೆಲ್ಲಾ ಯಾಂತ್ರಿಕವಾಗಿ ಸರ್ವಕಾಲಕ್ಕೂ ಸತ್ಯ ಎಂದು ನಂಬಲಾಗದು.

ಮಕ್ಕಳ ಈ ತರದ ಕ್ರಿಯೆ ಪ್ರಕ್ರಿಯೆಗಳಿಗೆ ಸ್ಪಂದಿಸುವ ಸ್ಫೂರ್ತಿಗೆ ಸಮರ್ಥ ಶಿಕ್ಷಕ ಕಾರಣೀಭೂತನಾಗುತ್ತಾನೆ. ಔದ್ಯೋಗೀಕರಣದಿಂದ ಕಂಪ್ಯೂಟರೀಕರಣಕ್ಕೆ ಎಡವಿ ಮುಗ್ಗರಿಸುತ್ತಿರುವ ನಮ್ಮ ದೇಶದ ಭಾವೀ ಪ್ರಜೆಗಳಾದ ಮಕ್ಕಳ, ವಿದ್ಯಾರ್ಥಿಗಳ ಮೂಢನಂಬಿಕೆಗಳನ್ನು ತೊಲಗಿಸಿ, ವೈಜ್ಞಾನಿಕ ಮನೋಭಾವವನ್ನು ಬೆಳೆಸುವುದರಿಂದ ಅವರ ಒಳ ಹಾಗೂ ಹೊರವಿಚಾರಗಳನ್ನು ಅರ್ಥಪೂರ್ಣವಾಗಿಸುವಲ್ಲಿ ಉತ್ತಮ ಅಥವಾ ಸಮರ್ಥ ಶಿಕ್ಷಕನದು ಬಹುಮುಖ್ಯ ಪಾತ್ರ ಎಂಬುದನ್ನು ಅಲ್ಲಗಳೆಯುವ ಹಾಗಿಲ್ಲ.

ಪ್ರಗತಿಪರ ಚಿಂತನೆಗಳಿಂದ ಯುವಪೀಳಿಗೆಯಲ್ಲಿ ಕುತೂಹಲ, ಜ್ಞಾನದಾಹ ಹಾಗೂ ವೈಚಾರಿಕತೆಗಳನ್ನು ಬೆಳೆಸಬೇಕಾಗಿದೆ. ಆತ್ಮಶೋಧನೆ, ಜ್ಞಾನ ಸಂಪಾದನೆ, ಜ್ಞಾನಪ್ರಸಾರ, ಅಭಿವೃದ್ಧಿ ಶಿಕ್ಷಕರಲ್ಲಿ ನಿರಂತರವಾಗಿ ಸಾಗಬೇಕಾಗಿದೆ.




**ಸೋಮಶೇಖರ ವಿ. ಸೊಗಲದ**
ಮಡ್ಡಿ ಓಣಿ (ಖಾದಿ ಬಿಲ್ಡಿಂಗ್), ರಾಮದುರ್ಗ - ೫೯೧ ೧೨೩ ಬೆಳಗಾವಿ ಜಿಲ್ಲೆ

# ಭಾರತಕ್ಕೂ ಬಂತು ವಯಾಗ್ರ

ಲೈಂಗಿಕ ಸುಖ ಪರಮೋಚ್ಚವಾದದ್ದು ಎಂಬುದರಲ್ಲಿ ಸಂದೇಹವಿಲ್ಲ. ದಂಪತಿಗಳ ಪ್ರೇಮದ ಹಂದರ ನಿಂತಿರುವುದೇ ಅದರ ಮೇಲೆ! ಈ ಲೈಂಗಿಕ ಸುಖದಿಂದ ವಂಚಿತರಾದವರು ವೈದ್ಯಕೀಯ ಸಲಹೆಯನ್ನು ಪಡೆಯುವುದಕ್ಕೆ ಹಿಂಜರಿಯುತ್ತಾರೆ. ಕೊನೆಗೆ ಗತಿಕಾಣದೆ ವೈದ್ಯರನ್ನು ಸಂಪರ್ಕಿಸುವ ಹೊತ್ತಿಗೆ ರೋಗ ಉಲ್ಬಣಿಸಿರುತ್ತದೆ. ವೈದ್ಯರ ಮೊರೆ ಹೋಗುವ ಮೊದಲು ರಾತ್ರಿ ಪತ್ನಿಯ ಜೊತೆ ಮಲಗಲು ತಪ್ಪಿಸುವುದು, ಮದ್ಯ ಕುಡಿಯುವುದನ್ನು ಹೆಚ್ಚಿಸುವುದು ಅಥವಾ ಬೇಕೆಂತಲೆ ರಾತ್ರಿ ಕಾಲುಕೆದರಿ ಹೆಂಡತಿಯ ಜೊತೆ ಜಗಳವಾಡಿ, ಅವಳ ಜೊತೆ ಮಲಗುವುದನ್ನು ಬಿಟ್ಟುಬಿಡುವುದು, ಈ ತರಹದ ಪ್ರಕ್ರಿಯೆಗಳನ್ನು ಮಾಡಬಹುದು. ಒಟ್ಟಿನಲ್ಲಿ ಇದರಿಂದಾಗಿ ಸಂಗಾತಿಗಳ ಬಾಳಿನಲ್ಲಿ ಬಿರುಕು ಬೀಳುವುದಂತು ಖಚಿತ. ಕುಟುಂಬದ ನೆಮ್ಮದಿಯೂ ಇದಕ್ಕೆ ಬಲಿಪಶುವಾಗುತ್ತದೆ.

**ಲೈಂಗಿಕ ಕಾರ್ಯವನ್ನು ನಾಲ್ಕು ಹಂತಗಳಾಗಿ ವಿಂಗಡಿಸುತ್ತಾರೆ**

೧. ಲೈಂಗಿಕ ಆಸೆ / ಬಯಕೆ

೨. ಜನನಾಂಗಗಳ ಉದ್ರೇಕ

೩. ಸಂಭೋಗ

೪. ಸಂಭೋಗಾನಂತರ ಸ್ಥಿತಿ.

ಈ ಒಂದೊಂದು ಹಂತವೂ ಪರಸ್ಪರ ಪೂರಕವಾಗಿವೆ. ಈ ನಾಲ್ಕು ಹಂತಗಳೂ ಸಮರ್ಪಕವಾಗಿರಬೇಕು; ಆಗ ಲೈಂಗಿಕ ಸುಖ ಪ್ರಾಪ್ತಿಯಾಗುತ್ತದೆ.

**ಭಾರತದಲ್ಲಿ ಲೈಂಗಿಕ ಚಟುವಟಿಕೆಗಳು**

ಭಾರತಕ್ಕೆ ತನ್ನದೇ ಆದ ಸಾಂಸ್ಕೃತಿಕ, ಧಾರ್ಮಿಕ ಪರಂಪರೆ ಇದ್ದರೂ ಪುರುಷ ಪ್ರಧಾನ ಸಮಾಜದಲ್ಲಿ ಲೈಂಗಿಕತೆಯ ಬಗ್ಗೆ ಮಾತನಾಡುವುದೇ ಒಂದು ಪಾಪವೆನಿಸುವ ಕಾಲ ಈಗಲೂ ಇದೆ. ಶಿಶ್ನದ ನಿಮಿರುವಿಕೆ ಆಗದಿದ್ದರೆ ಲೈಂಗಿಕ ಸುಖವನ್ನು ಪಡೆಯುವುದು ಕಷ್ಟ. ಶಿಶ್ನದ ನಿಮಿರುವಿಕೆ ಸರಿಯಾಗಿ ಆಗದಿರುವುದಕ್ಕೆ ಅನೇಕ ದೈಹಿಕ ಮತ್ತು ಮಾನಸಿಕ ಕಾರಣಗಳಿವೆ. ವಯಸ್ಸಾದಂತೆ ಲೈಂಗಿಕತೆ ಕಡಿಮೆಯಾಗುವುದೇ, ಎಂಬ ಪ್ರಶ್ನೆಗೆ ಭಾರತೀಯ ಜನಪ್ರಿಯ ನಾಣ್ಣುಡಿ ''ಹುಣಸೆ ಮುಪ್ಪಾದರೆ ಹುಳಿ ಮುಪ್ಪೇ ?'' ಉತ್ತರ ಕೊಟ್ಟಾಗಿದೆ.

ಭಾರತದಲ್ಲಿ ಬ್ರಹ್ಮಚರ್ಯ, ವೀರ್ಯದ ಬಗ್ಗೆ ವಿಚಿತ್ರ ಕಲ್ಪನೆಗಳು, ಧಾರ್ಮಿಕ ಕಠೋರ ಆಚರಣೆಗಳು, ನಿಬಂಧನೆ ಇತ್ಯಾದಿಗಳು ಲೈಂಗಿಕ ಕ್ರಿಯೆಯ ಹಾದಿಗೆ ಅಡ್ಡಿ ಬರುತ್ತವೆ. ಬಾಲ್ಯವಿವಾಹವೂ ಈ ನಿಟ್ಟಿನಲ್ಲಿ ಗಮನೀಯ ಪಾತ್ರ ವಹಿಸುತ್ತದೆ.

**ಲೈಂಗಿಕ ಕ್ರಿಯೆಯ ಹಂತಗಳು**

ಮೊದಲೇ ತಿಳಿಸಿದಂತೆ ಲೈಂಗಿಕ ಕ್ರಿಯೆಯ ಮೊದಲ ಹಂತವಾದ ಆಸೆ = ಬಯಕೆಯು ಮೆದುಳಿನ ಹೈಪೋಥಾಲಮಸ್ ಕೇಂದ್ರದಿಂದ ನಿಯಂತ್ರಿಸಲ್ಪಡುತ್ತದೆ. ಈ ಹಂತ ಮಾನಸಿಕ, ಸಾಮಾಜಿಕ, ದೈಹಿಕ ಮತ್ತು ಟೆಸ್ಟೋಸ್ಟಿರಾನ್‌ದಂತಹ ರಸದೂತದ ಮೇಲೆ ಅವಲಂಬಿತವಾಗಿದೆ.

ಎರಡನೆಯ ಹಂತವಾದ ಉದ್ರೇಕದಲ್ಲಿ ಶಿಶ್ನದ ಉದ್ರೇಕವೇ ಬೇಕಾದದ್ದು. ಉದ್ರೇಕರಹಿತ ಶಿಶ್ನಕ್ಕೆ ಯೋನಿಯಲ್ಲಿ ಪ್ರವೇಶ ಅಸಾಧ್ಯ. ಈ ಹಂತಕ್ಕೂ ಮೆದುಳಿನ ಕೇಂದ್ರ, ಮೆದುಳು, ಶಿಶ್ನ ನರವ್ಯೂಹ, ಶಿಶ್ನದ ರಕ್ತಪೂರೈಕೆ ಮುಂತಾದವುಗಳು ಸರಿಯಾಗಿ ನಿರ್ವಹಿಸಲ್ಪಡಬೇಕು.

ಶಿಶ್ನದ ಉದ್ರೇಕ ಅಥವಾ ನಿಮಿರುವಿಕೆ ಲೈಂಗಿಕ ಚಟುವಟಿಕೆಯಿಂದಾಗುವ ರಾಸಾಯನಿಕ, ನರಜನ್ಯ ಮತ್ತು ಸ್ಪರ್ಶಜ್ಞಾನ ಕ್ರಿಯೆಗಳ ಮೇಲೆ ಅವಲಂಬಿತವಾಗಿರುತ್ತದೆ. ಶಿಶ್ನದಲ್ಲಿಯ ಅಪಧಮನಿಗಳು ಹಿಗ್ಗಿ, ರಕ್ತವು ಶಿಶ್ನದಲ್ಲಿಯ ಕೊಳವೆಯಾಕಾರದ ಚೀಲಗಳಲ್ಲಿ ಮಡುಗಟ್ಟುತ್ತದೆ. ಶಿಶ್ನದಲ್ಲಿ ರಕ್ತಶೇಖರಣೆಯಾದಾಗ, ಅಭಿಧಮನಿಗಳು, ಈ ತುಂಬಿದ ಅಪಧಮನಿಗಳ ಮತ್ತು ಶಿಶ್ನದ ಬಿರುಸಾದ ಹೊರಪದರಿನ ನಡುವೆ ಸಿಕ್ಕಿ ಆಕುಂಚಿತಗೊಳ್ಳುತ್ತವೆ. ಈ ಅಭಿಧಮನಿಗಳ ಆಕುಂಚನದಿಂದ, ರಕ್ತಕ್ಕೆ ಹೊರ ಹೋಗಲು ಸಾಧ್ಯವಾಗುವುದಿಲ್ಲ. ಶಿಶ್ನದಲ್ಲಿಯ ರಕ್ತದ ಒತ್ತಡ, ಅದು ನಿಮಿರಿದಾಗ ಏರಿರುತ್ತದೆ. ಆದ್ದರಿಂದ ಶಿಶ್ನ ನಿಮಿರುವಿಕೆಗೆ ಸಮರ್ಪಕ ರಕ್ತ ಪೂರೈಕೆ, ನರಗಳ ಸುವ್ಯವಸ್ಥೆ, ರಸ ಗ್ರಂಥಿಗಳ ಸ್ರವಿಕೆ ಎಲ್ಲವೂ ಅವಶ್ಯಕವಾಗಿದೆ.

ಮೂರನೆಯ ಹಂತವಾದ ಸಂಭೋಗಕ್ರಿಯೆಯಲ್ಲಿ 'ಗಂಡಿಗೆ 'ಸಂತೃಪ್ತಿ' ವೀರ್ಯ ಸ್ಖಲನವಾಗುತ್ತಿರುವಾಗ ಆಗುತ್ತದೆ.

ನಾಲ್ಕನೆಯ ಹಂತವಾದ ಸಂಭೋಗಾನಂತರ ಸ್ಥಿತಿಯ ಬಗ್ಗೆ ಹೆಚ್ಚಿನ ವಿವರಗಳು ಲಭ್ಯವಿಲ್ಲ. ಈ ಹಂತದಲ್ಲಿ ಪುರುಷ ಆಯಾಸಗೊಂಡು ವಿರಮಿಸುತ್ತಾನೆ. ಆದರೆ ಸ್ತ್ರೀ ಇನ್ನಷ್ಟು ಪ್ರಚೋದನೆ ಲೈಂಗಿಕ ಚಟುವಟಿಕೆಗಳಿಗಾಗಿ ಹಾತೊರೆಯುತ್ತಾಳೆ. ಆಕೆಯ ಈ ಅಗತ್ಯವನ್ನು ಪೂರೈಸಬೇಕು. ವೀರ್ಯಸ್ಖಲನವಾದ ಮೇಲೆ ಪುರುಷ ಪಕ್ಕಕ್ಕೆ ತಿರುಗಿ ಮಲಗದೆ, ಮಾತು, ಸ್ಪರ್ಶಗಳಿಂದ ಆಕೆಗೆ ತೃಪ್ತಿ ನೀಡಬೇಕು.




*ಚಿತ್ರ ೧ : ಶಿಶ್ನದ ಚಿತ್ರ. ಶಿಶ್ನದ ಅಪಧಮನಿಗಳು, ಅಭಿಧಮನಿಗಳು, ಕೊಳವೆಯಾಕಾರದ ಚೀಲಗಳು.*




*೨ : ಶಿಶ್ನ ಸಹಜಾವಸ್ಥೆಯಲ್ಲಿ : ವಕ್ರ ಅಪಧಮನಿಗಳ ಆಕುಂಚನ, ಕೊಳವೆಯಾಕಾರದ ಚೀಲಗಳ ಆಕುಂಚನದಿಂದ ಶಿಶ್ನದಲ್ಲಿ ರಕ್ತದ ಪ್ರಮಾಣ ಕುಸಿದಿರುತ್ತದೆ.*

ಶಿಶ್ನ ನಿಮಿರದಿರಲು ಕಾರಣಗಳು :

ಈ ಕಾರಣಗಳನ್ನು ಮಾನಸಿಕ ಮತ್ತು ದೈಹಿಕ ಎಂದು ವಿಂಗಡಿಸಬಹುದು. ಅಥವಾ ಎರಡು ಕಾರಣಗಳೂ ಜೊತೆಜೊತೆಯಾಗಿಯೂ ಇರಬಹುದು.

**ಮಾನಸಿಕ ಕಾರಣಗಳು**

೧. *ಮಾನಸಿಕ ಖಿನ್ನತೆ* : ತನ್ನಿಂದ ಲೈಂಗಿಕ ಚಟುವಟಿಕೆಯೇ ಸಾಧ್ಯವಿಲ್ಲ; ತನ್ನಿಂದ ಆ ಕಾರ್ಯ ಆಗುವುದಿಲ್ಲ ಎಂದು ಮೊದಲೇ ನಿರ್ಧರಿಸುವುದು. ಇದಕ್ಕೆ ಆತನ ವೈಯಕ್ತಿಕ, ಸಾಮಾಜಿಕ ಸಮಸ್ಯೆಗಳು ಕಾರಣವಾಗಿರಬಹುದು. ಕೆಲಸದ ಒತ್ತಡ, ದೈನಂದಿನ ಜೀವನದಲ್ಲಿನ ನೂಕುನುಗ್ಗಲಿನ ವಾತಾವರಣ, ಈಡೇರದ ಆಕಾಂಕ್ಷೆಗಳು,

**ಡಾ॥ ದಯಾನಂದ ಈ. ನೂಲಿ**

ಕಷ್ಟನಷ್ಟ, ಸೋಲು, ನಿರಾಸೆಗಳು ಕೂಡ ಖಿನ್ನತೆಗೆ ಕಾರಣವಾಗುತ್ತವೆ.

೨. *ದಂಪತಿಗಳ ಸಂಬಂಧ :* ಹಳಸಿದ ಸಂಬಂಧ : ಅನ್ಯೋನ್ಯತೆ ಇಲ್ಲದಿರುವಿಕೆ; ಪರಸ್ಪರ ತಿಳುವಳಿಕೆಗಳ ಕೊರತೆ - ಇವುಗಳು ದಂಪತಿಗಳ ಲೈಂಗಿಕ ಸಂಬಂಧಕ್ಕೆ ಧಕ್ಕೆ ತರುತ್ತವೆ. 'ಗಂಡ ಹೆಂಡತಿಯರ ಜಗಳ ಉಂಡು ಮಲಗುವ ತನಕ' ಎಂಬಂತಾಗದೆ ಮಲಗಿದ ನಂತರವೂ ದುರಭಿಮಾನದಿಂದ ಮುಂದುವರಿಯಬಹುದು. ಆಗ ಲೈಂಗಿಕ ಚಟುವಟಿಕೆಗೆ ಕಷ್ಟವಾಗುತ್ತದೆ.

೩. *ಲೈಂಗಿಕಕ್ರಿಯೆ ಬಗ್ಗೆ ತಾತ್ಸಾರ :* ಲೈಂಗಿಕ ಕ್ರಿಯೆಯ ಬಗ್ಗೆ ಎಷ್ಟೋ ಜನ ಆಸಕ್ತಿ ತೋರುವುದಿಲ್ಲ. ದಿನೇ ದಿನೇ ಕುಗ್ಗುತ್ತ ಹೋಗುವ ಆಸಕ್ತಿಗೆ ಧಾರ್ಮಿಕ, ಆಧ್ಯಾತ್ಮಿಕ ವಿಚಾರಗಳ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳುವ ಪ್ರವೃತ್ತಿ ಇದಕ್ಕೆ ಕಾರಣವಾಗಿರಬಹುದು.

೪. *ಲೈಂಗಿಕಕ್ರಿಯೆ, ವಿಧಾನಗಳ ಬಗ್ಗೆ ಕಲಹ :* ಚುಂಬನ, ಆಲಿಂಗನ, ಜನನಾಂಗಸ್ಪರ್ಶ ಇತ್ಯಾದಿ ಚಟುವಟಿಕೆಗಳ ಬಗ್ಗೆ ದಂಪತಿಗಳಲ್ಲಿ ನಿರಾಸಕ್ತಿ, ಅಸಹ್ಯ ಮನೋಭಾವ ಇರಬಹುದು.

೫. *ಬಾಲ್ಯದಲ್ಲಿ ಲೈಂಗಿಕ ಅನಾಚಾರಕ್ಕೆ ಒಳಗಾದವರು :* ಬಾಲ್ಯದಲ್ಲಿಯೇ ದೊಡ್ಡವರಿಂದ ಲೈಂಗಿಕ ಅನಾಚಾರಕ್ಕೆ ಒಳಗಾದ ವ್ಯಕ್ತಿಗಳು ಯೌವನಾವಸ್ಥೆಯಲ್ಲಿ ಅದರ ಬಗ್ಗೆ ಜುಗುಪ್ಸೆ ತೋರಬಹುದು.

೬. *ಮುಷ್ಟಿ ಮೈಥುನದ ಬಗ್ಗೆ ತಪ್ಪು ಕಲ್ಪನೆಗಳು :* ಯುವಕರಲ್ಲಿ ಮುಷ್ಟಿ ಮೈಥುನದ ಬಗ್ಗೆ ಅನೇಕ ತಪ್ಪುಕಲ್ಪನೆಗಳು ಮನೆ ಮಾಡಿರುತ್ತವೆ. ಅತಿಯಾಗಿ ಈ ಚಟುವಟಿಕೆಯನ್ನು ಮಾಡಿದವರು ಮದುವೆಯ ನಂತರ ತಪ್ಪು ತಿಳುವಳಿಕೆಗಳಿಂದಾಗಿ ಭಯಪೀಡಿತರಾಗುತ್ತಾರೆ. ಆಗ ಸಹಜವಾಗಿ ಶಿಶ್ನ ನಿಮಿರದಿರಬಹುದು.

೭. *ಗರ್ಭಧಾರಣೆಯ ಅಂಜಿಕೆ :* ತನ್ನ ಹೆಂಡತಿ ಮತ್ತೆ ಗರ್ಭಿಣಿಯಾಗಬಹುದೆಂಬ ಅಂಜಿಕೆಯೇ ಶಿಶ್ನ ನಿಮಿರದಂತೆ ಮಾಡಬಹುದು. ಸುರಕ್ಷಿತ ವಿಧಾನಗಳನ್ನು ಕೈಬಿಟ್ಟು ಗರ್ಭ ತಡೆಯಲಾರದಂತೆ ಮಾಡದಿದ್ದಲ್ಲಿ, ಈ ಅಂಜಿಕೆ ಇನ್ನೂ ಹೆಚ್ಚಾಗಿರುತ್ತದೆ.

೮. *ಸಾಂಸರ್ಗಿಕ ರೋಗಗಳ ಭೀತಿ :* ತನಗೆ ಅಂಟುರೋಗಗಳಿರಬಹುದು ಎಂಬ ಸಂದೇಹ, ಹಿಂದಿನ ದುಶ್ಚಟಗಳ ನೆನಪು, ಇವುಗಳು ಕೂಡ ಮಾನಸಿಕ ಲೈಂಗಿಕ ನಿರಾಸಕ್ತಿಗೆ ಕಾರಣವಾಗಬಹುದು.




*೩. ಶಿಶ್ನ ನಿಮಿರಿದಾಗ : ವಕ್ರ ಅಪಧಮನಿಗಳ ವಿಕಸನ, ಕೊಳವೆಯಾಕಾರದ ಚೀಲಗಳ ವಿಕಸನದಿಂದ ಶಿಶ್ನದಲ್ಲಿ ರಕ್ತದ ಪ್ರಮಾಣ, ಒತ್ತಡ ಏರುತ್ತದೆ.*

*ದೈಹಿಕ ಕಾರಣಗಳನ್ನು ಮತ್ತೆ ನಾಲ್ಕು ಗುಂಪುಗಳಾಗಿ ವಿಂಗಡಿಸಬಹುದು.*

೧. ರಕ್ತನಾಳಗಳ ರೋಗಗಳು : ಈ ರೋಗಗಳಿಗೆ ಹಲವಾರು ಕಾರಣಗಳು :
- ಅ) ಧೂಮಪಾನ.
- ಆ) ಮಧುಮೇಹ.
- ಇ) ಕೊಬ್ಬಿನ ರೋಗಗಳು.
- ಈ) ಹೃದ್ರೋಗಗಳು.
- ಉ) ಹೆಚ್ಚಿದ ರಕ್ತದೊತ್ತಡ.

೨. ನರಗಳ ರೋಗ : ಕಾರಣಗಳು
- ಅ) ಮಧುಮೇಹ.
- ಆ) ಮದ್ಯಪಾನ.
- ಇ) ಬೆನ್ನು ಹುರಿಯ ಗಾಯಗಳು / ಅಪಘಾತಗಳು.
- ಈ) ಇತರ ನರರೋಗಗಳು :
  ಉದಾ : ಅರ್ಧಾಂಗವಾಯು.

೩. ನಿರ್ನಾಳಗ್ರಂಥಿಗಳ ರೋಗಗಳು
- ಅ) ಜನನೇಂದ್ರಿಯಗಳ ಕುಂಠಿತ ಬೆಳವಣಿಗೆ.
- ಆ) ಮೆದುಳಿನಲ್ಲಿ ಬೆಳೆಯುವ ಗಡ್ಡೆಗಳು.
- ಇ) ಥೈರಾಯ್ಡ್ ಗ್ರಂಥಿಯ ರೋಗಗಳು.

೪. ಮೂತ್ರಜನಕಾಂಗದ ರೋಗಗಳು
- ಅ) ಮೂತ್ರಜನಕಾಂಗದ ಕಾರ್ಯ ಕುಂಠಿತವಾಗಿರುವುದು.
- ಆ) ಡೈಯಾಲಿಸಿಸ್ ಮಾಡಿಸಿಕೊಳ್ಳುವವರು.

ಇ) ಧೂಮಪಾನ ಶಿಶ್ನದಲ್ಲಿಯ ಅಭಿಧಮನಿಗಳನ್ನು ಸಂಕುಚಿಸಿ, ರಕ್ತವನ್ನು ಹೊರತಳ್ಳಿ, ಶಿಶ್ನವನ್ನು ಸಡಿಲಿಸುತ್ತದೆ. ಶಿಶ್ನದ ಸ್ನಾಯುಗಳನ್ನು ಕುಗ್ಗಿಸಿ ಶಿಶ್ನ ನಿಮಿರದಂತೆ ಮಾಡುತ್ತದೆ.

ಅತಿಯಾದ ಮದ್ಯಪಾನ ಜನನೇಂದ್ರಿಯಗಳ ಕುಂಠಿತ ಬೆಳವಣಿಗೆಗೆ ಕಾರಣವಾಗುವುದಲ್ಲದೆ, ಶಿಶ್ನದ ನರಗಳನ್ನು ಬಾಧಿಸುತ್ತದೆ.

೫೦% ಮಧುಮೇಹಿಗಳಲ್ಲಿ ಶಿಶ್ನ ನಿಮಿರುವಿಕೆಯ ಸಮಸ್ಯೆಯಿರುತ್ತದೆ. ಇವರಲ್ಲಿ ರಕ್ತನಾಳಗಳ ಸಂಕುಚಿತ, ನರದೌರ್ಬಲ್ಯ, ನೈಟ್ರಿಕ್ ಆಕ್ಸೈಡ್ ಉತ್ಪಾದನೆಯಲ್ಲಿನ ಕೊರತೆಗಳೇ ಕಾರಣಗಳಾಗಿವೆ.

ಮೂತ್ರಜನಕಾಂಗದ ಕಾರ್ಯದಲ್ಲಿ ತೊಂದರೆ ಇರುವವರಲ್ಲಿ ಶಿಶ್ನ ನಿಮಿರುವಿಕೆಯಾಗದಿರುವುದು, ಲೈಂಗಿಕ ನಿರಾಸಕ್ತಿ ಕಂಡುಬರುತ್ತದೆ. ಇವರಲ್ಲಿ ಅತಿಯಾದ ಔಷಧಸೇವನೆ, ಶಿಶ್ನ ನರಗಳ ದೌರ್ಬಲ್ಯ, ಅಸಮರ್ಪಕ ರಕ್ತ ಪೂರೈಕೆ ಮತ್ತು ಮಾನಸಿಕ ಅಸ್ವಸ್ಥತೆ ಕಾರಣೀಭೂತವಾಗಿವೆ.

ಹೃದ್ರೋಗಿಗಳಲ್ಲಿ ಮಾನಸಿಕ ಖಿನ್ನತೆ, ಶಿಶ್ನದ ಅಪಧಮನಿಗಳ ರಕ್ತ ಪೂರೈಕೆಯಲ್ಲಿ ಕೊರತೆ ಶಿಶ್ನ ಉದ್ರೇಕಕ್ಕೆ ಸ್ಪಂದಿಸುವುದಿಲ್ಲ.

ಅನೇಕ ಔಷಧಿಗಳು ಸಹ ಶಿಶ್ನ ನಿಮಿರುವಿಕೆಗೆ ಅಡ್ಡಿಯಾಗಿವೆ :

೧. ಅಧಿಕ ರಕ್ತದೊತ್ತಡಕ್ಕೆ ಉಪಯೋಗಿಸುವ ಔಷಧಿಗಳು.
೨. ಆಂಟಿಬಯೋಟಿಕ್ಸ್ : ಮೇಲಿಂದ ಮೇಲೆ ದಿನನಿತ್ಯದ ರೋಗಗಳಿಗೆ ಉಪಯೋಗಿಸುವ ಈ ಔಷಧಿಗಳು. ಉದಾ : ಎರಿಥ್ರೋಮೈಸಿನ್.
೩. ಹೃದ್ರೋಗಿಗಳಲ್ಲಿ : ಡಿಗಾಕ್ಸಿನ್, ನೈಟ್ರೈಟ್ಸ್ ಔಷಧಿಗಳು.
೪. ಜಠರದ ಹುಣ್ಣುಗಳಿಗೆ : ಉದಾ : ಸಿಮೆಟಿಡಿನ್.
೫. ಮಾನಸಿಕ ರೋಗಗಳಲ್ಲಿ ಉಪಯೋಗಿಸುವ ಕೆಲವು ಔಷಧಿಗಳು.

**ಶಿಶ್ನ ನಿಮಿರುವಿಕೆಗೆ ನೆರವಾಗುವ ಔಷಧ-ವಯಾಗ್ರ**

ಈ ಮಾತ್ರೆಯ ಘಟಕ 'ಸಿಲ್‌ಡೆನಾಫಿಲ್ ಸಿಟ್ರೇಟ್' ಆಗಿದ್ದು, ಈ ಮಾತ್ರೆ ಲೈಂಗಿಕ ಚಟುವಟಿಕೆ ಮಾಡುವವರಲ್ಲಿ ಮಾತ್ರ ಉಪಯುಕ್ತವಾಗಿದೆ. ಇನ್ನೊಂದರ್ಥದಲ್ಲಿ ಹೇಳಬೇಕೆಂದರೆ, ಈ ಮಾತ್ರೆ ತೆಗೆದುಕೊಂಡು ಮುಸುಗುಹಾಕಿಕೊಂಡು ಮಲಗಿಕೊಂಡರೆ ಶಿಶ್ನ ನಿಮಿರುವುದಿಲ್ಲ. ಲೈಂಗಿಕ ಆಸಕ್ತಿ, ಸರಸಸಲ್ಲಾಪ, ಸ್ಪರ್ಶ ಚಟುವಟಿಕೆಗಳು ಖಂಡಿತವಾಗಿ ಬೇಕೇ ಬೇಕು.

ದೇಹದಲ್ಲಿ ಶಿಶ್ನ ನಿಮಿರುವಿಕೆಗೆ, ಶಿಶ್ನದ ಸ್ನಾಯುಗಳಿಂದ ನೈಟ್ರಿಕ್ ಆಕ್ಸೈಡ್ ಬಿಡುಗಡೆಯಾಗುತ್ತದೆ. ಈ ನೈಟ್ರಿಕ್ ಆಕ್ಸೈಡ್ 'ಗ್ವಾನಿಲೇಟ್ ಸೈಕ್ಲೇಸ್' ಎಂಬ ಕಿಣ್ವವನ್ನು ಉತ್ತೇಜಿಸುತ್ತದೆ. ಈ ಕಿಣ್ವ *ಸೈಕ್ಲಿಕ್ ಗ್ವಾನೋಸಿನ ಮೋನೋಫಾಸ್ಪೇಟ್* (camp) *ಎಂಬ ಬೇರೊಂದು ಕಿಣ್ವವನ್ನು, ಗ್ವಾನೋಸಿನ ಟ್ರೈಫಾಸ್ಪೇಟ್ ಎಂಬ ಕಿಣ್ವದಿಂದ ಹೆಚ್ಚಾಗಿ ಉತ್ಪಾದಿಸುತ್ತದೆ. ಈ ಸಿ.ಜಿ.ಎಂ.ಪಿ.ಯು* ಶಿಶ್ನದ ಸ್ನಾಯುಗಳ ವಿಕಸನಮಾಡಿ, ರಕ್ತ ಅಧಿಕವಾಗಿ ಶಿಶ್ನದಲ್ಲಿ ಹರಿಯುವಂತೆ ಮಾಡುತ್ತದೆ.

ಈ ಸಿ.ಜಿ.ಎಂ.ಪಿ. ಶಿಶ್ನದ ಸ್ನಾಯುಗಳಲ್ಲಿ ಕುಂದಲು ಫಾಸ್ಪೋಡೈಸ್ಟರೇಜ್ ಎಂಬ ಕಿಣ್ವವು ಕಾರಣವಾಗಿದೆ. ವಯಾಗ್ರ ಮಾತ್ರೆ, ನೈಟ್ರಿಕ್ ಆಕ್ಸೈಡ್‌ನ ಕಾರ್ಯವನ್ನು ಹಿಗ್ಗಿಸಿ, ಈ ಪಿಡಿಇ-೫ರ ಕಾರ್ಯವನ್ನು ಕುಗ್ಗಿಸಿದಾಗ, ಸಿ.ಜಿ.ಎಂ.ಪಿ. ಯ ಸಾಂದ್ರತೆ ಹೆಚ್ಚಾಗಿ, ಶಿಶ್ನ ಬಹಳಸಮಯದವರೆಗೆ ಸಶಕ್ತವಾಗಿ ನಿಮಿರಿರುತ್ತದೆ.

**ಭಾರತದಲ್ಲಿ ವಯಾಗ್ರದ ಮಾತ್ರೆಗಳು**

| ಹೆಸರು | ಉತ್ಪಾದಕರ ಹೆಸರು |
|---|---|
| ೧. ಪೆನೆಗ್ರಾ | ಝೈಡಸ್ - ಅಲಿಡ್ಯಾಕ್ |
| ೨. ಕೆವರ್ಗ್ರಾ | ರ್‍ಯಾನ್‌ಬ್ಯಾಕ್ಸಿ |
| ೩. ಎಡಿಗ್ರಾ | ಸನ್ |
| ೪. ಎಂಡ್ರೋಸ್ | ಯುನಿಕೆಮ್ |
| ೫. ಎರಿಕ್ಸ | ಕ್ಯಾಡಿಲಾ ಫಾರ್ಮಾ |
| ೬. ಜೋವಾನ | ಕ್ಯಾಡಿಲಾ ಫಾರ್ಮಾ |
| ೭. ಸಿಲಿಗ್ರಾ | ಸಿಪ್ಲಾ |
| ೮. ವಿರನಾ | ಮೈಕೋ |

**ಮಾತ್ರೆಯ ಸೇವನೆ**

*ಪ್ರಮಾಣ*

ಅ) ಲೈಂಗಿಕ ಚಟುವಟಿಕೆಯ ಒಂದು ತಾಸು ಮೊದಲು ೫೦ ಮಿ.ಗ್ರಾಂ. ಮಾತ್ರೆ ನುಂಗಬೇಕು.

ಆ) ೧ ರಿಂದ ೮ ತಾಸುಗಳು ಮೊದಲು ತೆಗೆದುಕೊಳ್ಳಬಹುದು.

ಇ) ೧೦೦ ಮಿ.ಗ್ರಾಂ. ನಿಂದ ೨೫ ರವರೆಗೆ - ಪರಿಣಾಮದ ಅನುಗುಣವಾಗಿ ಸೇವಿಸಬಹುದು.

ರಕ್ತದಲ್ಲಿ ಈ ಮಾತ್ರೆಯ ಪ್ರಮಾಣ ಅಧಿಕಗೊಳ್ಳಬಹುದಾದ ಸಂಗತಿಗಳು :

ಅ) ೬೫ ವರ್ಷ ಮೇಲ್ಪಟ್ಟವರಲ್ಲಿ.

ಆ) ಯಕೃತ್ತಿನ ರೋಗಿಗಳಲ್ಲಿ.

ಇ) ಮೂತ್ರಜನಕಾಂಗದ ರೋಗಿಗಳಲ್ಲಿ.

ಈ) ಇತರ ಔಷಧಿ ಸೇವಿಸುವವರಲ್ಲಿ.

ಮಾತ್ರೆಯ ದರ - ೫೦ ಮಿ. ಗ್ರಾಂ. ಕ್ಕೆ - ರೂ. ೧೭ ರಿಂದ ೧೮ ಮಾತ್ರ - ಲಭ್ಯವಿರುವ ಪ್ರಮಾಣಗಳು : ೨೫-೫೦ ಮತ್ತು ೧೦೦ ಮಿ.ಗ್ರಾಂ.

**ಅವ್ವ**

ನನ್ನವ್ವ,
ಮಾರಾಟಕ್ಕಿಟ್ಟ ಮಲ್ಲಿಗೆ;
ಮೂಸುವವರ ಮೂಗಿನ ದಾಸಿ

ಅಹೋರಾತ್ರಿ:
ಕೆಂಪುದೀಪದ ಕೆಳಗೆ
ಆಕೆ ಹೊತ್ತಿಸಿದ ಸಿಗರೇಟು

ದಿನ ಬೆಳಗಾದರೆ -
ಮತ್ತದೇ ರಾತ್ರಿಗಳ ನಿರೀಕ್ಷೆ !

ಮುಂಬಯಿ ಮಹಲುಗಳ ಕೆಳಗೆ –
ನಿತ್ಯದ ಕಸರತ್ತು : ದುರ್ಗಿಮುರ್ಗಿಯರ
ಹಾಗೆ ಕಹಿ ಬೇವು ಕಚ್ಚುತ್ತ, ಮೈಗೆ
ಚುಚ್ಚಿಕೊಳುವಳು ಸೂಜಿ ಡಬ್ಬಣ.

ಕರಗಿದ ಯೌವನ
ಉರಿದ ಕರ್ಪೂರದಂತೆ.

ಜೋಲು ತೊಗಲಿನ ಮುದುಕಿ
ಕೋಲಿನಾಸರೆಗಾತು, ತಿರುಗುವಳು
ಊರೂರು ಹಿಡಿದು ಹಡ್ಲಿಗೆ;
ಹಿಂದೆ ಹುಡಿ ಬಂಡಾರ
ಹರಿದ ಚಿಂದಿ ಕನಸುಗಳು.....

ಎ. ಎಂ. ಸಾಣಕರ
ಅಂಚೆ : ಪಡಗಾನೂರ ತಾ॥ ಸಿಂದಗಿ ಜಿ॥ ವಿಜಾಪುರ

**ಬಳಸುವವರಿಗೆ ಎಚ್ಚರಿಕೆಗಳು :**

ಹೃದ್ರೋಗಿಗಳು ಈ ಬಗ್ಗೆ ಹೆಚ್ಚು ಗಮನ ನೀಡಬೇಕಾಗುತ್ತದೆ. ಇವರು ಯಾರು ?

೧. ಹೃದ್ರೋಗಿಗಳು, ಕಡಿಮೆಯಾದ ರಕ್ತದೊತ್ತಡದಿಂದ ನರಳುವವರು.

೨. ಇತ್ತೀಚಿನ ಹೃದಯಾಘಾತ, ಅರ್ಧಾಂಗ ವಾಯು ಅಥವಾ ಹೃದಯ ಬಡಿತದ ರೋಗಗಳು (Arrythmias).

೩. ಹೃದಯಾಘಾತದ ಮುಂಚಿನ ರೋಗಲಕ್ಷಣಗಳು.

೪. ತೀವ್ರವಾದ ಹೃದಯ ಸೋಲುವಿಕೆ.

೫. ರಕ್ತದೊತ್ತಡ - ಕಡಿಮೆ ಮತ್ತು ಹೆಚ್ಚು - ಚಿಕಿತ್ಸೆ ನೀಡದಿದ್ದ ಅತಿ ರಕ್ತದೊತ್ತಡ.

ಅಮೇರಿಕದ ಔಷಧ ಮತ್ತು ಆಹಾರ ನಿಯಂತ್ರಣ ಸಂಸ್ಥೆಯವರು ಈ ಔಷಧಿ ಬಳಸುವವರಲ್ಲಿ ಈಗ ೧೩೦ ಸಾವುಗಳನ್ನು ದೃಢಪಡಿಸಿದ್ದಾರೆ. ಈ ಸಾವು ಔಷಧಿ ಸೇವಿಸಿದ ೪ ರಿಂದ ೫ ತಾಸುಗಳ ನಂತರ ಸಂಭವಿಸಿವೆ. ಕಾರಣಗಳು :

೪೮ ಜನರಲ್ಲಿ ಕಾರಣ ಗೊತ್ತಾಗಿಲ್ಲ.

೪೧ ಹೃದಯಾಘಾತ.

೨೭ ಹೃದಯ ಸ್ತಂಭನ.

೬ ಹೃದಯರೋಗ ಲಕ್ಷಣಗಳು.

೩ ಹೃದಯರಕ್ತನಾಳಗಳ ರೋಗಗಳು.

೧೬ ನೈಟ್ರೈಟ್ಸ್ ಮಾತ್ರೆ ಸೇವಿಸುವ ರೋಗಿಗಳು.

ಆದ್ದರಿಂದ ಈ ರೋಗಿಗಳು ಸಿಲ್‌ಡೆನಾಫಿಲ್ ಮಾತ್ರೆ ಬಳಸಬೇಕಾದರೆ ೨೪ ತಾಸುಗಳ ಮೊದಲೇ ನೈಟ್ರೈಟ್ಸ್ ಮಾತ್ರೆ ಸೇವಿಸುವುದನ್ನು ನಿಲ್ಲಿಸಬೇಕು. ಹೃದಯ ರೋಗಿಗಳು ಈ ಮಾತ್ರೆಯನ್ನು ಸೇವಿಸದಿರುವುದೇ ಕ್ಷೇಮ.

ಯಕೃತ್ತಿನ ರೋಗಿಗಳಲ್ಲಿ ಈ ಮಾತ್ರೆ ಸೇವಿಸಲು ಬರುವುದಿಲ್ಲ.

ಶಿಶ್ನದ ನ್ಯೂನತೆ ಇರುವ ರೋಗಿಗಳು : ಅಂದರೆ ಶಿಶ್ನದ ಕುಂಠಿತ ಬೆಳವಣಿಗೆ, ಅಂಕುಡೊಂಕಾಗಿರುವ ಶಿಶ್ನ ಇತ್ಯಾದಿ, ವಿಕಲತೆ ಇರುವವರು ಈ ಮಾತ್ರೆಗಳನ್ನು ಬಳಸಬಾರದು.

ರಕ್ತಸ್ರಾವದ ರೋಗಿಗಳಲ್ಲಿ, ಜಠರದ ಹುಣ್ಣುಗಳ ರೋಗಿಗಳಲ್ಲಿ, ಈ ಮಾತ್ರೆಯನ್ನು ಎಚ್ಚರವಹಿಸಿ ಬಳಸಬೇಕಾಗುತ್ತದೆ.

ಕೆಲವು ಕಣ್ಣಿನ ರೋಗಗಳಲ್ಲಿ ಇದನ್ನು ಬಳಸಲಾಗದು.

ಮಾತ್ರೆಯೊಂದನ್ನು ತೆಗೆದುಕೊಂಡಾಗ ತಲೆನೋವು, ಮುಖ, ದೇಹ ಕೆಂಪೇರುವುದು, ಹೊಟ್ಟೆ ತೊಳಸುವುದು, ನೆಗಡಿಯಾದಂತೆ ಆಗುವುದು ಆಗಬಹುದು. ಇದಕ್ಕಾಗಿ ಹೆದರುವ ಅಗತ್ಯವಿಲ್ಲ.

**ಕೆಲವು ಪ್ರಶ್ನೋತ್ತರಗಳು**

*೧. ಉತ್ತಮ ಲೈಂಗಿಕ ಚಟುವಟಿಕೆ ಉಳ್ಳವರಲ್ಲಿಯೂ ಈ ಮಾತ್ರೆ ಬೇಕೇ ?*

ಲೈಂಗಿಕ ಆಸಕ್ತಿ, ಚಟುವಟಿಕೆ ಉತ್ತಮವಾಗಿರುವವರಿಗೆ ಈ ಮಾತ್ರೆಯ ಅವಶ್ಯಕತೆಯಿಲ್ಲ. ಸಹಜ ಮತ್ತು ಉತ್ತಮ ಶಿಶ್ನನಿಮಿರುವಿಕೆ ಆಗುವವರಲ್ಲಿ ಈ ಮಾತ್ರೆ ನಿಮಿರುವಿಕೆಯನ್ನು ಬಹಳಕಾಲದವರೆಗೆ ಹೆಚ್ಚಿಸುವುದನ್ನಾಗಲಿ ಅಥವಾ ಮೇಲಿಂದ ಮೇಲೆ ನಿಮಿರುವಿಕೆ ಆಗುವಂತೆ ಮಾಡುವಲ್ಲಿ ಸಫಲವಾಗಿಲ್ಲ.

*೨. ಲೈಂಗಿಕ ಆಸಕ್ತಿ ಮತ್ತು ವೀರ್ಯಸ್ಖಲನದ ಮೇಲೆ ಈ ಮಾತ್ರೆಯ ಪರಿಣಾಮವೇನು ?*

*ಈ ಮಾತ್ರೆಯು ಖಂಡಿತವಾಗಿಯೂ ಲೈಂಗಿಕ ಆಸಕ್ತಿಯನ್ನು ಹೆಚ್ಚಿಸುವುದಿಲ್ಲ. ವೀರ್ಯ ಸ್ಖಲನದ ಮೇಲೆ ಈ ಮಾತ್ರೆಗೆ ಯಾವ ಹತೋಟಿಯಾಗಲಿ, ಪರಿಣಾಮವಾಗಲಿ ಇಲ್ಲ.*

*೩. ಮಾತ್ರೆಯ ಸೇವನೆಯ ನಂತರ ಶಿಶ್ನ ನಿಮಿರುವಿಕೆ ದೀರ್ಘಕಾಲ ಉಳಿದರೆ ?*

*ಈ ಮಾತ್ರೆ ಸೇವನೆಯ ಒಂದು ತಾಸಿನ ನಂತರ ತನ್ನ ಪರಿಣಾಮ ಆರಂಭಿಸುತ್ತದೆ ಮತ್ತು ಆ ಪರಿಣಾಮ ನಾಲ್ಕು ತಾಸುಗಳವರೆಗೆ ಇರುತ್ತದೆ. ನಾಲ್ಕು ತಾಸುಗಳ ನಂತರವೂ ಶಿಶ್ನ ಸಡಿಲವಾಗದಿದ್ದರೆ ವೈದ್ಯರನ್ನು ಕಾಣುವುದು ಉತ್ತಮ.*

*೪. ಈ ಮಾತ್ರೆ ಹೆಂಗಸರಲ್ಲಿ ಉಪಯೋಗಿಸಬಹುದೆ ?*

*ಹೆಂಗಸರಲ್ಲಿ ಲೈಂಗಿಕತೆಯ ವಿಷಯದಲ್ಲಿ ಈ ಮಾತ್ರೆಯ ಉಪಯೋಗದ ಬಗ್ಗೆ ಹೆಚ್ಚು ಮಾಹಿತಿ ಇಲ್ಲ.*

[redacted] ದಯಾನಂದ ಈ. ನೂಲಿ
ಶಸ್ತ್ರ ಚಿಕಿತ್ಸಕರು, ಚಿಕ್ಕೋಡಿ-೫೯೧ ೨೦೦

**ಅಮೆರಿಕದಿಂದ ಪತ್ರ** *(ಅಕ್ಟೋಬರ್ ೨೫ರ ಸುಮಾರಿಗೆ ಬರೆದಿದ್ದು)*

# ಸೆಪ್ಟೆಂಬರ್ 11ರ ದಾಳಿಯ ನಂತರ ಭಯದ ನೆರಳಿನಲ್ಲಿ ೧

ಭಯೋತ್ಪಾದಕರ ಮೇಲೆ, ಅವರಿಗೆ ಆಶ್ರಯ ನೀಡುವ ದೇಶಗಳ ಮೇಲೆ ಯುದ್ಧ ಸಾರಿರುವ ಅಮೆರಿಕ ಸೆಪ್ಟೆಂಬರ್ ೧೧ರ ದಾಳಿಯಿಂದ ಚೇತರಿಸಿಕೊಳ್ಳಲು ಸಾಕಷ್ಟು ಸಮಯ ಹಿಡಿಯಲಿದೆ. ಘಟನೆ ಸಂಭವಿಸಿದ ವಾರಾಂತ್ಯದಲ್ಲಿ ಅಮೆರಿಕದ ಕಾಂಗ್ರೆಸ್ ಸದನವನ್ನುದ್ದೇಶಿಸಿ ರಣಕಹಳೆ ಊದಿ ಘರ್ಜಿಸಿದ ಅಧ್ಯಕ್ಷ ಜಾರ್ಜ್ ಬುಷ್ ಈಗ ತಣ್ಣಗಾಗಿದ್ದಾರೆ. ಶಕ್ತಿ ಪ್ರದರ್ಶನ ನಡೆಸಿದ್ದರೂ ಪ್ರತೀಕಾರ ಕ್ರಮ ಜರುಗಿಸಲು ಹಿಂಜರಿತ ಎದ್ದು ಕಾಣುತ್ತಿತ್ತು. ಆಫ್ಘಾನಿಸ್ತಾನದ ಮೇಲೆ ದಾಳಿ ನಡೆಸುವ ಅಬ್ಬರಗಳಿದ್ದಾಗ್ಯೂ ಅಮೆರಿಕದ ಸರಕಾರ ಎಚ್ಚರಿಕೆಯಿಂದ ಮುಂದುವರಿಯಬೇಕಾಗಿಬಂದಿತು. ರಾಜಕೀಯ ವಲಯಗಳಲ್ಲಿ ಅಮೆರಿಕದ ವಿದೇಶಾಂಗ ನೀತಿಯ ಪುನರ್ ವಿಮರ್ಶೆಗಾಗಿ ಚರ್ಚೆ ನಡೆಯುತ್ತಿದೆ. ವಿಶ್ವವಿದ್ಯಾನಿಲಯದ ಅಕಾಡೆಮಿಕ್ ವಲಯಗಳಲ್ಲಿ ನಡೆದಿರುವ ಚರ್ಚೆಗಳಲ್ಲಿ ಮಧ್ಯಪ್ರಾಚ್ಯದಲ್ಲಿ ಅಮೆರಿಕ ಅನುಸರಿಸುತ್ತಿರುವ ನೀತಿ ತೀವ್ರವಾದ ಟೀಕೆಗೆ ಗುರಿಯಾಗಿದೆ. ಹಲವು ದಶಕಗಳ ಕಾಲ ಅಮೆರಿಕದ ಸರಕಾರ ಎಲ್ಲೆಡೆಗಳಲ್ಲಿಯೂ ಪ್ರತಿಗಾಮಿ ಜನವಿರೋಧಿ ಆಳುವವರ್ಗಗಳಿಗೆ ನೀಡುತ್ತ ಬಂದಿರುವ ಬೆಂಬಲವನ್ನು, ಅದರಿಂದ ಉದ್ಭವಿಸಿರುವ ಪರಿಣಾಮವನ್ನು, ಮುಖ್ಯವಾಗಿ ಇಸ್ಲಾಮಿಕ್ ದೇಶಗಳ ಜನರಲ್ಲಿ ಉಂಟಾಗಿರುವ ಅಮೆರಿಕ ವಿರೋಧಿ ಭಾವನೆಯನ್ನು ಒತ್ತಿ ಹೇಳಲಾಗುತ್ತಿದೆ.

ಸೀಯಾರ್ಕೆ

ಅಮೆರಿಕದ ವಿದೇಶಿ ನೀತಿ ಕುರಿತು ರಾಜಕೀಯ ಚರ್ಚೆ ಒಂದು ಕಡೆಯಾದರೆ, ಯುದ್ಧ ವಿರೋಧಿ ಶಾಂತಿ ಚಳುವಳಿ ಸಣ್ಣ ಪ್ರಮಾಣದಲ್ಲಿ ಪ್ರಾರಂಭವಾಗಿದ್ದರೂ ಎಲ್ಲ ಕಡೆ ಸಂಘಟಿತ ರೂಪ ತಾಳುತ್ತಿದೆ. ವಾಷಿಂಗ್ಟನ್‌ನಲ್ಲಿ ಈಗಾಗಲೇ ಆಫ್ಘಾನಿಸ್ತಾನದ ಮೇಲಾಗಲಿ, ಬೇರಾವುದೇ ದೇಶದ ಮೇಲಾಗಲಿ ಅಮೆರಿಕ ದಾಳಿ ನಡೆಸುವುದನ್ನು ವಿರೋಧಿಸಿ




ಪ್ರದರ್ಶನಗಳು ಜರುಗಿವೆ. ವಿಶ್ವವಿದ್ಯಾನಿಲಯಗಳ ವಿದ್ಯಾರ್ಥಿಗಳು ಶಾಂತಿ ಚಳವಳಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದಾರೆ. ಕ್ಯಾಲಿಫೋರ್ನಿಯ ವಿಶ್ವವಿದ್ಯಾಲಯದ ೨೫೦೦ ವಿದ್ಯಾರ್ಥಿಗಳು ಯುದ್ಧ ವಿರೋಧಿ ಘೋಷಣೆಗಳೊಂದಿಗೆ ಅಧ್ಯಕ್ಷ ಬುಷ್ ಭಾಷಣ ಮಾಡಿದ ಮರುದಿನವೇ ಬೃಹತ್ ಪ್ರದರ್ಶನ ನಡೆಸಿದರು. ಬೋಸ್ಟನ್, ನ್ಯೂಯಾರ್ಕ್,

## ಭಯೋತ್ಪಾದಕತೆ : ಅಮೆರಿಕಾದ ದೃಷ್ಟಿಯಲ್ಲಿ...

ಇಪ್ಪತ್ತು ವರುಷಗಳ ಹಿಂದಿನ ಮಾತು. ಅಂತರರಾಷ್ಟ್ರೀಯ ಭಯೋತ್ಪಾದಕತೆಯ ವಿರುದ್ಧದ ಸಮರವೇ ಅಮೆರಿಕಾದ ವಿದೇಶಾಂಗ ನೀತಿಯ ಕೇಂದ್ರ ಬಿಂದು ಎಂಬ ಘೋಷಣೆಯ ಆಧಾರದ ಮೇಲೆ ರೀಗನ್ ಆಡಳಿತ ಗದ್ದುಗೆಯನ್ನೇರಿದ ಕಾಲ. ಅದಕ್ಕನುಗುಣವಾಗಿ ಚಾಚೂ ತಪ್ಪದೆ ಹಿಂದೆಂದೂ ಕೇಳರಿಯದ ಮಟ್ಟದಲ್ಲಿ ಹಿಂಸಾತ್ಮಕ ಕೃತ್ಯಗಳ ಮೂಲಕ ಜಾಗತಿಕ ಮಟ್ಟದಲ್ಲಿ ಅಮೆರಿಕಾ ತಾನೇ ಭಯೋತ್ಪಾದಕತೆಯಲ್ಲಿ ತೊಡಗಿತು. ವಿಶ್ವರಾಷ್ಟ್ರ ಸಂಸ್ಥೆಯ ಭದ್ರತಾ ಸಮಿತಿಯ ಹಿತವಚನಗಳನ್ನು ಕಿಂಚಿತ್ತೂ ಬೆಲೆ ಇಲ್ಲದಂತೆ ಮೂಲೆಗುಂಪಾಗಿಸಿತು. ಇತರ ರಾಷ್ಟ್ರಗಳ ಮೇಲೆ ಅಮೆರಿಕಾ ಮಾಡುತ್ತಿರುವ ಬಲಪ್ರಯೋಗ ಕಾನೂನುಬಾಹಿರವೆಂಬ ಅಂತರ ರಾಷ್ಟ್ರೀಯ ನ್ಯಾಯಾಲಯದ ಖಂಡನೆಗೂ ಅದೇ ಪ್ರತಿಕ್ರಿಯೆ ಆ ರಾಷ್ಟ್ರದ್ದು. ಸಾಲದೆಂಬಂತೆ ಸಾಂಪ್ರದಾಯಿಕ ಮುಖಾಮುಖಿ ಯುದ್ಧಕ್ಕೆ ಬದಲಾಗಿ ಮುಗ್ಧ ನಾಗರಿಕ ಜನಸಮುದಾಯಗಳನ್ನು ನೇರ ಗುರಿಯಾಗಿಸಿಕೊಂಡು ಆಕ್ರಮಣ ಮಾಡಲು ತನ್ನ ಪಡೆಗಳಿಗೆ ಆಜ್ಞೆ ಹೊರಡಿಸಿತು ಅಮೆರಿಕಾದ ಅಂದಿನ ಆಡಳಿತ.

ಇದನ್ನು ಹೇಳುವುದಕ್ಕೆ ಕಾರಣವಿಷ್ಟೆ: ಅಂತರ ರಾಷ್ಟ್ರೀಯ ನ್ಯಾಯಾಲಯ ಖಂಡಿಸಿದ್ದರಲ್ಲಾಗಲಿ, ಭದ್ರತಾ ಸಮಿತಿ ಅಭಿಪ್ರಾಯದಲ್ಲಾಗಲಿ ಯಾವ ವಿವಾದಾತ್ಮಕ ಅಂಶವೂ ಇರಲಿಲ್ಲ. ಅಮೆರಿಕಾದ ಕೆಲತರಹದ ದುಷ್ಕೃತ್ಯಗಳಿಗೆ ಒಂದಲ್ಲ, ಎರಡಲ್ಲ, ಹಲವಾರು ಉದಾಹರಣೆಗಳಿವೆ. ರೀಗನ್ ಆಡಳಿತಾವಧಿಯಲ್ಲಿಯೇ ಆ ರಾಷ್ಟ್ರದ ಬರ್ಬರ ನೀತಿ ಮತ್ತು ಹಿಂಸಾತ್ಮಕ ಕೃತ್ಯಗಳ ಸಲುವಾಗಿ ಮಧ್ಯ ಅಮೆರಿಕಾದಲ್ಲಿ ಸಂಭವಿಸಿದ ಸಾವುನೋವುಗಳು ಅಪಾರ. ಆ ಪ್ರದೇಶದಲ್ಲಿನ ನಾಲ್ಕು ರಾಷ್ಟ್ರಗಳ ಭವಿಷ್ಯ ನುಚ್ಚುನೂರಾದದ್ದು ಈಗ ಇತಿಹಾಸ. ಅಲ್ಲಿಯ ಜನರ ಬದುಕು ಅರ್ಥಹೀನವಾದದ್ದು ಕೂಡ. ಪಶ್ಚಿಮ ರಾಷ್ಟ್ರಗಳ ಕುಮ್ಮಕ್ಕಿನಿಂದ ದಕ್ಷಿಣ ಆಫ್ರಿಕಾದಲ್ಲಿ ಸಾಮೂಹಿಕ ಕೊಲೆ, ಲೂಟಿ ಜರುಗಿದ್ದು ಅದೇ ಸಂದರ್ಭದಲ್ಲಿಯೇ. ಪಶ್ಚಿಮ ಏಷ್ಯಾ ಮತ್ತಿತರೆಡೆ ಆದದ್ದೇನು, ಅದಕ್ಕೆ ಕಾರಣರಾರು ಎಂಬುದನ್ನು ನಾನು ವಿಶೇಷವಾಗಿ ಗುರುತಿಸಬೇಕಾದ ಅವಶ್ಯಕತೆಯೇ ಇಲ್ಲ.

'ಭಯೋತ್ಪಾದಕತೆ' ಎಂಬುದನ್ನು ತನಗೆ ಅನುಕೂಲವಾಗುವ ರೀತಿಯಲ್ಲಿ ತಿರುಚುವ, ಅರ್ಥೈಸುವ ಚಾತುರ್ಯ ಅಮೆರಿಕಾಕ್ಕಿದೆ. ಈ ನಿಟ್ಟಿನಲ್ಲಿ ಅನೇಕ ಪಶ್ಚಿಮ ರಾಷ್ಟ್ರಗಳೂ ಹಿಂದೆ ಬಿದ್ದಿಲ್ಲ. ಅವರ ಪ್ರಕಾರ 'ಭಯೋತ್ಪಾದಕತೆ'ಗೆ ಎರಡು ಅರ್ಥವಿದೆಯಂತೆ: ಅಕ್ಷರಶಃ ಒಂದಾದರೆ, ಪ್ರಚಾರ ದೃಷ್ಟಿಯಿಂದಲೇ ಬೇರೆ. ಅಕ್ಷರಶಃ ಅರ್ಥ ಬೇಕೆಂದರೆ ಅಮೆರಿಕಾ ಸರಕಾರದ ದಸ್ತಾವೇಜುಗಳಲ್ಲಿ ಇಣುಕು ಹಾಕಬೇಕು. ರಾಜಕೀಯ, ಧಾರ್ಮಿಕ ಅಥವಾ ಸೈದ್ಧಾಂತಿಕ ಗುರಿಸಾಧನೆಗಳಿಗಾಗಿ ಹಿಂಸಾತ್ಮಕ ಕೃತ್ಯಗಳಿಗೆ ಮೊರೆ ಹೋಗುವುದೇ ಭಯೋತ್ಪಾದಕತೆ.... ಅದು ಇದು.... ಎಂಬಿತ್ಯಾದಿ ನಿರೂಪಣೆಗಳು ಅಲ್ಲಿವೆ. ಅವರ ಸರಕಾರದ ದುರುದ್ದೇಶಗಳನ್ನು ಮರೆಮಾಚಿ ಹೇಳುವ ತಂತ್ರ ಆ ಮಾತುಗಳಲ್ಲಿ ಅಡಗಿದೆಯಷ್ಟೆ. ದಿನನಿತ್ಯದ ಕಾರ್ಯಾಚರಣೆಯಲ್ಲಿ 'ಭಯೋತ್ಪಾದಕತೆ'ಯನ್ನು ಹೀಗೆ ಅರ್ಥೈಸುವುದು ಅಷ್ಟು ಸರಿ ಎನಿಸಲಾರದು. ಎಂತಲೇ ಪ್ರಚಾರದ ಸಲುವಾಗಿಯೇ ಬಳಸುವಾಗ 'ಭಯೋತ್ಪಾದಕತೆ' ಎಂಬುವ ಪದ ಪ್ರಯೋಗ ಅಮೆರಿಕ ಮತ್ತದರ ಹಿಂಬಾಲಕರ ಹಿತದೃಷ್ಟಿಯನ್ನು ಕಾಪಾಡುವಂತಿರಬೇಕು. ಎಂದರೆ, ನಿಜ ಅರ್ಥದಲ್ಲಿ ಅವರ ವಿರುದ್ಧವಾದ ಎಲ್ಲ ರೀತಿಯ ಕಾರ್ಯಾಚರಣೆಗಳೂ 'ಭಯೋತ್ಪಾದಕತೆ' ಎಂದೆನಿಸಿಕೊಳ್ಳುತ್ತವೆ ! ಅನ್ಯ ರಾಷ್ಟ್ರಗಳ ಮೇಲೆ ತನ್ನ ಒಡೆತನ ಸ್ಥಾಪಿಸಿಕೊಳ್ಳಲು ಅಮೆರಿಕಾ ಅನುಸರಿಸುವ ಕುತಂತ್ರಗಳಿಗೆ ಇದೊಂದು ಉದಾಹರಣೆ ಮಾತ್ರ.

— ನೋಮ್ ಚೋಮ್‌ಸ್ಕಿ

(ದೆಹಲಿಯಲ್ಲಿ ಮಾಡಿದ ಇತ್ತೀಚಿನ ಭಾಷಣದ ಒಂದು ಭಾಗ)

ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯಗಳ ವಿದ್ಯಾರ್ಥಿಗಳು ಶಾಂತಿಗಾಗಿ ಮೇಣದ ಬತ್ತಿ ಹಿಡಿದು ರ್‍ಯಾಲಿ ನಡೆಸಿದರು. ಈ ಬಗೆಯ ಪ್ರದರ್ಶನಗಳು ದೇಶಾದ್ಯಂತವೂ ಪ್ರಾರಂಭವಾಗಿದ್ದವು.

ನ್ಯೂಯಾರ್ಕ್ ನಗರದ ವರ್ಲ್ಡ್ ಟ್ರೇಡ್ ಸೆಂಟರ್ ನೆಲಸಮವಾಗಿದ್ದು ಹರಡಿಕೊಂಡಿರುವ ಕಾಂಕ್ರೀಟ್ ರಾಶಿಯನ್ನು ತೆಗೆದು ಹೊರಹಾಕಲು ಇನ್ನೂ ಒಂದು ವರ್ಷ ಬೇಕಾಗುವುದೆಂದು ಅಂದಾಜು ಮಾಡಲಾಗಿದೆ. ಧೂಳು, ಹೊಗೆಗಳಿಂದಾಗಿ, ಇನ್ನೂ ನೆಲದಲ್ಲಿ ಹುದುಗಿರುವ ಸತ್ತ ದೇಹಗಳಿಂದಾಗಿ, ಉಂಟಾಗಿರುವ ಮಾಲಿನ್ಯದಿಂದ ನಾನಾ ರೋಗರುಜಿನಗಳ ಭಯ ಉಂಟಾಗಿದೆ. ಆದರೂ ಈ ಮಧ್ಯೆ ಎರಡು ಭಾರಿ ಲಾರಿಗಳು ತುಂಬುವಷ್ಟು ಚಿನ್ನದ ಗಟ್ಟಿಗಳು ಈ ರಾಶಿಯಲ್ಲಿ ದೊರೆತಿವೆ. ಮ್ಯಾನ್‌ಹಾಟನ್ ಸುತ್ತಮುತ್ತ ಎಲ್ಲವೂ ತಹಬಂದಿಗೆ ಬಂದು ಸಹಜ ಸ್ಥಿತಿ ಮೂಡಲು ಇನ್ನೂ ನಾಲ್ಕಾರು ತಿಂಗಳು ಹಿಡಿದೀತು. ಬಿಗಿ ಭದ್ರತಾ ಕ್ರಮಗಳು ಅಮೆರಿಕನ್ನರ ನಿತ್ಯ ಜೀವನವನ್ನು ದುಸ್ತರವಾಗಿಸಿದೆ. ಎಲ್ಲ ಕಡೆಗಳಲ್ಲಿಯೂ, ಮುಖ್ಯವಾಗಿ ವಿಮಾನ ನಿಲ್ದಾಣಗಳಲ್ಲಿ, ಜನ ಗಂಟೆಗಟ್ಟಲೆ ಕಾಯಬೇಕಾಗಿಬಂದಿದೆ. ಕೆನಡಾ ಮತ್ತು ಮೆಕ್ಸಿಕೋ ಗಡಿಗಳಲ್ಲಿನ ಹೆದ್ದಾರಿಗಳಲ್ಲಿ ಸರಕು ಸಾಗಾಣಿಕೆ ಟ್ರಕ್ಕುಗಳ ಸಂಚಾರ ಕಡಿಮೆಯಾಗಿರುವುದರಿಂದ ಉದ್ಯಮಗಳಿಗೆ ಕಚ್ಚಾ ಸಾಮಗ್ರಿ ಸರಬರಾಜು ದುರ್ಲಭವಾಗುತ್ತಿದೆ. ಸಂದೇಹಾಸ್ಪದ ವ್ಯಕ್ತಿಗಳನ್ನು ಬಂಧಿಸಲು ಪೊಲೀಸರಿಗೆ ವಿಶೇಷ ಅಧಿಕಾರವನ್ನು ನೀಡಲಾಗಿದೆ. ಅಂಥ ವ್ಯಕ್ತಿಗಳನ್ನು ವಿಚಾರಣೆಯಿಲ್ಲದೆ ಬಂಧನದಲ್ಲಿರಿಸುವುದರ ಅವಕಾಶ ನೀಡಲಾಗಿದೆ. ಅಮೆರಿಕದ ಕಾಂಗ್ರೆಸ್ ಸದನ ಸದ್ಯದಲ್ಲೇ ಅಂಗೀಕಾರ ನೀಡಲಿರುವ ಭದ್ರತಾ ಕ್ರಮಗಳ ಹೊಸ ಕಾಯಿದೆಯಿಂದ ಅಮೆರಿಕದ ಜನ ತಮ್ಮ ಹಲವು ಮೂಲ ಸ್ವಾತಂತ್ರ್ಯಗಳನ್ನು ಕಳೆದುಕೊಳ್ಳಲಿದ್ದಾರೆ. ಸೂಚಿಸಲಾಗಿರುವ ಕ್ರಮಗಳಲ್ಲಿ ವಿಚಾರಣೆಯಿಲ್ಲದೆ ವ್ಯಕ್ತಿಗಳನ್ನು ಅನಿರ್ದಿಷ್ಟ ಕಾಲ ಬಂಧನದಲ್ಲಿರಿಸುವ ಜೊತೆಗೆ, ಪೊಲೀಸರು ಟೆಲಿಫೋನ್ ಕದ್ದಾಲಿಕೆ ಮತ್ತು ಈ-ಮೇಲ್ ತಪಾಸಣೆಯ ಅಧಿಕಾರವನ್ನು ಪಡೆದುಕೊಳ್ಳಲಿದ್ದಾರೆ. ಈಗಾಗಲೇ ನೂರಾರು ಮಂದಿ ಅರಬ್ ಅಮೆರಿಕನ್ನರನ್ನು ಸರಕಾರ ಬಂಧಿಸಿದೆ. ವೀಸಾ ನೀಡಿಕೆಯ ನಿರ್ಬಂಧಗಳನ್ನು ಈಗ ಮತ್ತಷ್ಟು ಬಿಗಿಗೊಳಿಸಲಾಗಿದೆ. ಇದರಿಂದಾಗಿ ಅಮೆರಿಕದಲ್ಲಿರುವ ಅನ್ಯದೇಶೀಯರಿಗೆ ಸಾಕಷ್ಟು ತೊಂದರೆಯಾಗಲಿದೆ. ಭದ್ರತೆಯ ಹೆಸರಿನಲ್ಲಿ ತಮ್ಮ ಹಲವು ನಾಗರಿಕ ಹಕ್ಕುಗಳನ್ನು ಕಳೆದುಕೊಳ್ಳಲಿರುವ ಅಮೆರಿಕನ್ನರಲ್ಲಿ ಅನ್ಯದೇಶೀಯರನ್ನು, ವಿಶೇಷವಾಗಿ ಅರಬ್ಬರು, ಪಾಕಿಸ್ತಾನಿಯರು, ಭಾರತೀಯರು ಹಾಗೂ ಇತರ ಏಶಿಯನ್ನರನ್ನು, ಸಂಶಯದಿಂದ ನೋಡುವ ಪ್ರವೃತ್ತಿ ಬೆಳೆದಿದೆ. ಅಮೆರಿಕದಲ್ಲಿರುವ ಅರಬ್ಬರು (ಸುಮಾರು ಮೂರು ಮಿಲಿಯ) ಭಯದಿಂದಲೇ ಜೀವಿಸಬೇಕಾಗಿಬಂದಿದೆ. ಅವರು ನಡೆಸುತ್ತಿರುವ ಹೋಟೆಲುಗಳು, ಅಂಗಡಿಗಳಲ್ಲಿ ವ್ಯಾಪಾರ ಈಗಾಗಲೇ ಕುಸಿದಿದೆ.

ಇನ್ನು ಆರ್ಥಿಕ ಪರಿಣಾಮಗಳ ಬಿಸಿ ಈಗ ಹೆಚ್ಚಾಗಿ ತಟ್ಟತೊಡಗಿದೆ. ಸೆಪ್ಟೆಂಬರ್ ೧೧ರ ದಾಳಿಯ ನಂತರದ ಮೂರು ವಾರಗಳಲ್ಲಿ ೧,೪೪,೫೪೦ ಜನ ಉದ್ಯೋಗ ಕಳೆದುಕೊಂಡಿದ್ದಾರೆ. ಸ್ಟಾಕ್ ಮಾರ್ಕೆಟ್ ಕುಸಿತ ಕಳೆದ ಶತಮಾನದ ಆದಿಯಲ್ಲಿನ ಮಹಾ ಆರ್ಥಿಕ ಕುಸಿತದ ದಿನಗಳನ್ನು ನೆನಪಿಗೆ ತರುತ್ತಿದೆ. ಆಸ್ತಿ ಪಾಸ್ತಿ ಹಾನಿ ಹಾಗೂ ಉತ್ಪಾದನಾ ನಷ್ಟ ಸುಮಾರು ೬೦ ಬಿಲಿಯ ಡಾಲರ್‌ಗಳೆಂದು ಅಂದಾಜು ಮಾಡಲಾಗಿದೆ. ಸ್ಟಾಕ್ ಮಾರ್ಕೆಟ್ ಬೆಲೆ ಕುಸಿತದಿಂದ ಒಂದು ವಾರದಲ್ಲಿ ೧.೩೮ ಟ್ರಿಲಿಯನ್ ಡಾಲರುಗಳಷ್ಟು ನಷ್ಟ ಎಂದು ಅಂದಾಜು ಮಾಡಲಾಗಿದೆ. ಈ ಮೊದಲೇ ಆರ್ಥಿಕ ಹಿಂಜರಿತದಿಂದ ತತ್ತರಿಸುತ್ತಿದ್ದ ಅಮೆರಿಕದ ಆರ್ಥಿಕ ಸ್ಥಿತಿ ಈಗ ಮತ್ತಷ್ಟು ಕುಸಿದಿದೆ. ಇದುವರೆಗೆ ಆರ್ಥಿಕ ಕುಸಿತದ ವಿಚಾರ ಎತ್ತದಿದ್ದ ಅಮೆರಿಕದ ಆರ್ಥಿಕ ತಜ್ಞರು ಈಗ ಅಮೆರಿಕವು ಆರ್ಥಿಕ ಕುಸಿತ ಎದುರಿಸುತ್ತಿದೆ ಎಂದು ಒಪ್ಪಿದ್ದಾರೆ. ಸದ್ಯದಲ್ಲಿ ಆರ್ಥಿಕವಾಗಿ ಚೇತರಿಸಿಕೊಳ್ಳುವುದು ಸಾಧ್ಯವಿಲ್ಲ ಎಂದು ಹೇಳಿದ್ದಾರೆ. ೨೦೦೨ರ ಮೊದಲ ಮೂರು ತಿಂಗಳಲ್ಲಿ ಪರಿಸ್ಥಿತಿ ಸುಧಾರಿಸದಿದ್ದರೆ ಸುದೀರ್ಘ ಕಾಲದ ಬಿಕ್ಕಟ್ಟು ಅನಿವಾರ್ಯ ಎಂದು ಹೇಳಲಾಗುತ್ತಿದೆ. ನಾಗರಿಕ ವಿಮಾನಯಾನ ತೀವ್ರವಾಗಿ ಕಡಿಮೆಯಾಗಿದೆ. ಸೆಪ್ಟೆಂಬರ್ ೧೧ರ ದಾಳಿಯ ನಂತರ ಬುಷ್ ಸರಕಾರ ನಾಗರಿಕ ವಿಮಾನ ಯಾನ ಸಂಸ್ಥೆಗಳಿಗೆ ಭದ್ರತಾ ವೆಚ್ಚಕ್ಕಾಗಿ ಹಾಗೂ

## ನಾಗರಿಕತೆ - ಬರ್ಬರತೆ

ಸೆಪ್ಟೆಂಬರ್ ೧೧ರ ನ್ಯೂಯಾರ್ಕ್ - ವಾಷಿಂಗ್‌ಟನ್ ಘಟನೆಗಳನ್ನು ಅಮೆರಿಕಾ ಸರ್ಕಾರವು ನಾಗರಿಕತೆಯ ವಿರುದ್ಧದ ಬರ್ಬರತೆಯ ದಾಳಿ ಎಂದು ಬಣ್ಣಿಸುತ್ತದೆ. ಆದ್ದರಿಂದಲೇ ವಿಶ್ವದ ಎಲ್ಲ ರಾಷ್ಟ್ರಗಳೂ ಅವರೊಡನೆ ಸೇರಬೇಕೆಂಬ ನಿರೀಕ್ಷೆ ಮತ್ತು ಒತ್ತಾಯ. ಅವರೊಂದಿಗಿಲ್ಲದಿದ್ದವರು ಭಯೋತ್ಪಾದಕತೆಯ ಪರ ಎಂದು ಸಹ ಅಮೆರಿಕಾ ಘೋಷಿಸುತ್ತದೆ.

ಅಂದಿಗೆ ಸರಿಯಾಗಿ ಮೂವತ್ತು ವರ್ಷಗಳ ಹಿಂದೆ, ಅಂದರೆ ೧೯೭೧ರ ಸೆಪ್ಟೆಂಬರ್ ೧೧ರಂದು, ಅಮೆರಿಕಾ ಸರ್ಕಾರವು ತನ್ನ ದೇಶದ ನಾಗರಿಕ ಪ್ರಜೆಗಳ ಒಂದು ವಿಭಾಗದ ವಿರುದ್ಧ ಎಂತಹ ಭಯೋತ್ಪಾದಕ ಕೃತ್ಯವನ್ನೆಸಗಿದ್ದಿತೆಂಬುದನ್ನು ಮೆಲುಕು ಹಾಕುವುದು ಅನುಚಿತವಾಗಲಾರದು. ಅದೂ ನ್ಯೂಯಾರ್ಕ್‌ನಲ್ಲೇ ಜರುಗಿದ್ದು; ಕರಿಯರನ್ನೇ ಹೆಚ್ಚಾಗಿ ಬಂಧನದಲ್ಲಿರಿಸಲಾಗಿದ್ದ ಕಾರಾಗೃಹದಲ್ಲಿ.

ಅದರ ಹೆಸರು ಅಟೀಕಾ ರಾಜ್ಯ ಕಾರಾಗೃಹ. ಜಾರ್ಜ್ ಜಾಕ್ಸನ್ ಎಂಬೊಬ್ಬ ಕರಿಯನನ್ನು ಪೊಲೀಸರು ಜೈಲಿನಲ್ಲಿ ಸಾಯಿಸಿದ್ದರು. ಅದನ್ನು ಪ್ರತಿಭಟಿಸಲು ಆಗಸ್ಟ್ ೨೨ರಂದು ಎಲ್ಲ ಖೈದಿಗಳೂ ಕರಿ ಬಟ್ಟೆಯನ್ನು ಭುಜಕ್ಕೆ ಸುತ್ತಿಕೊಂಡಿದ್ದರು. ಯಾರೂ ಮಾತನಾಡಲಿಲ್ಲ. ಊಟದ ಮನೆಗೆ ಕರೆದೊಯ್ದಾಗ ಯಾರೂ ಊಟ ಮಾಡಲಿಲ್ಲ. ಏಳುನೂರು ಮಂದಿ ಹೀಗೆ ಒಟ್ಟಾಗಿ ಪ್ರತಿಭಟಿಸಿದ್ದರು. ಜುಲೈ ೧೯೭೧ರಲ್ಲಿ ಕಾರಾಗೃಹಗಳಲ್ಲಿನ ಅಮಾನವೀಯ ಸನ್ನಿವೇಶಗಳನ್ನು ಪಟ್ಟಿಮಾಡಿ ಪರಿಹಾರ ಕೇಳಲಾಗಿತ್ತು. ತಮ್ಮ ಸಂವಿಧಾನಾತ್ಮಕ ಹಕ್ಕುಗಳನ್ನು ಮಾನ್ಯ ಮಾಡಬೇಕೆಂಬುದು ಅವರ ಆಗ್ರಹವಾಗಿತ್ತು. ಜಾರ್ಜ್ ಜಾಕ್ಸನ್‌ನ ಕೊಲೆಯು ಅವರ ಉದ್ವೇಗವನ್ನು ಇಮ್ಮಡಿಗೊಳಿಸಿತು.

ಸೆಪ್ಟೆಂಬರ್ ೯, ಏಕಾಏಕಿ ಕಾರಾಗೃಹದಲ್ಲಿ ಪರಿಸ್ಥಿತಿ ಪ್ರಕೋಪಕ್ಕೆ ಬಂದಿತು. ಸಾವಿರದಿನ್ನೂರು ಖೈದಿಗಳು ಕಾರಾಗೃಹದ 'ಡಿ' ವಿಭಾಗವನ್ನು ಹತೋಟಿಗೆ ತೆಗೆದುಕೊಂಡು ೩೮ ಮೇಲ್ವಿಚಾರಕರನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡರು. ಅವರಲ್ಲೇ ಒಂದು ನಾಯಕತ್ವ ಹೊಮ್ಮಿತು. ಇದಾದ ಎರಡು ದಿನಗಳ ನಂತರ, ಅಂದರೆ ಸೆಪ್ಟೆಂಬರ್ ೧೧ರಂದು, ಖೈದಿಗಳು ತಮ್ಮ ಕಾರ್ಯಾಚರಣೆಯನ್ನು ವೀಕ್ಷಿಸಿ ಅಧಿಕಾರಿಗಳೊಡನೆ ಸಂವಾದ ನಡೆಸಲು ಹೊರಗಿನಿಂದ ಕೆಲವು ಮಧ್ಯಸ್ಥಿಕೆದಾರರನ್ನು ಕರೆಸಿಕೊಂಡರು. ಕರಿಯರೇ ಅಧಿಕವಾಗಿದ್ದರೂ ಖೈದಿಗಳಲ್ಲಿ ಬಿಳಿಯರೂ ಇದ್ದರು. ೧೭೦೦ ಮಂದಿ ಪೊಲೀಸರನ್ನು ಕರೆಯಿಸಿ ಖೈದಿಗಳ ಮೇಲೆ ಗುಂಡು ಹಾರಿಸಲಾಯಿತು. ನೂರಾರು ಖೈದಿಗಳು ಹತರಾದರು. ಅಧಿಕೃತ ವರದಿಗಳ ಪ್ರಕಾರ ಕೇವಲ ೪೩ ಜನರನ್ನು ಸಾಯಿಸಲಾಗಿತ್ತು. ಇದು 'ನಾಗರಿಕ' ಸರ್ಕಾರವು 'ಬರ್ಬರ' ಖೈದಿಗಳ ಮೇಲೆ ನಡೆಸಲಾಗಿದ್ದ ಭಯೋತ್ಪಾದಕ ಕೃತ್ಯ. ಪ್ರಜಾಪ್ರಭುತ್ವಕ್ಕೆ ಮಾದರಿಯಾದವರು ನಾಗರಿಕ ಖೈದಿಗಳು; ಬರ್ಬರವಾದ್ದು ಅಮೆರಿಕಾದ ಸರ್ಕಾರ.

ದಮನದ ನಂತರ ಖೈದಿಗಳ ಅಧೀನದಲ್ಲಿದ್ದ ಟಾಮ್ ವಿಕರ್ ಎಂಬ ಅಧಿಕಾರಿಯನ್ನು ಸಂಪರ್ಕಿಸಲಾಯಿತು. ಖೈದಿಗಳಲ್ಲಿ ಬಿಳಿಯರು-ಕರಿಯರು ಎಷ್ಟು ಸೌಹಾರ್ದದಿಂದ ಇದ್ದರೆಂಬುದನ್ನು ಆತ ವಿವರಿಸಿದ. ''ಇಂತಹ ಅದ್ಭುತ ಸೌಹಾರ್ದವನ್ನು ನಾನು ನೋಡಿದ್ದು ಇಲ್ಲೇ. ಹೊರಗಡೆ ಎಲ್ಲಿದೆ ಅಂತಹ ಒಳ್ಳೆಯ ಸಂಬಂಧ'', ಎಂದು ಆತ ನುಡಿದ. ಅಂತಹ ಸೌಹಾರ್ದವನ್ನು ಬೆಳೆಸಿಕೊಂಡಿದ್ದೇ ಅವರ ತಪ್ಪಾಗಿತ್ತು, ನಾಗರಿಕ ಭಯೋತ್ಪಾದಕ ಅಮೆರಿಕಾ ಸರ್ಕಾರದ ದೃಷ್ಟಿಯಲ್ಲಿ!!

ಇದೇ ಸರ್ಕಾರವು ಅದೇ ಸಮಯದಲ್ಲಿ ಕರಿಯರ ಕಣ್ಮಣಿ, ತತ್ವಶಾಸ್ತ್ರ ಪ್ರಾಧ್ಯಾಪಕಿ, ಹೋರಾಟದ ಅಗ್ರನಾಯಕಿ ಏಂಜೆಲಾ ಡೇವಿಸ್‌ರನ್ನು 'ಭಯೋತ್ಪಾದಕಿ' ಎಂದು ಕರೆದು ಸುಮಾರು ಎರಡು ವರ್ಷಗಳ ಕಾಲ ಕಾನೂನುಬಾಹಿರವಾಗಿ ಬಂಧನದಲ್ಲಿ ಇರಿಸಿತ್ತು. ಭಯೋತ್ಪಾದನೆಯನ್ನು ಇಂದು ಬುಷ್ ಸರ್ಕಾರ ವ್ಯಾಖ್ಯಾನಿಸುವಾಗ ಇಂತಹ ನೂರಾರು ಹಿಂದಿನ ಘಟನೆಗಳನ್ನು ಜ್ಞಾಪಿಸಿಕೊಳ್ಳುವುದಿಲ್ಲ; ಆದರೆ ನಾವು ಅವನ್ನು ಮರೆಯಲಾದೀತೆ ? ✡

ನಷ್ಟ ಪರಿಹಾರಕ್ಕಾಗಿ ೧೫ ಬಿಲಿಯ ಡಾಲರ್‌ಗಳ ದೇಣಿಗೆ ನೀಡುವುದಾಗಿ ಘೋಷಿಸಿದೆ. ಆದಾಗ್ಯೂ ಈ ಕ್ಷೇತ್ರದಲ್ಲಿ ಅಗ್ರಸ್ಥಾನದಲ್ಲಿರುವ ನಾರ್ತ್‌ವೆಸ್ಟರ್ನ್ ಲೈನ್ಸ್ ಸಂಸ್ಥೆಯೊಂದೇ ಒಂದು ಲಕ್ಷ ಮಂದಿ ಉದ್ಯೋಗಿಗಳನ್ನು ಮನೆಗೆ ಕಳಿಸಿದೆ. ವಿಮಾನ ತಯಾರಿಕೆಯಲ್ಲಿ ಪ್ರಮುಖ ಉದ್ಯಮವಾಗಿರುವ ಬೋಯಿಂಗ್ ಇದಕ್ಕೆ ಮೊದಲೇ ೩೦,೦೦೦ ಜನರನ್ನು ಕೆಲಸದಿಂದ ತೆಗೆದುಹಾಕುವುದಾಗಿ ಘೋಷಿಸಿತು. ಆರ್ಥಿಕ ಕುಸಿತದಿಂದಾಗಿ ನಷ್ಟಕ್ಕೀಡಾಗಿದ್ದ ವಿಮಾನ ಯಾನ ಸಂಸ್ಥೆಗಳು ಈ ಸಂದರ್ಭವನ್ನು ಬಳಸಿಕೊಂಡು ಸಾರಾಸಗಟು ತಮ್ಮ ಸಿಬ್ಬಂದಿಯನ್ನು ಕಡಿಮೆ ಮಾಡತೊಡಗಿವೆ. ಇದಲ್ಲದೆ ವಿಮಾನಾಪಹರಣದ ಭಯದಿಂದ ಪ್ರಯಾಣಿಕರ ಸಂಖ್ಯೆ ಶೇ. ೫೦ಕ್ಕೂ ಹೆಚ್ಚು ಕಡಿಮೆಯಾಗಿದೆ. ಈ ಸಂಸ್ಥೆಗಳು ಈಗಾಗಲೇ ಟಿಕೇಟು ದರ ಕಡಿಮೆ ಮಾಡಿದ್ದರೂ ಪ್ರಯೋಜನವಾಗಿಲ್ಲ. ಆರ್ಥಿಕ ಸಂಕಷ್ಟ ಹಾಗೂ ಭಯದಿಂದಾಗಿ ಅಮೆರಿಕನ್ನರು ಹೆಚ್ಚಾಗಿ ಪ್ರಯಾಣ ಮಾಡುತ್ತಿಲ್ಲ. ಇದರ ಪರಿಣಾಮವಾಗಿ ಹೋಟೆಲು ಉದ್ಯಮಕ್ಕೆ ಭಾರೀ ಹೊಡೆತ ಬಿದ್ದಿದೆ. ಹೋಟೆಲುಗಳಲ್ಲಿ ಕೋಣೆಗಳು ಕಾಲುಭಾಗವೂ ಭರ್ತಿಯಾಗುತ್ತಿಲ್ಲ. ಹಾಗಾಗಿ ಹಂಗಾಮಿಯಾಗಿ ಹೋಟೆಲುಗಳಲ್ಲಿ ದಿನಗೂಲಿಯ ಮೇಲೆ ಕೆಲಸ ಮಾಡುತ್ತಿದ್ದವರು ಉದ್ಯೋಗವಿಲ್ಲದೆ ಅಲೆಯಬೇಕಾಗಿ ಬಂದಿದೆ. ಅಮೆರಿಕದ ಜನ ದೂರದ ಪ್ರವಾಸಗಳನ್ನು ಕೈಗೊಳ್ಳದಿರುವುದು ಯೂರೋಪಿನ ಪ್ರವಾಸೋದ್ಯಮದ ಮೇಲೂ ಪರಿಣಾಮ ಉಂಟುಮಾಡಿದೆ. ಕಂಪ್ಯೂಟರ್ ಉದ್ಯಮ ಈಗ ಇನ್ನಷ್ಟು ಕುಸಿದಿದೆ.

ವರ್ಷದ ಕೊನೆಯ ಮೂರು ತಿಂಗಳಲ್ಲಿ ಆರ್ಥಿಕ ಪರಿಸ್ಥಿತಿ ಸುಧಾರಿಸಬಹುದೆಂಬ ಆಶಾವಾದ ಈಗ ಇಲ್ಲವಾಗಿದೆ. ಅದರಿಂದಾಗಿ ತಯಾರಿಕಾ ಉದ್ಯಮಗಳಲ್ಲಿ ಕೆಲಸಗಾರರನ್ನು ಸಾಮೂಹಿಕವಾಗಿ ತೆಗೆದುಹಾಕುವುದು ಹೆಚ್ಚಾಗಿ ಕಂಡುಬರುತ್ತಿದೆ. ತೀವ್ರವಾದ ಆಘಾತಕ್ಕೀಡಾಗಿರುವುದು ಆಟೊಮೊಬೈಲ್ ಉದ್ಯಮಗಳು. ಮುಂದಿನ ವರ್ಷದ ಪ್ರಾರಂಭದಲ್ಲಿ ಪರಿಸ್ಥಿತಿ ಉತ್ತಮಗೊಳ್ಳದಿದ್ದರೆ ಈ ಉದ್ಯಮದ ಹಲವು ವಿಭಾಗಗಳು ಮುಚ್ಚುವುದರಲ್ಲಿ ಸಂಶಯವಿಲ್ಲ. ಈಗಾಗಲೇ ಕಂಟ್ರಾಕ್ಟ್ ಕೆಲಸಗಾರರನ್ನು ತೆಗೆದುಹಾಕುತ್ತಿರುವ ಆಟೋಮೊಬೈಲ್ ಸಂಸ್ಥೆಗಳು, ಖಾಯಂ ನೌಕರರಿಗೆ ಸ್ವಯಂ ನಿವೃತ್ತಿ ಪಡೆದುಕೊಳ್ಳಲು ಪ್ರೇರೇಪಿಸುತ್ತಿವೆ. ಅಧಿಕೃತ ಮೂಲಗಳ ಪ್ರಕಾರ ನಿರುದ್ಯೋಗದ ಪ್ರಮಾಣ ಶೇ. ೫ರಷ್ಟಾಗಿದೆ. ಕಳೆದ ಒಂದು ತಿಂಗಳಲ್ಲಿ ಈ ಸಂಖ್ಯೆ ಶೇ. ೧ರಷ್ಟು ಅಧಿಕವಾಗಿದೆ. ಇವೆಲ್ಲದರ ಫಲವಾಗಿ ಆರ್ಥಿಕ ಕ್ಷೇತ್ರದ ಇತರ ವಿಭಾಗಗಳೂ ಆತಂಕಕ್ಕೀಡಾಗಿವೆ. ರಿಯಲ್ ಎಸ್ಟೇಟ್ ಬೆಲೆ ಕುಸಿದಿದೆ. ದೊಡ್ಡ 'ಮಾಲ್'ಗಳು (ನಿತ್ಯೋಪಯೋಗಿ ವಸ್ತುಗಳ ಮಾರಾಟ ಮಳಿಗೆಗಳು) ಕೊಳ್ಳುವವರಿಲ್ಲದೆ ಬಣಬಣಿಸುತ್ತಿವೆ. ಯಾವಾಗಲೂ ಜನರಿಂದ ತುಂಬಿರುತ್ತಿದ್ದ ಈ ಮಳಿಗೆಗಳಲ್ಲಿ ಈಗ ಜನ ಅಷ್ಟಾಗಿ ಕಾಣುವುದಿಲ್ಲ. ಇದಕ್ಕೆ ಮೊದಲು ಕ್ಯಾಷ್ ಕೌಂಟರ್‌ಗಳಲ್ಲಿ ಸರದಿಗಾಗಿ ಸಾಲುಗಟ್ಟಿ ನಿಲ್ಲಬೇಕಾಗಿತ್ತು.

ಭಯೋತ್ಪಾದಕರ ದಾಳಿಯ ಹೆದರಿಕೆ, ಆರ್ಥಿಕ ಕುಸಿತ ಇವುಗಳಿಂದಾಗಿ ಭೀತಿಗೊಂಡಿರುವ ಜನಕ್ಕೆ ಈಗ ಭಯೋತ್ಪಾದಕರಿಂದ ರಾಸಾಯನಿಕ ಅಸ್ತ್ರಗಳ ಪ್ರಯೋಗದ ಭೀತಿ ಆವರಿಸಿದೆ. ಈಗಾಗಲೇ ಜನ ಗ್ಯಾಸ್ ಮಾಸ್ಕ್‌ಗಳನ್ನು ಕೊಳ್ಳತೊಡಗಿದ್ದಾರೆ. ನ್ಯೂಯಾರ್ಕ್ ನಗರದಲ್ಲಿರುವ ಎಂಪೈರ್ ಸ್ಟೇಟ್ ಬಿಲ್ಡಿಂಗ್ (ಅತಿ ಎತ್ತರದ ಹಳೆಯ ಕಟ್ಟಡ) ನೋಡಲು ಪ್ರವಾಸಿಗಳಿಲ್ಲದೆ ಹೆಚ್ಚು ಕಡಿಮೆ ಮುಚ್ಚಿದೆ. ಹಾಗೆಯೇ ಸ್ವಾತಂತ್ರ್ಯದೇವಿಯ ಮೂರ್ತಿ ಇರುವ ಪ್ರದೇಶಕ್ಕೂ ಪ್ರವಾಸಿಗರನ್ನು ಈಗ ಬಿಡುತ್ತಿಲ್ಲ. ಪ್ರಪಂಚದ ಎರಡನೇ ಅತ್ಯಂತ ಎತ್ತರದ ಕಟ್ಟಡ ಎನಿಸಿರುವ ಚಿಕಾಗೋದಲ್ಲಿರುವ ಸಿಯರ್ಸ್ ಟವರ್‌ಅನ್ನು ದಾಳಿಯ ಭೀತಿಯಿಂದಾಗಿ ಮುಚ್ಚಲಾಗಿದೆ. ವಾರಾಂತ್ಯದಲ್ಲಿ ಸಾಮಾನ್ಯವಾಗಿ ಅಮೆರಿಕನ್ನರು ಹೊರಗೆ ಹೋಗಿ ಅಡ್ಡಾಡುವ ಕ್ರಮ ಈಗ ಹೆಚ್ಚಾಗಿ ಕಾಣುತ್ತಿಲ್ಲ. ಕ್ರೀಡಾ ಪಂದ್ಯಗಳು, ಇತರ ಪ್ರದರ್ಶನಗಳು ನಡೆಯುವ ಸ್ಥಳಗಳಲ್ಲಿ ಭದ್ರತಾ ಕ್ರಮಗಳು ಬಿಗಿಯಾಗಿವೆ. ಭಯದ ವಾತಾವರಣ ಎದ್ದು ಕಾಣುತ್ತಿದೆ ಎಲ್ಲೆಲ್ಲೂ. ಅಮೆರಿಕಾದಲ್ಲಿ ಹೀಗೆ ಭಯ ಉತ್ಪಾದನೆಯಾಗುತ್ತಿರುವುದು ಒಂದು ಸಮಕಾಲೀನ ವೈಚಿತ್ರ್ಯ. □□

## ರಾಮ ! ನೀನು ಮರವಾಗು !

ರಾಮ
ನೀನೊಂದು ಮರವಾಗಿ
ನಾಲ್ವರಿಗೆ ನೆರಳು ನೀಡಿದ್ದರೆ ಸಾಕಿತ್ತು
ಈ ರೀತಾಂಬರಿ, ಪೀತಾಂಬರಗಳ
ನಡುವೆ ನರಳುವುದಾದರೂ ತಪ್ಪುತ್ತಿತ್ತು.

ರಾಮ
ನೀನೊಂದು ಮರವಾಗಿ
ಸಾವಿರ ಬೀಜಗಳ ಬಿಟ್ಟು
ಹಸಿರು ಅರಳಿಸಿದ್ದರೆ ಸಾಕಿತ್ತು
ಅಧ್ವಾನ ರಾಜಕಾರಣದ ನಿರಂತರ
ಭಜನೆಯಲ್ಲಿ ಬಳಲುವುದಾದರೂ ತಪ್ಪುತ್ತಿತ್ತು.

ರಾಮ
ನೀನೊಂದು ಮರವಾಗಿ
ಜೋಡಿ ಗುಬ್ಬಚ್ಚಿಗಳ ಗೂಡಿನಲಿ ಮರಿ
ಅರಳಿಸಲು ಮೈಯೊಡ್ಡಿದ್ದರೆ ಸಾಕಿತ್ತು.
ಮೋಹನ ಮುರಳಿಯ ಮೈಮನ
ಗಳ ತುಂಬ ಬಂದೂಕಿನುಗ್ರಾಣವ
ತಪ್ಪಿಸಬಹುದಿತ್ತು.

ರಾಮ
ನೀನೊಂದು ಮರವಾಗಿ
ಹರಿವ ನೀರು ಹಿಡಿದಿಟ್ಟು



ನೆಲ ತಂಪಾಗಿಸಿದ್ದರೆ ಸಾಕಿತ್ತು
ಹೊಟ್ಟೆ ಬಾಕ ಹರಕು
ಕಚ್ಚೆಯ ಸಂತರ ಸಂತೆಯಲಿ ಮೈ
ಮಾರಿಕೊಳ್ಳುವುದಾದರೂ ತಪ್ಪುತ್ತಿತ್ತು.

ರಾಮ
ಮರವಾಗಿದ್ದ
ನೀನೊಂದು ತಪ್ಪಾಗಿ
ಬೇಡನ ಬಾಯಲ್ಲಿ ರಾಮನಾಗಿ
ಸೃಷ್ಟಿಯಾಗಿಬಿಟ್ಟೆ
ಬೇಡದ ಎಷ್ಟೊಂದು ತಪ್ಪುಗಳ
ಸೃಷ್ಟಿಸಿಬಿಟ್ಟೆ.

ಬಿಟ್ಟೆನೆಂದರೂ ಬಿಡದ
ಮಾಯೆಯಾಗಿ ಕಾಡಿಬಿಟ್ಟೆ
ಇರುವ ಸತ್ಯಗಳನ್ನೆಲ್ಲ ಸೀತೆಯಾಗಿಸಿ
ಕಾಡಿಗಟ್ಟಿಬಿಟ್ಟೆ.

ರಾಮ ರಾಮ
ನಿನ್ನ ಪೂರ್ವಜನ್ಮಕ್ಕೆ ನೀನು
ಮರಳಿಬಿಡು
ಮಡದಿ ಮಕ್ಕಳ ಕೂಡ
ವನವಾಸದಲ್ಲೊಂದು ಮರವಾಗಿ
ಉಳಿದುಬಿಡು.

ಬಿ. ಪೀರ್‌ಬಾಷ
ಹೂವಿನ ಹಡಗಲಿ

# ಡಿಸೆಂಬರ್ 17 - ವಾಯುಯಾನಕ್ಕೀಗ 98 ವರ್ಷ

ಎಚ್‌ಎಮ್‌ಟಿ
ಬಹುಮಾನಿತ ಲೇಖನ




# ಕಿಲ್ ಡೆವಿಲ್ ದಿಬ್ಬದ ಮೇಲೆ

ಒಂದೂವರೆ ದಶಕಗಳಿಂದ ವೈಮಾನಿಕ ರಂಗದಲ್ಲಿ ದುಡಿಯುತ್ತಿದ್ದರೂ, ನನ್ನ ಕಛೇರಿಯ ಕಿಟಕಿಯ ಮೂಲಕ, ಮೆಲ್ಲನೆ ನೆಲಬಿಟ್ಟು ಮೇಲೇರಿ ಗಾಳಿಯಲ್ಲಿ ಹಾರುವ ಪ್ರತಿ ವಿಮಾನವನ್ನು ಅಚ್ಚರಿಯಿಂದ ನೋಡುತ್ತೇನೆ. ಮಣಗಟ್ಟಲೆ ಭಾರದ ಈ ಭೂತಾಕಾರದ ವಿಮಾನಗಳು ಗಾಳಿಯಲ್ಲಿ ತೇಲುವ ಬೆರಗು ನನ್ನನ್ನು ಮುಗ್ಧಗೊಳಿಸುತ್ತದೆ. ಇಪ್ಪತ್ತನೇ ಶತಮಾನದ ಅದ್ಭುತ - ವಾಯುಯಾನ. ವಾಯುಯಾನಕ್ಕೆ ನಾಂದಿ ಹಾಡಿದವರು ಪ್ರಾಯೋಗಿಕ ಪ್ರಚಂಡರಾದ ರೈಟ್ ಸಹೋದರರು.

ಕೆಲವು ತಿಂಗಳ ಹಿಂದೆ, ಅಮೆರಿಕದ ಉದ್ದಗಲಕ್ಕೆ ಅಲೆಯ ಹೊರಟಾಗ, ನಾ ನೋಡಲು ಬಯಸಿದ ತಾಣ, ವಾಯುಯಾನದ ಕನಸು ನೆಲಬಿಟ್ಟು ಮುಗಿಲೇರಿದ ಸ್ಥಳವಾದ 'ಕಿಲ್ ಡೆವಿಲ್ ಮರಳು ದಿಬ್ಬ.' ರೈಟ್ ಸಹೋದರರು ಪ್ರಯೋಗಗಳನ್ನು ನಡೆಸಿದ ತಾಣ. ಬಯಸುವುದು ಸುಲಭವಿತ್ತು, ಆದರೆ ತಲುಪುವ ಮಾರ್ಗ ತಿಳಿದಿರಲಿಲ್ಲ. 'ಕಿಲ್ ಡೆವಿಲ್' ಗುಡ್ಡ ನಾರ್ತ್ ಕ್ಯಾರೊಲಿನಾದ 'ಕಿಟ್ಟಿ ಹಾಕ್' ಬಳಿ ಇದೆ ಎಂಬುದನ್ನು ಬಿಟ್ಟರೆ ಬೇರೆ ವಿವರಗಳು ತಿಳಿದಿರಲಿಲ್ಲ. ನಾರ್ತ್ ಕ್ಯಾರೊಲಿನಾ ಭೂಪಟದಲ್ಲಿ 'ಕಿಲ್ ಡೆವಿಲ್ ಹಿಲ್' ಹುಡುಕಿದ್ದಾಯ್ತು. ಆದರೆ ಅಲ್ಲಿಗೆ ರೈಲು, ಬಸ್ಸು ಯಾವ ಸಾರ್ವಜನಿಕ ಸಂಪರ್ಕ ಸಾಧನಗಳೂ ಇರಲಿಲ್ಲ.

ಉತ್ತರ ಕ್ಯಾರೊಲಿನಾದ 'ಔಟರ್ ಬ್ಯಾಂಕ್ಸ್'ನ 'ಬೋಡೀ ದ್ವೀಪ'ಗಳಲ್ಲಿ 'ಕಿಲ್ ಡೆವಿಲ್ ಹಿಲ್ಸ್' ಎಂಬ ಪುಟ್ಟ ನಗರವಿದೆ. ಇದಕ್ಕೆ ಅತ್ಯಂತ ಹತ್ತಿರಕ್ಕೆ ಬರುವ ರೈಲು ನಿಲ್ದಾಣ ವರ್ಜೀನಿಯಾ ರಾಜ್ಯದ 'ನಾರ್‌ಫೋಕ್.' ಸಾರ್ವಜನಿಕ ಸಾರಿಗೆಯ ಅನುಕೂಲವಿಲ್ಲದ ಅಮೆರಿಕದಲ್ಲಿ, ಡಾಲರುಗಳನ್ನು ರೂಪಾಯಿಯಲ್ಲಿ ಎಣಿಸುವ ನಮಗೆ, ಟ್ಯಾಕ್ಸಿ ಬಲು ದುಬಾರಿಯದು. ದೂರವನ್ನು ಸದಾ 'ಗಂಟೆಗಳ ಡ್ರೈವ್'ನಲ್ಲಿ ಹೇಳುವ ಅಮೆರಿಕದಲ್ಲಿ ಕಾರು ಇಲ್ಲವೆಂದರೆ ಕಾಲಿಲ್ಲದಷ್ಟೇ ಕಷ್ಟ. ವರ್ಜೀನಿಯಾದ ನಾರ್‌ಫೋಕ್‌ಗೆ 'ಆಮ್‌ಟ್ರಾಕ್' ರೈಲಿನಲ್ಲಿ ಹೋಗುವುದು, ಅಲ್ಲಿಂದ 'ಕಿಲ್ ಡೆವಿಲ್ ಹಿಲ್'ಗೆ ಟ್ಯಾಕ್ಸಿ ಹಿಡಿಯುವುದು ಎಂದು ಯೋಜಿಸಿದ್ದೆ.

---

**ನೇಮಿಚಂದ್ರ**

---

ಆದರೆ ಈ ಎಲ್ಲ ಕಷ್ಟವನ್ನು ನಿವಾರಿಸಿದವರು ಐದು ತಿಂಗಳಲ್ಲಿ ಆತ್ಮೀಯರಾದ – ರಶ್ಮಿ ಪಟೇಲ್.

ಕಳೆದ ನಾಲ್ಕಾರು ತಿಂಗಳಿಂದ ಸತತ ನಾನು ಸಂಪರ್ಕದಲ್ಲಿದ್ದ ಅಮೆರಿಕದ ಸ್ನೇಹಿತರಲ್ಲಿ ರಶ್ಮಿ ಪಟೇಲ್ ಅವರು ಬಹಳ ಮುಖ್ಯರಾಗಿದ್ದರು. ನಾನು ಕೇಳಿದ ಮಾಹಿತಿಯನ್ನೆಲ್ಲ ಒದಗಿಸಿಕೊಟ್ಟು, ನನ್ನ ಇ-ಪತ್ರಗಳಿಗೆಲ್ಲ ತಟ್ಟನೆ ಉತ್ತರಿಸಿ ಮಾರ್ಗದರ್ಶನ ಮಾಡಿದವರು. ಆರಂಭದಲ್ಲಿ ಅವರಿಗೆ ನನ್ನ ಯೋಜನೆಗಳೆಲ್ಲ ವಿಪರೀತವಾಗಿ ಕಂಡಿದ್ದವು. 'ಉಸಾ ಟಿಕೆಟ್' ಪಡೆದು ಆರಾಮಾಗಿ ವಿಮಾನದಲ್ಲಿ ಹಾರಿ ಪ್ರಯಾಣ ಮಾಡುವ ಬದಲು, ಆಮ್‌ಟ್ರಾಕ್ ಹಿಡಿದು ರೈಲಿನಲ್ಲಿ ಒದ್ದಾಡುವ ಪರಿ ಅರ್ಥವಾಗದೆ ಅಸಮಾಧಾನ ವ್ಯಕ್ತಪಡಿಸಿದ್ದುಂಟು. ಆದರೆ ಅಮೆರಿಕದ ಪಶ್ಚಿಮ ತಟದಲ್ಲಿ ಕಾಲಿಟ್ಟು ಅಲ್ಲಿಂದ ಪೂರ್ವಕ್ಕೆ ನೆಲದ ಮೇಲೆ ಅಲೆದು ಬಂದ ನಮ್ಮ ಪಯಣದ ಒಂದೊಂದೂ ವಿವರಗಳನ್ನು ನಾನು ಇ-ಮೇಲ್ ಮೂಲಕ ತಿಳಿಸುತ್ತಾ ಹೊರಟಂತೆ ಅವರಿಗೆ ನನ್ನ ಮತ್ತು ಮಾಲತಿಯ ಸಹಯಾತ್ರೆಯಲ್ಲಿ ಎಲ್ಲಿಲ್ಲದ ಕುತೂಹಲ ಹುಟ್ಟಿತು. ನಾರ್ತ್ ಕ್ಯಾರೊಲಿನಾದ 'ಶಾರ್ಲೆಟ್' ಎಂಬ ತಾಣದಲ್ಲಿದ್ದ ಅವರ ಮನೆಗೆ ನಾವು ತಲುಪುವ ಹೊತ್ತಿಗೆ ಕಿಲ್ ಡೆವಿಲ್ ಗುಡ್ಡವನ್ನು ನೋಡಲು ಅವರು ನನ್ನಷ್ಟೇ ಕಾತರದಿಂದ ಕಾದಿದ್ದರು. 'ಕಿಲ್ ಡೆವಿಲ್' ನೋಡಲು ಅವರೊಡನೆ ಅವರ ಪತ್ನಿ ಚಾರು ಬೆನ್ ಹಾಗೂ ಮಗಳೂ ಸಿದ್ಧವಾಗಿದ್ದರು !

ಕಿಲ್ ಡೆವಿಲ್, ಶಾರ್ಲೆಟ್‌ನಿಂದ ಸುಮಾರು ಏಳು ಗಂಟೆಗಳ 'ಡ್ರೈವ್' ದೂರದಲ್ಲಿದೆ. ಗಂಟೆಗೆ ನೂರು ಕಿ.ಮೀ. ವೇಗ ಇಲ್ಲಿ ಸಾಮಾನ್ಯ. ೬೪ನೇ ನಂಬರಿನ ಹೆದ್ದಾರಿಯಲ್ಲಿ ಬೆಳಗಿನ ಐದು ಗಂಟೆಗೇ ಹೊರಟಿದ್ದೆವು. ಹೆಚ್ಚು ವಾಹನಗಳಿರಲಿಲ್ಲ. (ಇಲ್ಲಿ ನಾರ್ತ್ ಕ್ಯಾರೊಲಿನಾದ ಪ್ರತಿ ಕಾರಿನ ನಂಬರ್ ಫಲಕದ ಮೇಲೆ 'FIRST IN FLIGHT' ಎಂದು ಬರೆದಿತ್ತು !). ಮಧ್ಯಾಹ್ನದ ಹೊತ್ತಿಗೆ 'ಯು.ಎಸ್. ೬೪' ರಸ್ತೆಗೆ ಇಳಿದಿದ್ದೆವು. ಒಂದಿಷ್ಟು ಕಿರಿದಾದ ಈ ರಸ್ತೆಯಲ್ಲಿ ಹೊರಟಂತೆ, ಮೆಲ್ಲನೆ ಪೈನ್ ವೃಕ್ಷಗಳ ಜವುಗು ಪ್ರದೇಶ ಆರಂಭವಾಗಿತ್ತು. ಈ ಹಾದಿಯಲ್ಲಿ ಸಣ್ಣ ಸಣ್ಣ ಊರುಗಳು. ಸ್ಪ್ರಿಂಗ್ ಹೋಪ್, ಬೆತೆಲ್, ರಾಬರ್‌ಸನ್‌ವಿಲ್, ಜೇಮ್ಸ್‌ವಿಲ್, ಪ್ಲೈಮೌತ್ ದಾಟುತ್ತಿದ್ದಂತೆ ಎಡಭಾಗದಲ್ಲಿ 'ಆಲ್ಬೆಮಾರ್ಲೆ ಸೌಂಡ್' ಎಂಬ ವಿಶಾಲ ಜಲಭಾಗ ಜೊತೆಯಾಯಿತು. ಕೊಲಂಬಿಯಾ ಎಂಬ ಪಟ್ಟಣವನ್ನು ದಾಟಿದ ಸ್ವಲ್ಪ ಹೊತ್ತಿಗೆ 'ಆಲಿಗೇಟರ್ ನದಿ' ಎದುರಾಯಿತು. ಇದು ನಿಜಕ್ಕೂ ನದಿಯಲ್ಲ. ಅಗಲವಾಗಿ ಭೂಪ್ರದೇಶವನ್ನು ಕೊರೆದು ಒಳನುಗ್ಗಿದ ಸಮುದ್ರದ ಹಿನ್ನೀರು. ಈ ಆಲಿಗೇಟರ್ ನದಿ ಒಳ ಕರಾವಳಿಯ ಜಲ ಮಾರ್ಗದ ಒಂದು ಭಾಗ. ಈ 'ನದಿ'ಗೆ ಸುಂದರವಾದ ಏರಿಳಿತದ ಸೇತುವೆ. ಎರಡೂ ಕಡೆ ಕಂದು ತಿರುಗಿ ರಾಡಿಯಾಗಿ ಸಮುದ್ರಮಥನದಂತೆ ಕಡೆದೆದ್ದ ನೀರು. ಈ 'ನದಿ'ಯನ್ನು ದಾಟಿ ಒಂದಿಷ್ಟು ದೂರ ಡ್ರೈವ್ ಮಾಡಿದಂತೆ ಮತ್ತೊಂದು ಸೇತುವೆ ನಮ್ಮನ್ನು ಮುಖ್ಯ ಭೂ ಪ್ರದೇಶದಿಂದ ದಾಟಿಸಿ ಹಿನ್ನೀರ ನಡುವಿನ 'ರೋನೆಕ್' ಎಂಬ ದ್ವೀಪಕ್ಕೆ ಕರೆತಂದಿತು. ಈ ಪೂರ್ವದ ಸಮುದ್ರತೀರಕ್ಕೆ ರೋಚಕ ಇತಿಹಾಸವಿದೆ. ಇದೇ ದ್ವೀಪಕ್ಕೆ ನಾನ್ನೂರು ವರ್ಷಗಳ ಹಿಂದೆ ಇಂಗ್ಲಿಷ್ ವಲಸೆಗಾರರು ಕಾಲೊನಿ ಕಟ್ಟಲು ಬಂದಿದ್ದರು. ರಹಸ್ಯಮಯವಾಗಿ ನಾಪತ್ತೆಯಾಗಿದ್ದರು. ೧೫೮೭ರಲ್ಲಿ ಇಂಗ್ಲೆಂಡ್ ಮೊಟ್ಟಮೊದಲ ಬಾರಿಗೆ ಉತ್ತರ ಅಮೆರಿಕವನ್ನು ಕಾಲೊನಿಯಾಗಿಸಲು ಪ್ರಯತ್ನಿಸಿದ ಜಾಗವಿದು. ಸರ್ ವಾಲ್ಟರ್ ರ್‍ಯಾಲಿಯ 'ರೋನಕ್ ಕಾಲೊನಿ' ಸದ್ದಿಲ್ಲದೆ ಅದೃಶ್ಯವಾಗಿತ್ತು. ಅಟ್ಲಾಂಟಿಕ್ ಸಮುದ್ರದ 'ಔಟರ್ ಬ್ಯಾಂಕ್ಸ್' ಎಂದು ಕರೆಯುವ ಈ ಹೊರದಂಡೆಯನ್ನು 'ಅಟ್ಲಾಂಟಿಕ್ ಸ್ಮಶಾನ' ಎಂದೂ ಕರೆಯುವುದುಂಟು. ಸಮುದ್ರ ಈ ಜಾಗದಲ್ಲಿ ನೂರಾರು ಹಡಗುಗಳನ್ನು ನುಂಗಿಹಾಕಿದೆ. ಆದರೆ ಇದೇ ಪ್ರದೇಶ ೯೮ ವರ್ಷಗಳ ಹಿಂದೆ ವಾಯುಯಾನಕ್ಕೆ ನಾಂದಿಹಾಡಿತು. ಬಹುಕಾಲ ಈ ಪ್ರದೇಶ ಮುಖ್ಯ ಭೂಭಾಗದಿಂದ ಬೇರ್ಪಟ್ಟು ಬೇರೆಯಾಗಿಯೇ ಉಳಿದು ಕೆಲ ಮೀನುಗಾರರಿಗೆ ಮಾತ್ರ ವಾಸಸ್ಥಾನವಾಗಿತ್ತು. ಇದೀಗ ಸೇತುವೆಗಳು, ಫೆರ್ರಿಗಳು, ಜಲಮಾರ್ಗಗಳಿಂದಾಗಿ ಈ ದ್ವೀಪಗಳು ಅಮೆರಿಕದ ಮಂದಿಗೆ ರಜೆ ಕಳೆಯುವ ತಾಣಗಳಾಗಿವೆ.

'ಔಟರ್ ಬ್ಯಾಂಕ್ಸ್' ಎಂಬುದು ಅಟ್ಲಾಂಟಿಕ್ ಸಮುದ್ರದಲ್ಲಿರುವ ಕಿರಿದಗಲದ, ಸುಮಾರು ೧೩೦ ಮೈಲಿ ಉದ್ದದ ನಾಲ್ಕು ತುಂಡು ದ್ವೀಪಗಳು ಸೇರಿದ ಭೂಪ್ರದೇಶ. ಈ ನಾಲ್ಕು ದ್ವೀಪಗಳಲ್ಲಿ 'ಬೋಡೀ ದ್ವೀಪ'ವೂ ಒಂದು. ನಾವು ರೋನಕ್ ದ್ವೀಪದ ಪೂರ್ವ ತುದಿಗೆ ಬಂದು ಮತ್ತೊಂದು ಸೇತುವೆ ದಾಟಿ ಬೋಡೀ ದ್ವೀಪವನ್ನು ಹೊಕ್ಕೆವು. ಬೋಡೀ ದ್ವೀಪದ ಎಡಭಾಗಕ್ಕೆ



ಅಟ್ಲಾಂಟಿಕ್ ಸಮುದ್ರವಿದೆ. ಬಲಭಾಗಕ್ಕೆ 'ಆಲ್ಬೆ ಮಾರ್ಲೆ ಸೌಂಡ್' ಜಲಭಾಗವಿದೆ. 'ಕಿಲ್ ಡೆವಿಲ್ ಹಿಲ್' ಎಂಬ ಪುಟ್ಟ ನಗರಿ ಮತ್ತು ಅದರ ಬಗಲಿನ 'ಕಿಟ್ಟಿ ಹಾಕ್' ಎಂಬ ಸಣ್ಣ ಊರು ಈ ಬೋಡೀ ದ್ವೀಪದ ಮೇಲಿವೆ. ಈ ದ್ವೀಪಗಳು ಖುಷಿ ಕೊಟ್ಟದ್ದು ಅಮೆರಿಕದ ಮತ್ತೆಲ್ಲ ಜಾಗಗಳಂತೆ ಪೂರಾ ಪೂರಾ ವಾಣಿಜ್ಯೀಕರಣಗೊಳ್ಳದೆ ಇನ್ನೂ ಒಂದಿಷ್ಟು ಶಾಂತವಾಗಿವೆ ಎಂಬ ಕಾರಣಕ್ಕೆ. ಸ್ಥಳೀಯ ಇಂಡಿಯನ್ನರ ಕಾಲದಲ್ಲಿದ್ದಂತೆಯೇ ದಟ್ಟವಾಗಿ ಇಲ್ಲಿ ಕಾಡುಗಳಿವೆ. ಮಧ್ಯಾಹ್ನದ ೧೧.೩೦ ಗಂಟೆ, ಬೋಡೀ ದ್ವೀಪದಲ್ಲಿ ಸ್ವಲ್ಪ ದೂರ ಹೋಗುತ್ತಿದ್ದಂತೆ 'ಕಿಲ್ ಡೆವಿಲ್ ಹಿಲ್' ಪಟ್ಟಣ ಕಾಣಿಸಿತು.

ನಾನು 'ಪ್ರವಾಸದ ಪುಸ್ತಕ'ಗಳಲ್ಲಿ ನೋಡಿದಾಗ, 'ರೈಟ್ ಬ್ರದರ್ಸ್ ನ್ಯಾಷನಲ್ ಮೆಮೊರಿಯಲ್'ಗೆ ವಿಚಿತ್ರವಾದ ವಿಳಾಸವಿತ್ತು, 'ಮೈಲ್ ೮, ಯು. ಎಸ್. ೧೫೮' ಎಂದು. ೧೫೮ ಎಂಬುದು ರಸ್ತೆಯ ಅಂಕಿ, ಆದರೆ 'ಮೈಲ್ ೮' ಅರ್ಥವಾದದ್ದು ಇಲ್ಲಿ ತಲುಪಿದ ಮೇಲೆ. ಬೋಡೀ ದ್ವೀಪದಲ್ಲಿ ವಿಳಾಸಗಳನ್ನು 'ರೈಟ್ ಸ್ಮಾರಕ ಸೇತುವೆ'ಯಿಂದ ಈ ತಾಣ ಎಷ್ಟು ಮೈಲಿ ದೂರವಿದೆ ಎನ್ನುವುದರ ಮೇಲೆ ಗುರುತಿಸುತ್ತಾರೆ.

ಮೊದಲು 'ವಿಸಿಟರ್ಸ್ ಸೆಂಟರ್'ಗೆ ಹೋದೆವು. ಇಲ್ಲಿ ರೈಟ್ ಸಹೋದರರು ಹಾರಿಸಿದ ವಿಮಾನದ ಪೂರ್ಣ ಪ್ರಮಾಣದ ಮಾದರಿಯನ್ನು ಪ್ರದರ್ಶನಕ್ಕೆ ಇಟ್ಟಿದ್ದಾರೆ. ಮೂಲ ವಿಮಾನವನ್ನು ವಾಷಿಂಗ್ಟನ್‌ನಲ್ಲಿಯ ಸ್ಮಿತ್‌ಸೋನಿಯನ್ ಸಂಗ್ರಹಾಲಯದಲ್ಲಿ ನೋಡಲಿದ್ದೆವು. ಒಳಹೊಕ್ಕಂತೆ ರಶ್ಮಿ ಪಟೇಲ್, ಅಲ್ಲಿದ್ದ 'ಹಿಸ್ಟಾರಿಯನ್' ಮಿ. ಕಾಲಿನ್ ಎಂಬಾತನಿಗೆ 'ನಾನು ಮತ್ತು ಮಾಲತಿ ವೈಮಾನಿಕ ಇಂಜಿನಿಯರುಗಳೆಂದೂ, ಭಾರತದಿಂದ ಈ ತಾಣವನ್ನು ನೋಡಲು ಬಂದವರೆಂದೂ' ವಿವರಿಸಿದರು. ಆತ ಬಹಳ ಉತ್ಸಾಹದಿಂದ ರೈಟ್ ಸಹೋದರರ ಪ್ರಥಮ ಹಾರಾಟವನ್ನು, ಅವರ ವಿಮಾನ ಕೆಲಸ ಮಾಡುತ್ತಿದ್ದ ರೀತಿಯನ್ನು ವಿವರಿಸತೊಡಗಿದರು.

ಬರೀ ಆಧುನಿಕ ವಿಮಾನಗಳನ್ನು ನೋಡಿ ಅಭ್ಯಾಸವಾದ ನಮಗೆ, ರೈಟ್ ಸಹೋದರರ ವಿಮಾನ ನೋಡುತ್ತಿದ್ದಂತೆ, 'ಅರೆ ಇದನ್ನು ತಿರುಗು ಮುರುಗಾಗಿ ನಿರ್ಮಿಸಿದ್ದಾರಲ್ಲ' ಎನಿಸಿತ್ತು. ಕಾರಣ, ರೈಟ್ ಸಹೋದರರ ಈ ವಿಮಾನದಲ್ಲಿ 'ಎಲಿವೇಟರ್' ಮುಂಭಾಗದಲ್ಲಿದೆ ! ವಿಮಾನವನ್ನು ನೋಡುತ್ತಿದ್ದಂತೆ ಎದ್ದುಕಂಡದ್ದು ಅಲ್ಲಿ ಬಳಸಿದ್ದ ಸೈಕಲ್ ಚೈನುಗಳಂತಹ 'ಪ್ರೊಪೆಲರ್ ಡ್ರೈವ್ ಚೈನ್'ಗಳು. ಈ ಪ್ರಥಮ ವಿಮಾನದಲ್ಲಿ ಚಾಲಕ ಕುಳಿತುಕೊಂಡು ವಿಮಾನ ಹಾರಿಸಿರಲಿಲ್ಲ, ಉದ್ದಕ್ಕೆ ಮುಖಡಿಯಾಗಿ ಮಲಗಿ ಹಾರಿಸಿದ್ದ. ಕೈಯಲ್ಲಿ ವಿಮಾನವನ್ನು 'ಉದ್ದುದ್ದವಾಗಿ ಸ್ಥಿರಗೊಳಿಸಲು' (longitudinal stabilization) ಹಿಡಿದ ಎಲಿವೇಟರ್ ಕಂಟ್ರೋಲ್. ಮಲಗಿದ ಚಾಲಕನ ನಿತಂಬದ ಬಳಿ ಒಂದು ಸಣ್ಣ 'ಹಿಪ್ ಕ್ರೇಡಲ್.' ಇದನ್ನು ತನ್ನ ನಿತಂಬದಿಂದ ದೂಡಿದಾಗ ವಿಮಾನದ 'ರಡ್ಡರ್' ಮತ್ತು 'ರೆಕ್ಕೆಗಳನ್ನು ತಿರುಚಬಲ್ಲ ನಿಯಂತ್ರಣ' ಕೆಲಸ ಮಾಡುತ್ತಿತ್ತು. ರೆಕ್ಕೆಯ ತುದಿಯನ್ನು ತಿರುಚಲು ತಂತಿಗಳನ್ನು ನೆಟ್ಟಿದ್ದರು. ರೆಕ್ಕೆಯನ್ನು ತಿರುಚುವ ಮೂಲಕ 'ಪಾರ್ಶ್ವ ಸಮತೋಲನ'ವನ್ನು (lateral balance) ಸಾಧಿಸಬೇಕಿತ್ತು. ಆತ ವಿವರಿಸುತ್ತಿದ್ದಂತೆ ಹಾರಾಟದ ಕಲ್ಪನೆ ವಾಸ್ತವವಾದ ಅದ್ಭುತ ಕತೆ ನಮ್ಮೆದುರು ತೆರೆದಿತ್ತು.

ಕೇವಲ ಒಂದು ಶತಮಾನದ ಹಿಂದೆ ಮನುಷ್ಯ ಆಕಾಶದಲ್ಲಿ ಹಾರುವುದು ವಿಪರೀತದ ಕಲ್ಪನೆಯಾಗಿ ಕಾಣುತ್ತಿತ್ತು. ವಾಯುಯಾನದ ಯುಗಕ್ಕೆ ನಾಂದಿ ಹಾಡಿದವರು ಅಮೆರಿಕದ ರೈಟ್ ಸಹೋದರರು. ಹವ್ಯಾಸವಾಗಿ ಆರಂಭವಾದ ಹಾರಾಟ ಅವರ ಇಡೀ ಬದುಕನ್ನು ಆವರಿಸಿ ಉತ್ಕಟ ಆಸ್ಥೆಯಾಗಿ ಬೆಳೆಯಿತು.

ರೈಟ್ ಸಹೋದರರು ಕಾಲೇಜು ಕಂಡವರಲ್ಲ. ಆದರೆ ಯಂತ್ರಶಾಸ್ತ್ರದಲ್ಲಿ ಈ ಹುಡುಗರು ಬಲು ಮೇಧಾವಿಗಳು. ಗಂಭೀರ ಸ್ವಭಾವದ ಈ ಹುಡುಗರು ಸದಾ ಓದುತ್ತಿದ್ದರು. ೧೮೯೨ರಲ್ಲಿ ರೈಟ್ ಸಹೋದರರು ಒಂದು ಸೈಕಲ್ ರಿಪೇರಿ ಮತ್ತು ಮಾರಾಟದ ಮಳಿಗೆಯನ್ನು ತೆರೆದರು. ಯಂತ್ರಗಳನ್ನು ಕುರಿತಂತೆ ತಮಗಿದ್ದ ನೈಪುಣ್ಯವನ್ನು ಬಳಸಿಕೊಂಡು ಬಲುಬೇಗ ಯಶಸ್ವಿಯಾದರು. ತಮ್ಮದೇ ಸೈಕಲ್ಲುಗಳನ್ನು ಜೋಡಿಸಿ, ಸ್ವತಃ ಮಾಡಿದ ಸಲಕರಣೆಗಳನ್ನು ಬಳಸಿ, ಅವುಗಳ ವಿನ್ಯಾಸವನ್ನು ಸುಧಾರಿಸಿದರು.

ಇದೇ ಸಮಯದಲ್ಲಿ ಜಗತ್ತಿನ ಅನೇಕ ಕಡೆ ಮನುಷ್ಯನ ಹಾರಾಟದ ಕನಸು ನನಸಾಗುವ ಹಾದಿಯತ್ತ ಪ್ರಯೋಗಗಳು ನಡೆದಿದ್ದವು. ಹಕ್ಕಿಗಳು ಗಾಳಿಯಲ್ಲಿ ವಿಮಾನದಂತೆಯೇ ಹಾರುತ್ತವೆ. ಗಾಳಿಯ ಒತ್ತಡ ಅವುಗಳ ಪ್ರತಿಯೊಂದು ಪುಕ್ಕವನ್ನೂ ಸಣ್ಣ ನೋಂದಣಿಯ (propeller) ಆಕಾರಕ್ಕೆ ತಿರುಚುತ್ತದೆ. ಹಕ್ಕಿಯಂತೆ ಹಾರುವುದು ಮನುಷ್ಯನಿಗೆ ಅಸಾಧ್ಯದ ಕನಸಾಗಿತ್ತು. ಅತಿ ಸರಳವಾಗಿ ಕಾಣುವ ಹಕ್ಕಿಯ ರೆಕ್ಕೆಯ ಬಡಿತ, ಕ್ಲಿಷ್ಟ ವೈಮಾನಿಕ ತತ್ತ್ವಗಳನ್ನು, ಸಿದ್ಧಾಂತಗಳನ್ನು ಒಳಗೊಂಡಿತ್ತು.

ಓಟೋ ಲಿಲಿನ್‌ಥಾಲ್ ಹಾರಾಟದ ಚರಿತ್ರೆಯಲ್ಲಿ ದೊಡ್ಡ ಹೆಸರು. ಆತ ಹಕ್ಕಿಯ ರೆಕ್ಕೆ ಬಡಿತವನ್ನು ಅಧ್ಯಯನ ಮಾಡಿ ಅರ್ಥಮಾಡಿಕೊಂಡಿದ್ದ. ಸ್ಥಿರ ರೆಕ್ಕೆಯ ನೇತಾಡುವ ಗ್ಲೈಡರ್ ಜೊತೆಗೆ ಅನೇಕ ಪ್ರಯೋಗಗಳನ್ನು ಮಾಡಿದ. ಹದಿನೆಂಟು ವಿವಿಧ ಬಗೆಯ ಗ್ಲೈಡರುಗಳನ್ನು ನಿರ್ಮಿಸಿ ಹಾರಿಸಿದ. ಆದರೆ ೧೮೯೬, ಆಗಸ್ಟ್ ೯ರ ಮುಂಜಾನೆ ತನ್ನ ಗ್ಲೈಡರಿನಲ್ಲಿ ಹಾರುವಾಗ ನೆಲದಿಂದ ೧೫ ಮೀಟರುಗಳಷ್ಟು ಎತ್ತರದಲ್ಲಿದ್ದ. ತಟ್ಟನೆ ಉದ್ಭವವಾದ ಸುಳಿಗಾಳಿಯೊಂದು ಗ್ಲೈಡರಿನ ಮುಂಭಾಗವನ್ನು ಮೇಲೆತ್ತಿತು. ಹತೋಟಿ ತಪ್ಪಿ ನೆಲಕ್ಕಪ್ಪಳಿಸಿ ಬಿದ್ದ ಲಿಲಿನ್‌ಥಾಲ್ ಬೆನ್ನುಮೂಳೆ ಮುರಿದು, ಮರುದಿನ ಆಸ್ಪತ್ರೆಯಲ್ಲಿ ಮೃತಪಟ್ಟ.

೧೮೯೦ರ ಈ ದಶಕದಲ್ಲಿ ರೈಟ್ ಸಹೋದರರು ಲಿಲಿನಥಾಲ್‌ನ ಯಶಸ್ವೀ ಗ್ಲೈಡರ್ ಪ್ರಯೋಗಗಳನ್ನು ಕುತೂಹಲದಿಂದ ಗಮನಿಸುತ್ತಾ ಬಂದಿದ್ದರು. ಅಪಘಾತದಲ್ಲಿ ಲಿಲಿನ್‌ಥಾಲ್ ತೀರಿಕೊಂಡ ಸುದ್ದಿ ಕೇಳಿ ಅವರಿಗೆ ಆಘಾತ. ಇದೀಗ ಈ ಸೋದರರಿಬ್ಬರೂ ಹಾರುವ ಯಂತ್ರದ ಸಮಸ್ಯೆಗಳ ಬಗ್ಗೆ ಯೋಚಿಸತೊಡಗಿದರು. ವಾಯುಚಲನ ಶಾಸ್ತ್ರವನ್ನು (aerodynamics) ಕುರಿತಂತೆ ಇದ್ದ ಅಲ್ಪ ಸ್ವಲ್ಪ ವೈಜ್ಞಾನಿಕ ಮಾಹಿತಿಯನ್ನು ಓದಿಕೊಂಡರು. ೧೮೯೯ರಿಂದ ಗಾಳಿಪಟ ಮತ್ತು ಗ್ಲೈಡರ್‌ಗಳೊಡನೆ ತಮ್ಮ ಬಿಡುವಿನ ಸಮಯದಲ್ಲಿ ಪ್ರಯೋಗಗಳನ್ನು ಮಾಡತೊಡಗಿದರು. ಹಾರಾಟದ ಅವರ ಗೀಳು ಅವರ ಇಡೀ ಬದುಕನ್ನೇ ಆವರಿಸಿ ನಿಂತಿತು. ಈ ಸೋದರರಿಬ್ಬರೂ ವಿವಾಹವಾಗಲಿಲ್ಲ.

ಒಂದೆಡೆ ರೈಟ್ ಸಹೋದರರು ಹಾರಾಟದ ಪ್ರಯೋಗಗಳಲ್ಲಿ ತೊಡಗಿದ್ದಂತೆ ಇನ್ನೊಂದೆಡೆ ಸ್ಮಿತ್‌ಸೋನಿಯನ್ ಸಂಸ್ಥೆಗೆ ಕಾರ್ಯದರ್ಶಿಯಾಗಿದ್ದ ಪ್ರಸಿದ್ಧ ವಿಜ್ಞಾನಿ ಡಾ॥ ಸ್ಯಾಮುಯಲ್ ಲ್ಯಾಂಗ್ಲೆಗೆ 'ಮನುಷ್ಯನನ್ನು ಹೊತ್ತು ಹಾರಬಲ್ಲ ವಿಮಾನ' ತಯಾರಿಸಲೆಂದು ೫೦,೦೦೦ ಡಾಲರುಗಳನ್ನು ನೀಡಲಾಗಿತ್ತು. ೧೯೦೩ರ ಅಕ್ಟೋಬರಿನ ಹೊತ್ತಿಗೆ ಲ್ಯಾಂಗ್ಲೆಯ 'ಏರೋಡ್ರೋಮ್' ಎಂದು ಹೆಸರಿಟ್ಟ ವಿಮಾನ ಪರೀಕ್ಷಣಾ ಹಾರಾಟಕ್ಕೆ ಸಿದ್ಧವಾಗಿತ್ತು. ಈ ವಿಮಾನವನ್ನು ಬೃಹತ್ ಕವಣೆಯಿಂದ ಎಸೆದು ಹಾರಿಸುವ ಯೋಜನೆಯಿತ್ತು. ಪ್ರಯೋಗ ಯಶಸ್ವಿಯಾಗಲಿಲ್ಲ. ದುರ್ಘಟನೆಯಲ್ಲಿ ಲ್ಯಾಂಗ್ಲೆ ಬದುಕುಳಿದ. ಮತ್ತೆರಡು ತಿಂಗಳಿಗೆ ರೈಟ್ ಸಹೋದರರಿಗೆ ಆ ಯಶಸ್ಸು ಕೈಗೆಟುಕಿದಾಗ ಲ್ಯಾಂಗ್ಲೆ ಸಂಪೂರ್ಣ ಹತಾಶನಾದ.

೧೮೯೯ರಲ್ಲಿ ದ್ವಿಫಲಕ ಗಾಳಿಪಟಗಳನ್ನು ನಿರ್ಮಿಸಿ ಹೊರಟ ರೈಟ್ ಸಹೋದರರು ಸುಸಂಬದ್ಧ ಪ್ರಯೋಗಗಳಿಂದ ಯಶಸ್ಸಿನ ಹಾದಿಗಿಳಿದವರು. ಉನ್ನತ ವ್ಯಾಸಂಗವನ್ನೇನೂ ಪಡೆದಿರದ ರೈಟ್ ಸಹೋದರರು ನಿಜವಾದ ಅರ್ಥದಲ್ಲಿ ಪ್ರಾಯೋಗಿಕ ವಿಜ್ಞಾನಿಗಳು. ಅಲ್ಲಿಯವರೆಗೂ ಹಾರಾಟಕ್ಕಿದ್ದ ತೊಂದರೆಗಳನ್ನು ಕುರಿತು ಚಿಂತಿಸಿದರು. ರೆಕ್ಕೆಯ ನಿರ್ಮಾಣದಲ್ಲಿ ತೊಂದರೆಗಳಿದ್ದವು. ವಿಮಾನವನ್ನು



*'ಕಿಲ್ ಡೆವಿಲ್ ಹಿಲ್' ನಲ್ಲಿ ಪ್ರದರ್ಶನಕ್ಕಿರುವ ರೈಟ್ ಸಹೋದರರ ವಿಮಾನದ ಮಾದರಿ.*
*ಸೈಕಲ್ ಚೈನ್‌ನಂತಹ 'ಪ್ರೊಪೆಲರ್ ಡ್ರೈವ್ ಚೈನ್' ಗಮನಿಸಿ.*

ಗಾಳಿಯಲ್ಲಿ ಮುಂದಕ್ಕೆ ನೂಕಲು ಶಕ್ತಿಯ ಉತ್ಪನ್ನ ಹಾಗೂ ಅಳವಡಿಕೆಯ ತೊಂದರೆಗಳಿದ್ದವು. ಲಿಲಿನ್‌ಥಾಲ್‌ನಂತೆಯೇ ಹಕ್ಕಿಗಳನ್ನು ಗಮನಿಸಿದ ರೈಟ್ ಸಹೋದರರು, ಹಕ್ಕಿಗಳು, ಸುಳಿಗಾಳಿಗೆ ಸಿಕ್ಕಿದಾಗ ತಮ್ಮ ರೆಕ್ಕೆಯ ತುದಿಯನ್ನು ತಿರುಚಿ ಸಮತೋಲನವನ್ನು ಪಡೆಯುತ್ತವೆಂಬುದನ್ನು ಗಮನಿಸಿದರು. ಗಾಳಿಪಟಗಳಾಚೆ, ಗ್ಲೈಡರ್‌ಗಳೊಡನೆ ಪ್ರಯೋಗ ನಡೆಸಿ, ರೈಟ್ ಸಹೋದರರು ರೆಕ್ಕೆ ತಿರುಚುವ ತಾಂತ್ರಿಕತೆಯನ್ನು ಅಳವಡಿಸಿದರು. ಈ ಎಲ್ಲ ಅನುಭವಗಳನ್ನು ಹಿಂದಿಟ್ಟುಕೊಂಡ ರೈಟ್ ಸಹೋದರರು ವಾಸ್ತವವಾಗಬಲ್ಲ ಶಕ್ತಿ ಚಾಲಿತ ಹಾರಾಟದ ಯಂತ್ರದ ನಿರ್ಮಾಣಕ್ಕೆ ಕೈಹಾಕಿದರು.

೧೯೦೦ರಲ್ಲಿ ವಿಲ್ಬರ್ ತನ್ನ ಗ್ಲೈಡರ್ ಪರೀಕ್ಷೆಗೆ ಸೂಕ್ತ ಜಾಗವನ್ನು ಹುಡುಕುತ್ತಿದ್ದ. ವಾಷಿಂಗ್ಟನ್‌ನ 'ವೆದರ್ ಬ್ಯೂರೋ'ದಿಂದ ಗಾಳಿಯ ವೇಗವನ್ನು ಕುರಿತ ದಾಖಲೆಗಳನ್ನು ಪಡೆದು ಅಧ್ಯಯನ ಮಾಡಿದಾಗ 'ಕಿಟ್ಟಿ ಹಾಕ್' ಅತ್ಯಂತ ಸೂಕ್ತ ತಾಣವಾಗಿ ಕಂಡಿತು. ಸೆಪ್ಟೆಂಬರ್ ೧೯೦೦ರಲ್ಲಿ ವಿಲ್ಬರ್ ಕಿಟ್ಟಿ ಹಾಕ್‌ಗೆ ಪ್ರಯಾಣ ಬೆಳೆಸಿದ. ಆರ್ವಿಲ್ ಹಿಂಬಾಲಿಸಿದ. ನೂರು ವರ್ಷಗಳ ಹಿಂದೆ ಈ ಸಣ್ಣ ಹಳ್ಳಿಯನ್ನು ತಲುಪುವುದು ಸುಲಭವಿರಲಿಲ್ಲ. ಸಮಯ, ಸಹನೆ ಎರಡೂ ಬೇಕಿತ್ತು. ಇಂದಿನಂತೆ ಸೇತುವೆಗಳಿರಲಿಲ್ಲ. ಮುಖ್ಯ ಭೂಭಾಗದಿಂದ ಹೊರದಂಡೆಯ ಈ ದ್ವೀಪಗಳನ್ನು ತಲುಪಲು 'ಆಲ್ಬೆಮಾರ್ಲೆ ಸೌಂಡ್' ಜಲ ಭಾಗವನ್ನು ದೋಣಿಯಿಂದ ದಾಟಬೇಕಿತ್ತು. ವಾರಕ್ಕೊಮ್ಮೆ ಮಾತ್ರ ಹೊರಡುವ ದೋಣಿ! ವಿಲ್ಬರ್ 'ಎಲಿಜಬೆತ್ ಸಿಟಿ' ಎಂಬಲ್ಲಿಗೆ ರೈಲಿನಲ್ಲಿ ಬಂದು ಇಳಿದ. ಇಲ್ಲಿ ಬಂದು 'ಕಿಟ್ಟಿ ಹಾಕ್'ಗೆ ಹೋಗುವುದು ಹೇಗೆಂದು ಕೇಳಿದರೆ ಯಾರಿಗೂ ಅದೆಲ್ಲಿದೆ ಎಂದೇ ತಿಳಿದಿರಲಿಲ್ಲ. ನಾವೇನಾದರೂ ರೈಲಿನಲ್ಲಿ ಬಂದಿದ್ದರೆ ನೂರು ವರ್ಷದ ನಂತರವೂ, ನಮ್ಮದೂ ವಿಲ್ಬರ್‌ನ ಪಾಡೇ ಆಗುತ್ತಿತ್ತು. 'ಕ್ಯಾನ್ಸಾಸ್ ಸಿಟಿ'ಯಲ್ಲಿ ರೈಲಿನಲ್ಲಿ ಇಳಿದ ನಾವು ರೈಲು ನಿಲ್ದಾಣ, ಬಸ್ಸು ನಿಲ್ದಾಣ ಎಲ್ಲಿ ಹೋಗಿ ವಿಚಾರಿಸಿದರೂ ಅವರಿಗೆ ೩೦ ಮೈಲಿ ದೂರದ 'ಅಚಿಸನ್' ನಗರ ಎಲ್ಲಿದೆ ಎಂದು ಗೊತ್ತಿರಲಿಲ್ಲ! ಅದು ಪ್ರಸಿದ್ಧ ವೈಮಾನಿಕೆ ಅಮಿಲಿಯಾ ಎರ್‌ಹಾರ್ಟ್‌ಳ ಜನ್ಮಸ್ಥಳ.

ಅಂತೂ ವಿಲ್ಬರ್, ಕಿಟ್ಟಿ ಹಾಕ್ ತಲುಪಿದ. ರೈಟ್ ಸಹೋದರರು ತಮ್ಮ ಗ್ಲೈಡರ್ ಹಾರಾಟದ ಪ್ರಯೋಗಗಳನ್ನು ನಡೆಸಿದರು. ೧೯೦೩ರ ಹೊತ್ತಿಗಾಗಲೇ ರೈಟ್ ಸಹೋದರರು ಹಾರುವ ಯಂತ್ರದೊಳಗೆ ನಿಯಂತ್ರಣ ವ್ಯವಸ್ಥೆಯನ್ನೂ ನಿರ್ಮಿಸಿದ್ದರು. ಡಿಸೆಂಬರ್ ೧೪, ೧೯೦೩ ಕಿಲ್ ಡೆವಿಲ್ ಹಿಲ್‌ನ ಮರಳುದಿಬ್ಬದ ಮೇಲೆ ವಿಲ್ಬರ್ ಮೆಲ್ಲನೆ ತನ್ನ ೩೩೮ ಕೆ.ಜಿ. ತೂಕದ, ೧೩ ಅಶ್ವ ಶಕ್ತಿಯ ಇಂಜಿನ್ ಪಡೆದಿದ್ದ 'ಫ್ಲೈಯರ್ ೧'ರೊಡನೆ ಹಾರಿದ. ಆದರೆ ವಿಮಾನ ಮೂತಿ ಮೇಲೆತ್ತಿ ನಿಂತಿತು. ವಿಲ್ಬರ್ ಅದನ್ನು ಸರಿಪಡಿಸಲು ಹೋದಾಗ ಮೂತಿ ತೀರಾ ಬಾಗಿ ನೆಲಕ್ಕಪ್ಪಳಿಸಿ ಮರಳಿನಲ್ಲಿ ಹುದುಗಿಕೊಂಡಿತು. ಅದೃಷ್ಟಕ್ಕೆ ವಿಲ್ಬರ್‌ಗೆ ಅಪಾಯವಾಗಿರಲಿಲ್ಲ. ಛಲಬಿಡದ ಸೋದರರು ೪೮ ಗಂಟೆಗಳಲ್ಲಿ ವಿಮಾನದ ರಿಪೇರಿ ಮುಗಿಸಿ ಮತ್ತೆ ಹಾರಲು ಹೊರಟರು. ಡಿಸೆಂಬರ್ ೧೭, ೧೯೦೩ರ ಕೊರೆವ ಚಳಿಯ ಮುಂಜಾನೆ. ಉತ್ತರದ ಸುಳಿಗಾಳಿ ತೀಡಿ ಬರುತ್ತಿತ್ತು. ರೈಟ್ ಸಹೋದರರು ಕ್ಯಾಮೆರಾ ಒಂದನ್ನು ಸಜ್ಜುಗೊಳಿಸಿ, ನಿಂತ ಪ್ರೇಕ್ಷಕರೊಬ್ಬರಿಗೆ ಫೋಟೋ




ತೆಗೆಯಲು ಹೇಳಿದರು. ಇದೀಗ ಆರ್ವಿಲನ ಸರದಿ. ಗಂಟೆಗೆ ೧೩ ಕಿಲೋಮೀಟರ್ ವೇಗದಲ್ಲಿ ೧೨ ಸೆಕೆಂಡುಗಳ ಕಾಲ ಹಾರಿ, ೧೨೦ ಅಡಿ ದೂರಕ್ಕೆ ಸಾಗಿ ಇಳಿದ. ಐತಿಹಾಸಿಕ ಘಟನೆಯಿದು. ಆರ್ವಿಲ್ ಮನುಷ್ಯನ ಮೊಟ್ಟಮೊದಲ ಶಕ್ತಿಚಾಲಿತ ಹಾರಾಟವನ್ನು ಸಾಧಿಸಿ ಚರಿತ್ರೆ ನಿರ್ಮಿಸಿದ.

ಈ ಚಾರಿತ್ರಿಕ ಹಾರಾಟವನ್ನು ಒಂದೆರಡು ಪತ್ರಿಕೆಗಳು ಮಾತ್ರ ಅನುಮಾನದಿಂದ ಬಿತ್ತರಿಸಿದವು. ಮೊಟ್ಟಮೊದಲ ವಿಮಾನ ಹಾರಾಟ ಏನೊಂದೂ ಸುದ್ದಿ ಮಾಡಲಿಲ್ಲ. ಮತ್ತೆ ಐದು ವರ್ಷಗಳು ಕಳೆಯಬೇಕಿತ್ತು, ಅಮೆರಿಕಾ ನಿಜಕ್ಕೂ ರೈಟ್ ಸಹೋದರರು ಹಾರಿದರೆಂದು ನಂಬಲು! ಡಾ॥ ಲ್ಯಾಂಗ್ಲೆಯ ವೈಫಲ್ಯದ ಬಗ್ಗೆ ಮಾತನಾಡುತ್ತಿದ್ದ ವೈಜ್ಞಾನಿಕ ಜಗತ್ತು ರೈಟ್ ಸಹೋದರರ ಯಶಸ್ಸನ್ನು ಗುರುತಿಸಲೇ ಇಲ್ಲ. ಅದರಲ್ಲೂ ವಿಜ್ಞಾನಿಗಳಿಗೆ ತಾವು ಸೋತಲ್ಲಿ ಇಬ್ಬರು ಅನಾಮಧೇಯ ಸೈಕಲ್ ದುರಸ್ತಿಕಾರರು ಗೆಲುವು ಪಡೆದದ್ದು ನಂಬುವಂತಿರಲಿಲ್ಲ.

ಮೊಟ್ಟಮೊದಲು ಹಾರಿದ ರೈಟ್ ಸಹೋದರರ ವಿಮಾನ ಅಮೆರಿಕಾದ ಹೆಮ್ಮೆಯ ರಾಷ್ಟ್ರೀಯ ಸ್ಮಾರಕವಸ್ತುವಾಗಬೇಕಿತ್ತು. ಆದರೆ ರೈಟ್ ಸಹೋದರರ ವಿಮಾನವನ್ನು ವರ್ಷಗಟ್ಟಲೆ ಉಪೇಕ್ಷಿಸಿ ಮೂಲೆಗೆ ಎಸೆದರು. ಸ್ಮಿತ್‌ಸೋನಿಯನ್ ಸಂಸ್ಥೆಯಲ್ಲಿ ಲ್ಯಾಂಗ್ಲೆಯ ಪುನರ್‌ನಿರ್ಮಿತ 'ಏರೋಡ್ರೋಮ್'ನ ಮೇಲೆ 'ಮನುಷ್ಯನನ್ನು ಹೊತ್ತು ಹಾರಿದ ಮೊಟ್ಟಮೊದಲ ಯಶಸ್ವೀ ವಿಮಾನ'ವೆಂದು ಬರೆಯಲಾಗಿತ್ತು. ಅದನ್ನು ನಿರಾಕರಿಸಿದ ಆರ್ವಿಲ್ ತನ್ನ ವಿಮಾನವನ್ನು ಸಂಸ್ಥೆಗೆ ಕೊಡಲು ನಿರಾಕರಿಸಿದ. ೧೯೨೮ರಲ್ಲಿ ಆರ್ವಿಲ್ ತನ್ನ ವಿಮಾನವನ್ನು ಇಂಗ್ಲೆಂಡಿನ 'ಸಯನ್ಸ್ ಮ್ಯೂಸಿಯಂ'ಗೆ ನೀಡಿದ. ಕೊನೆಗೆ ೧೯೪೨ರಲ್ಲಿ ಆರ್ವಿಲ್ ಮತ್ತು ಸ್ಮಿತ್‌ಸೋನಿಯನ್ ಸಂಸ್ಥೆಯ ನಡುವೆ ರಾಜಿಯಾಗಿ, ಆರ್ವಿಲ್ ಎರಡನೇ ಮಹಾಯುದ್ಧ ಕೊನೆಗೊಂಡ ಮೇಲೆ ತನ್ನ ವಿಮಾನವನ್ನು ಸುರಕ್ಷಿತವಾಗಿ ಅಮೆರಿಕಕ್ಕೆ ಹಿಂತಿರುಗಿಸುವಂತೆ ಲಂಡನ್‌ನ 'ಸಯನ್ಸ್ ಮ್ಯೂಸಿಯಂ' ಅನ್ನು ಕೇಳಿಕೊಂಡ. ಆರ್ವಿಲನ ಮರಣದ ನಂತರ ೧೯೪೮ರಲ್ಲಿ ರೈಟ್ ಸಹೋದರರ ವಿಮಾನ ಅಮೆರಿಕೆಗೆ ಆಗಮಿಸಿತು. ಇಂದು ವಾಷಿಂಗ್ಟನ್‌ನ ಸ್ಮಿತ್‌ಸೋನಿಯನ್ 'ನ್ಯಾಷನಲ್ ಏರ್ ಅಂಡ್ ಸ್ಪೇಸ್ ಮ್ಯೂಸಿಯಂ'ನಲ್ಲಿ ರೈಟ್ ಸಹೋದರರ ವಿಮಾನವನ್ನು ಎತ್ತರದ ಸ್ಥಾನದಲ್ಲಿ ಹೆಮ್ಮೆಯಿಂದ ತೂಗಿಬಿಟ್ಟಿದ್ದಾರೆ.

'ವಿಸಿಟರ್ಸ್ ಸೆಂಟರ್'ನಿಂದ ಹೊರಬಂದೆವು. ೧೯೨೭ರಲ್ಲಿಯೇ ರೈಟ್ ಸಹೋದರರ ಸಾಧನೆಯನ್ನು ಸ್ಮಾರಕವಾಗಿ ಸ್ಥಾಪಿಸಲು 'ಕಿಲ್ ಡೆವಿಲ್ ಹಿಲ್ಸ್ ಮಾನ್ಯುಮೆಂಟ್ ನ್ಯಾಷನಲ್ ಮೆಮೊರಿಯಲ್' ನಿರ್ಮಿಸಲು ಅನುಮತಿ ದೊರಕಿತ್ತು. ೧೯೫೩ರಲ್ಲಿ ಇದರ ಹೆಸರನ್ನು 'ರೈಟ್ ಬ್ರದರ್ಸ್ ನ್ಯಾಷನಲ್ ಮೆಮೊರಿಯಲ್' ಎಂದು ಬದಲಾಯಿಸಲಾಯಿತು. ೪೨೫ ಎಕರೆಯ ಈ ಸ್ಮಾರಕ ಸ್ಥಳ ರೈಟ್ ಸಹೋದರರ ಪ್ರಥಮ ಬಾರಿಯ ನಾಲ್ಕು ವಿಮಾನ ಹಾರಾಟದ ಪ್ರದೇಶವನ್ನೂ ಅವರ ಗ್ಲೈಡರ್ ಪ್ರಯೋಗಗಳ ತಾಣವನ್ನೂ ಒಳಗೊಂಡಿದೆ.

'ವಿಸಿಟರ್ಸ್ ಸೆಂಟರ್'ನಿಂದ ಕಾಲು ಮೈಲಿ ದೂರವಿದ್ದ ಕಿಲ್ ಡೆವಿಲ್ ಗುಡ್ಡದ ಬಳಿಗೆ ನಡೆದುಬಂದೆವು. ಗುಡ್ಡವನ್ನು ಹತ್ತುತ್ತಿದ್ದಂತೆ ಎಂತಹ ರಭಸದ ಗಾಳಿ! ತುತ್ತತುದಿಯಲ್ಲಿ ನಿಂತಾಗ ಗಾಳಿ ಭೋರಿಟ್ಟು ಬಡಿಯುತ್ತಿತ್ತು. ಬೀಸಿದ ಗಾಳಿಗೆ ಸದಾ ಸರಿದಾಡುವ, ೨೬ ಎಕರೆ ಹರಡಿ ನಿಂತ, ೯೦ ಅಡಿ ಎತ್ತರದ ಈ ಬೃಹತ್ ಮರಳು ದಿಬ್ಬವನ್ನು ೧೯೨೯ರಲ್ಲಿ ಮರಳು ಮಣ್ಣಿನಲ್ಲಿ ಬೆಳೆಯುವ ವಿಶೇಷ ಹುಲ್ಲನ್ನು ನೆಟ್ಟು ನೆಲೆ ನಿಲ್ಲಿಸಿದರು. ೧೯೩೨ರಲ್ಲಿ ದಿಬ್ಬದ ತುದಿಯಲ್ಲಿ ಮುಗಿಲು ಚುಂಬಿಸಿ ನಿಂತ ೬೦ ಅಡಿ ಎತ್ತರದ ಬೂದು ಬಣ್ಣದ ಬೆಣಚುಕಲ್ಲಿನ ಸುಂದರ ಸ್ಮಾರಕವನ್ನು ಕೆತ್ತಿ ನಿಲ್ಲಿಸಿದರು. ಸ್ಮಾರಕದ ಪಕ್ಕೆಗಳು ತೆರೆದ ರೆಕ್ಕೆಗಳಿಂದ ಅಲಂಕೃತವಾಗಿದ್ದು, ದೂರದಿಂದ ನೋಡಿದರೆ, ಬೃಹತ್ ಪಕ್ಷಿಯೊಂದು 'ಇದೋ ಹಾರಲಿದೆ' ಎಂಬ ಭಾವ. ಸುತ್ತಲೂ ಕಣ್ಣು ಹಾಯಿಸಿದೆವು, ಅಟ್ಲಾಂಟಿಕ್ ಮಹಾಸಾಗರ, ಆಲ್ಬೆಮರ್ಲೆ ಸೌಂಡ್ ಜಲಭಾಗದ ಅದ್ಭುತ ದೃಶ್ಯ! ಮನುಷ್ಯನ ಹಾರುವ ಕಲ್ಪನೆ ವಾಸ್ತವವಾದ ದಿಬ್ಬದ ನೆತ್ತಿಯಲ್ಲಿ ನಿಂತಂತೆ ಪುಳಕಿತರಾದೆವು.

ನೇಮಿಚಂದ್ರ,
ನಂ. ೪೦೧, 'ವಿಜಯ ಟವರ್ಸ್', ಆರ್. ಪಿ. ಸಿ. ಲೇಔಟ್
ವಿಜಯನಗರ ೨ನೇ ಹಂತ, ಬೆಂಗಳೂರು - ೫೬೦ ೦೪೦

# ಸರ್ವರಿಗೂ 46ನೇ ಕರ್ನಾಟಕ ರಾಜ್ಯೋತ್ಸವ ಶುಭಾಶಯಗಳು

ಬಾಂಧವ್ಯದ ಬೆಸುಗೆಯಾಗಿ
ಸಂಸ್ಕೃತಿಯ ಸೊಗಡಾಗಿ
ಕಸ್ತೂರಿಯ ಕಂಪಾಗಿ
ಸಂಪತ್ತಿನ ನೆಲೆಯಾಗಿ
ಮಾನವ ಕುಲಕೋಟಿಗೆ ಮಂಗಳ ಹರಸುವ
ವೀಣಾಪಾಣಿಯ ವಾಣಿ - ಕನ್ನಡ ನುಡಿ ಕಾಣಿ

"ನಮ್ಮ ಚೆಲುವ ಕನ್ನಡ ನಾಡು ಉದಯಿಸಿ ಇಂದಿಗೆ 45 ವರ್ಷಗಳು ಸಂದಿವೆ. ಕನ್ನಡಾಂಬೆಯ ಕೀರ್ತಿ ನಾಲ್ಕೂ ದಿಸೆಗಳಲ್ಲಿ ಪ್ರಸರಿಸುತ್ತಿರುವುದು ಹೆಮ್ಮೆಯ ವಿಷಯ. ಕರ್ನಾಟಕ ರಾಜ್ಯೋತ್ಸವದ ಈ ಶುಭದಿನದಂದು ಕರ್ನಾಟಕದ ಕುಲಕೋಟಿಗೆ ನನ್ನ ಹಾರ್ದಿಕ ಶುಭಾಶಯಗಳು"

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು

## ಕರ್ನಾಟಕದಲ್ಲಿ ಕನ್ನಡಕ್ಕೆ ಭದ್ರ ನೆಲೆಗಟ್ಟು
## ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸಲಹೆಗಳಿಗೆ ಆದ್ಯತೆ

- 1 ರಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದವರಿಗೆ ವೃತ್ತಿ ಶಿಕ್ಷಣದಲ್ಲಿ ಮೀಸಲಾತಿ ಇಡೀ ದೇಶಕ್ಕೆ ಮಾದರಿಯಾದ ಭಾಷಾ ನೀತಿ.
- ಉದ್ಯೋಗದಲ್ಲಿ ಕನ್ನಡ ಮಾಧ್ಯಮದವರಿಗೆ ಮೀಸಲಾತಿ. ಕನ್ನಡ ಅಭಿಮಾನಕ್ಕೆ ಹೊಸ ಆಯಾಮ.
- ಕನ್ನಡೇತರ ಶಾಲೆಗಳಲ್ಲಿ ಮೂರನೇ ತರಗತಿಯಿಂದ ಕನ್ನಡ ಕಡ್ಡಾಯ. ಪೂರ್ಣಾವಧಿ ಕನ್ನಡ ಅಧ್ಯಾಪಕರ ನೇಮಕ.
- ಆಡಳಿತದಲ್ಲಿ ಕನ್ನಡದ ಅನುಷ್ಠಾನ ಮಾಡದೆ ಇರುವ ಅಧಿಕಾರಿಗಳ ವಿರುದ್ಧ ಶಿಸ್ತುಕ್ರಮ.
- ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಪ್ರತ್ಯೇಕ ಕನ್ನಡ ಅನುಷ್ಠಾನ ವಿಭಾಗ ಆರಂಭಕ್ಕೆ ಐತಿಹಾಸಿಕ ಆದೇಶ.
- ಕೃಷಿ ವಿಶ್ವವಿದ್ಯಾಲಯದಲ್ಲಿ ಕನ್ನಡ ಮಾಧ್ಯಮ ಆರಂಭಕ್ಕೆ ತೀರ್ಮಾನ.
- ಕಂಪ್ಯೂಟರ್‌ನಲ್ಲಿ ಕನ್ನಡದ ಅಳವಡಿಕೆಗೆ ಸಂಬಂಧಿಸಿದ ಸಂಶೋಧನೆ ಮತ್ತು ಅಭಿವೃದ್ಧಿಗೆ ಪ್ರತ್ಯೇಕ ಅನುದಾನ.
- ಪದವಿಪೂರ್ವ ಶಿಕ್ಷಣದಲ್ಲಿ ಐಚ್ಛಿಕ ಕನ್ನಡಕ್ಕೆ ಮುಕ್ತಾನುಮತಿ.
- ಬಿ.ಇಡಿ. ಪ್ರವೇಶ ಪರೀಕ್ಷೆಯಲ್ಲಿ ಕನ್ನಡಕ್ಕೆ ಸಮಾನ ಸ್ಥಾನ.
- ವೃತ್ತಿ ಶಿಕ್ಷಣದಲ್ಲಿ ಅಗತ್ಯಕ್ಕನುಗುಣವಾಗಿ ಕನ್ನಡ ಪಠ್ಯ ಅಳವಡಿಸಲು ನಿರ್ಧಾರ.
- ಗಡಿನಾಡು ಕನ್ನಡಿಗರ ಸಮಸ್ಯೆಗಳ ಅಧ್ಯಯನ ಹಾಗೂ ಪರಿಹಾರಕ್ಕೆ ಆದ್ಯತೆ.
- ಪ್ರಾಥಮಿಕ ಶಿಕ್ಷಣ ಪೂರ್ಣವಾಗಿ ಕನ್ನಡ/ಮಾತೃಭಾಷಾ ಮಾಧ್ಯಮದಲ್ಲಿರಬೇಕೆಂಬ ತತ್ವಕ್ಕೆ ಬದ್ಧತೆ ಮತ್ತು ಅನುಷ್ಠಾನಕ್ಕೆ ಸಿದ್ಧತೆ.
- ಕನ್ನಡ ಕಂಪ್ಯೂಟರ್ ಕೇಂದ್ರ ಸ್ಥಾಪನೆ.
- ಕನ್ನಡ ಮಾಧ್ಯಮ ಪ್ರಶಸ್ತಿ ಸ್ಥಾಪನೆ.

**ರಾಜ್ಯಭಾಷೆಯ ಅಭಿವೃದ್ಧಿ ಕೆಲಸಗಳಲ್ಲಿ ದೇಶದಲ್ಲೇ ಕರ್ನಾಟಕಕ್ಕೆ ಮೊದಲ ಸ್ಥಾನ. ದೂರಗಾಮಿ ಕನ್ನಡ ಕೆಲಸಕ್ಕೆ ಆದ್ಯತೆ ಎಂದೆಂದೂ.**


**ಕರ್ನಾಟಕ ವಾರ್ತೆ**

# ಪರದೆಯ ಹಿಂದಿನ ರಾಜಕೀಯ

**ಹೊ**ಸ ನೀರು ಬಂದಾಗ ಹಳೆಯ ನೀರು ಕೊಚ್ಚಿಕೊಂಡು ಹೋಗುತ್ತದೆ. ಅದೇ ರೀತಿ ಹೊಸತೊಂದು ಸುದ್ದಿ ಬಂದಾಗ ಹಳೆಯ ಸುದ್ದಿಗಳು ಪ್ರಾಮುಖ್ಯತೆ ಕಳೆದುಕೊಳ್ಳುತ್ತವೆ. ಅಮೆರಿಕಾದ ಮೇಲೆ ನಡೆದ ಭಯೋತ್ಪಾದಕರ ದಾಳಿಯ ಸುದ್ದಿ, ಅಫಘಾನಿಸ್ಥಾನದ ಮೇಲಿನ ಯುದ್ಧದ ಸುದ್ದಿಗಳು ಇಡೀ ವಿಶ್ವವನ್ನು ಆವರಿಸಿರುವಾಗ ಕಾಶ್ಮೀರದ ಕಣಿವೆಯಲ್ಲಿ ಮುಸ್ಲಿಂ ಮಹಿಳೆಯರು ಕಡ್ಡಾಯವಾಗಿ ಬುರ್ಖಾ ಧರಿಸಬೇಕಾದ ಪರಿಸ್ಥಿತಿ, ರಾಜ್ಯದಲ್ಲಿ ದಲಿತ ಮಹಿಳೆಯರ ಮೇಲೆ ನಡೆಯುತ್ತಿರುವ ಹಲ್ಲೆಯ ಪ್ರಕರಣಗಳು ಕೊಚ್ಚಿಕೊಂಡು ಹೋಗಿವೆ.

ಅಮೆರಿಕಾದ ಮೇಲೆ ದಾಳಿ ನಡೆದು ತಿಂಗಳುಗಳು ಕಳೆದರೂ ಅಮೆರಿಕವೇ ಮಾಧ್ಯಮಗಳ ಮನಸ್ಸನ್ನೆಲ್ಲ ಆಕ್ರಮಿಸಿಕೊಂಡಿದ್ದು ಮಹಿಳೆಯರ ಮೇಲಿನ ಹಲ್ಲೆಗಳು, ರೈತರ ಸಾವುಗಳು ಒಳಪುಟದ ಸುದ್ದಿಗಳಾಗುತ್ತಿರುವುದು ಆತಂಕದ ವಿಷಯವಾಗಿದೆ.

ಕಾಶ್ಮೀರದ ನೆಲಕ್ಕಾಗಿ ಭಯೋತ್ಪಾದಕರು ಮಾಡುತ್ತಿರುವ ಹೋರಾಟ ರಾಜಕೀಯ ಪ್ರೇರಿತವಾದದ್ದು. ಇದು ಎರಡು ರಾಷ್ಟ್ರಗಳ ಸರಕಾರಗಳಿಗೆ ಸಂಬಂಧಿಸಿದ ರಾಜತಾಂತ್ರಿಕ ವಿಷಯ. ಕಾಶ್ಮೀರದ ಪ್ರಶ್ನೆಯನ್ನು ಭಯೋತ್ಪಾದನೆಯ ಮೂಲಕ ಪರಿಹರಿಸಿಕೊಳ್ಳಲು ಪಾಕಿಸ್ತಾನ ನಡೆಸುತ್ತಿರುವ ಯತ್ನವೇ ಅನೈತಿಕವಾದದ್ದು. ತಮ್ಮ ಉದ್ದೇಶಿತ ಗುರಿ ಸಾಧನೆಗಾಗಿ ಭಯೋತ್ಪಾದಕರು ಕಾಶ್ಮೀರದ ಮುಗ್ಧ ಜನರ ಮೇಲೆ ನಡೆಸುತ್ತಿರುವ ಹಲ್ಲೆ, ದಾಳಿ, ಕೊಲೆ, ಸುಲಿಗೆ, ಅಪಹರಣಗಳು ಮತ್ತೂ ಅಮಾನವೀಯವಾಗಿವೆ. ರಾಜಕೀಯ ವೇದಿಕೆಯ ಮೂಲಕ ಪರಿಹರಿಸಿಕೊಳ್ಳಬೇಕಾದ ವಿವಾದವನ್ನು ಭಯೋತ್ಪಾದನೆಯ ಮೂಲಕ ಪರಿಹರಿಸಿಕೊಳ್ಳಲು ಯತ್ನಿಸುವುದೇ ಆಕ್ರಮಣಕಾರರ ಹತಾಶೆಯನ್ನು, ಅವರ ರಾಜಕೀಯ ಇಚ್ಛಾಶಕ್ತಿಯ ಕೊರತೆಯನ್ನು, ತೋರಿಸುತ್ತದೆ. ಇಂತಹ ಹತಾಶ ಮನಸ್ಥಿತಿಯ ಮತ್ತೊಂದು ಮುಖವೇ ಕಾಶ್ಮೀರ ಕಣಿವೆಯ ಮಹಿಳೆಯರ ಮೇಲೆ ಹಿಡಿತ ಸಾಧಿಸಲು ನಡೆಸಿರುವ ಪ್ರಯತ್ನ.

ಲಷ್ಕರ್ ಎ ಜಬ್ಬರ್ ಎಂಬ ಸಂಘಟನೆ ಕಾಶ್ಮೀರದ ಮುಸ್ಲಿಂ ಮಹಿಳೆಯರೆಲ್ಲ ಇನ್ನು ಮುಂದೆ ಬುರ್ಖಾ ಅಥವಾ ಘೋಷಾ ಧರಿಸದೆ ತಿರುಗಾಡುವಂತಿಲ್ಲ ಎಂದು ಫರ್ಮಾನು ಹೊರಡಿಸಿದಾಗ ಭಾರತದಲ್ಲಿ ತಾಲಿಬಾನ್ ಕಾಲಿಟ್ಟಂತೆ ಬೆಚ್ಚಿಬಿದ್ದೆವು. ಲಷ್ಕರ್ ಎ ಜಬ್ಬರ್ ಕೊಟ್ಟ ಗಡುವು ಸಮೀಪಿಸುವವರೆಗೂ ಯಾರೂ ಇದನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಜನರ ಉಪೇಕ್ಷೆಯನ್ನು ಗಮನಿಸಿದ ಸಂಘಟನೆ ಬುರ್ಖಾ ಇಲ್ಲದ ಮಹಿಳೆ ಮೇಲೆ ಆಸಿಡ್ ಎರಚುವುದಾಗಿ ಬೆದರಿಸಿದ್ದಲ್ಲದೆ ಶ್ರೀನಗರದಲ್ಲಿ ಓರ್ವ ಯುವತಿಯ ಮೇಲೆ ಆಸಿಡ್ ಎರಚಿ ಮಹಿಳೆಯರಲ್ಲಿ ಭೀತಿ ಹುಟ್ಟಿಸಿತು. ಭಯೋತ್ಪಾದಕರ ಪ್ರಕಟಣೆಯ ಬೆನ್ನ ಹಿಂದೆಯೇ ಜವಳಿ ಅಂಗಡಿಗಳು ಬುರ್ಖಾ ಮಾರಾಟ ಹೆಚ್ಚಿಸಲು ಸರ್ಕಸ್ ನಡೆಸಲು ಆರಂಭಿಸಿದವು. ಸಿದ್ಧ ಉಡುಪು ಮಳಿಗೆಗಳು ಬಗೆಬಗೆಯ ಬುರ್ಖಾಗಳನ್ನು ಪ್ರದರ್ಶಿಸಿದವು. ಈ ಮಧ್ಯೆ ಬುರ್ಖಾಗಳ ಬೆಲೆ ದಿಢೀರನೆ ಹೆಚ್ಚಾಯಿತು. ಉಡುಪು ಸಂಹಿತೆಯ ಹೇರಿಕೆಯಿಂದಲೇ ಮಾನಸಿಕ ಆಘಾತಕ್ಕೆ ಗುರಿಯಾಗಿದ್ದ ಮಹಿಳೆಯರಿಗೆ, ವ್ಯಾಪಾರಿಗಳು ಇಂತಹ ಸಂದಿಗ್ಧ ಪರಿಸ್ಥಿತಿಯನ್ನು ತಮ್ಮ ಲಾಭಕ್ಕಾಗಿ ಬಳಸಿಕೊಳ್ಳುವುದನ್ನು ಕಂಡು ಹೇಸಿಗೆಯಾಯಿತು. ಒಂದು ಕೈಯಲ್ಲಿ ಉಡುಪು ಸಂಹಿತೆ ಎಂಬ ತಲವಾರ್ ಹಿಡಿದಿದ್ದ ಲಷ್ಕರ್ ಎ ಜಬ್ಬರ್ ಮತ್ತೊಂದು ಕೈಯಿಂದ ವ್ಯಾಪಾರಿಗಳಿಗೆ ಬೆಲೆ ಏರಿಕೆ ವಿರುದ್ಧ ಎಚ್ಚರಿಕೆ ಕೊಡುವ ನಾಟಕ ಆಡಿತು.

ಬುರ್ಖಾ ಮಾರಾಟದ ವಿಷಯವನ್ನು ರಂಜನೀಯ ಸುದ್ದಿಯನ್ನಾಗಿ ಮಾಡಿದ ಮಾಧ್ಯಮಗಳು ಈ ಉಡುಪು ಸಂಹಿತೆಯ ಹಿಂದಿನ ವಿಷಮಯ ಮಗ್ಗಲುಗಳನ್ನು ಬಯಲಿಗೆಳೆಯುವ ಕೆಲಸ ಮಾಡಲಿಲ್ಲ. ಈ ಕ್ರಮದ ವಿರುದ್ಧ ಜನರ ವಿರೋಧವನ್ನು ಕ್ರೋಡೀಕರಿಸುವ, ಆತಂಕದಲ್ಲಿದ್ದ ಕಾಶ್ಮೀರಿ ಮಹಿಳೆಯರಿಗೆ ಜನರ ಬೆಂಬಲದ ದನಿ ಮುಟ್ಟಿಸುವ, ಈ ಹೇರಿಕೆಯನ್ನು ವಿರೋಧಿಸಲು ಬೇಕಾದ ಮಾನಸಿಕ ಸ್ಥೈರ್ಯವನ್ನು ನೀಡುವ ಕೆಲಸವನ್ನು ಮಾಧ್ಯಮಗಳು ಮಾಡಲಿಲ್ಲ. ಮಾಧ್ಯಮಗಳಲ್ಲಿ ಸುದ್ದಿಯಾದದ್ದು ಬುರ್ಖಾ ಖರೀದಿಸಲು ಉದ್ದುದ್ದನೆಯ ಸಾಲುಗಳು, ಮಾರುಕಟ್ಟೆಯಲ್ಲಿ ವೈವಿಧ್ಯಮಯ ಬುರ್ಖಾಗಳ ಪ್ರದರ್ಶನ ಎಂಬ ವಿಷಯಗಳು. ಉಡುಪು ಸಂಹಿತೆ ಜಾರಿಗೆ ನೀಡಲಾಗಿದ್ದ ಸೆಪ್ಟೆಂಬರ್ ೧೦ರ ಗಡುವು ಕಳೆಯುವುದರಲ್ಲಿ ಮಾಧ್ಯಮಗಳಿಗೆ ಪುರುಸೊತ್ತಿಲ್ಲದಂತೆ ಕೆಲಸ ಕೊಟ್ಟಿದ್ದರು ಮತ್ತದೇ ತಾಲಿಬಾನ್ ನೆಲದ ಭಯೋತ್ಪಾದಕರು. ಈ ಬಾರಿ ದಾಳಿಗೆ ಗುರಿಯಾಗಿದ್ದು ಜಗತ್ತಿನ ದೊಡ್ಡಣ್ಣನಾದ್ದರಿಂದ ಮಾಧ್ಯಮಗಳ ಕಣ್ಣಿಗೆ ಬುರ್ಖಾ ಅಡ್ಡಿಯಾಗಲಿಲ್ಲ.

ದಶಕಗಳಿಂದ ನಡೆಸುತ್ತಿರುವ ಭಯೋತ್ಪಾದನೆಯಾಗಲಿ, ಯುದ್ಧವಾಗಲಿ, ಅಲ್ಲಲ್ಲಿ ನಡೆದ ಮಾತುಕತೆಯ ಪ್ರಯತ್ನಗಳಾಗಲಿ ಅವರಿಗೆ ಬೇಕಾದ ಫಲ ನೀಡದಿದ್ದಾಗ ಕಾಶ್ಮೀರದ ಭಯೋತ್ಪಾದಕರು ಕೈ ಹಾಕಿದ್ದು ಉಡುಪು ಸಂಹಿತೆಯ ಮೂಲಕ ಮುಸ್ಲಿಂ ಮಹಿಳೆಯರ ನಿಯಂತ್ರಣಕ್ಕೆ ಹಾಗೂ ಆ ಮೂಲಕ ಒಂದು ಧಾರ್ಮಿಕ ಪಂಥಕ್ಕೆ ಸೇರಿದ ಜನರ ನಿಯಂತ್ರಣಕ್ಕೆ. ಇದು ಬಂದೂಕು ಹಿಡಿದು ನಡೆಸುವ ಭಯೋತ್ಪಾದನೆಗಿಂತಲೂ ಭೀಕರವಾದದ್ದು. ಭಯೋತ್ಪಾದಕರಿಗೆ ಇದು ರಾಜಕೀಯ ತಂತ್ರಗಾರಿಕೆಯಾದರೆ, ಜನರಿಗೆ ಇದು ಮೂಲಭೂತ ಹಕ್ಕುಗಳ ದಮನ. ಜನರ ಮೂಲಭೂತ ಹಕ್ಕುಗಳನ್ನು ರಕ್ಷಿಸಬೇಕಾದ ಜವಾಬ್ದಾರಿ ಸರ್ಕಾರದ್ದು. ಆದರೆ ಈ ಪ್ರಕರಣದಲ್ಲಿ ಭಾರತ ಸರ್ಕಾರ ಪೂರ್ಣ ಮೌನ ವಹಿಸಿದೆ. ಭಯೋತ್ಪಾದಕರು ಉಡುಪು ಸಂಹಿತೆಯ ಪ್ರಕಟಣೆ ನೀಡಿ ಎರಡು ತಿಂಗಳಾದರೂ ಭಾರತ ಸರ್ಕಾರ ಈ ಕುರಿತು ಇದುವರೆಗೂ ಏನೂ ಹೇಳಿಲ್ಲ. ಬಂದೂಕು ಹಿಡಿದು ನಡೆಸುವ ಆಕ್ರಮಣವನ್ನು ಮಾತ್ರ ದೇಶದ ವಿರುದ್ಧದ ದಾಳಿ ಎಂದುಕೊಂಡಿರುವ ಸರ್ಕಾರಕ್ಕೆ ಈ ನೆಲದ ಜನರ ಹಕ್ಕುಗಳ ಮೇಲೆ ನಡೆವ ದಾಳಿಯೂ ದೇಶದ ವಿರುದ್ಧದ ದಾಳಿಯೇ ಎಂದು ಅನ್ನಿಸಿಲ್ಲ. ಈ ದೇಶದ ಪ್ರಜೆಗಳ ಧಾರ್ಮಿಕ ಸಾಂಸ್ಕೃತಿಕ ಸ್ವಾತಂತ್ರ್ಯದ ಮೇಲೆ ಪರಕೀಯರು ದಬ್ಬಾಳಿಕೆ ಮಾಡುವುದೆಂದರೆ ಅದು ಸಾಮಾಜಿಕ ವ್ಯವಸ್ಥೆಯನ್ನು ಪಲ್ಲಟಗೊಳಿಸುವ ಹುನ್ನಾರ ಎಂಬ ಸರಳ ಸತ್ಯ ಸರ್ಕಾರಕ್ಕೆ ಅರ್ಥವಾಗಬೇಕಿದೆ.

ಸರ್ಕಾರ ಮಾತ್ರವಲ್ಲ, ಜನಸಮುದಾಯದಿಂದಲೂ ಈ ಪ್ರಕರಣಕ್ಕೆ ಸೂಕ್ತವಾದ ಪ್ರತಿಭಟನೆ ಇದುವರೆಗೆ ವ್ಯಕ್ತವಾಗಿಲ್ಲ. ೧೯೯೦ರಲ್ಲಿ ದುಖ್ತರನ್ ಎ ಮಿಲ್ಲೇತ್ ಎಂಬ ಸಂಘಟನೆ ಇಂತಹುದೇ ಹಲವು ನಿಯಂತ್ರಣಗಳನ್ನು ಹೇರಿತ್ತು. ಅಂದು ವ್ಯಕ್ತವಾದ ವ್ಯಾಪಕ ವಿರೋಧದ ಮುಂದೆ ನಿಯಂತ್ರಣಗಳು ನಿಲ್ಲಲಿಲ್ಲ. ಆದರೆ ಅಂದಿನಂತೆ ಈ ಬಾರಿ



ಸತ್ಯ, ಎಸ್.

ವಿರೋಧ ವ್ಯಕ್ತವಾಗದಿರುವುದು ಗಮನಾರ್ಹ. ಅಲ್ಲಲ್ಲಿ ಹಲವರು, ಹಲವು ಸಂಘಟನೆಗಳು ಇದನ್ನು ವಿರೋಧಿಸಿದ್ದರೂ ಸಮಾನ ಮನಸ್ಕರು ಒಂದಾಗಿ ಖಚಿತವಾಗಿ, ಭಯೋತ್ಪಾದಕರ ಫರ್ಮಾನಿಗೆ ಸರಿಸಾಟಿಯಾದ ದನಿಯಲ್ಲಿ ವಿರೋಧಿಸಿಲ್ಲದಿರುವುದು ಆತಂಕದ ವಿಷಯವಾಗಿದೆ. ಇದು ಕೇವಲ ಮಹಿಳೆಯರಿಗೆ ಸಂಬಂಧಿಸಿದ, ಅದರಲ್ಲೂ ಕಾಶ್ಮೀರಿ ಮಹಿಳೆಯರಿಗೆ ಸಂಬಂಧಿಸಿದ ವಿಷಯ ಅಲ್ಲ ಎಂಬುದನ್ನು ನಮ್ಮ ಸಮಾಜ ಮನಗಾಣಬೇಕಿದೆ. ಇಂದು ಕಾಶ್ಮೀರ ಹೊಕ್ಕಿರುವ ಇಂತಹ ನಿಯಂತ್ರಣಗಳನ್ನು ವಿರೋಧಿಸದೇ ಹೋದರೆ ನಾಳೆ ನಮ್ಮಲ್ಲಿಗೂ ಅದು ಹರಿದುಬರುವುದರಲ್ಲಿ ಸಂಶಯವಿಲ್ಲ. ಇದಕ್ಕೆ ಉದಾಹರಣೆ, ಮಣಿಪುರದ ಭಯೋತ್ಪಾದಕ ಸಂಘಟನೆ ಕಾಂಗ್ಲೀ ಯವೋಲ್ ಕಾನ್‌ಲುಪ್‌ನ ಪ್ರಕಟಣೆ. ಕಾಶ್ಮೀರಿ ಭಯೋತ್ಪಾದಕರಿಂದ ಪ್ರೇರಣೆ ಪಡೆದ ಮಣಿಪುರದ ಈ ಭಯೋತ್ಪಾದಕ ಸಂಘಟನೆ ಮಹಿಳೆಯರು ಶತಮಾನಗಳ ಪರಂಪರೆಯನ್ನು ಕಾಯ್ದುಕೊಳ್ಳಲು ಸಾಂಪ್ರದಾಯಕ ಉಡುಪು ಧರಿಸಬೇಕೆಂದು ಹಾಗೂ ಧರಿಸದೇ ಇರುವ ಮಹಿಳೆಯರನ್ನು ಯಾವುದೇ ಮುನ್ಸೂಚನೆ ನೀಡದೆ ಗುಂಡಿಕ್ಕಿ ಕೊಲ್ಲುವುದಾಗಿ ಬೆದರಿಕೆ ಒಡ್ಡಿದೆ ಎಂದು ಪತ್ರಿಕೆಗಳು ವರದಿ ಮಾಡಿವೆ.

ಇತ್ತೀಚಿನ ದಿನಗಳಲ್ಲಿ ಕಾಶ್ಮೀರದ ನೆಲದಲ್ಲಿ ಸಣ್ಣದೊಂದು ಬದಲಾವಣೆಯ ಬೆಳಕು ಹರಿದಿತ್ತು. ದಶಕಗಳಿಂದ ಭಯೋತ್ಪಾದಕರ ಹಿಂಸೆಯಿಂದ ತತ್ತರಿಸಿ, ಆಡಳಿತ ವ್ಯವಸ್ಥೆಯಿಂದ ಶಾಂತಿ ಸ್ಥಾಪನೆಯ ಯಾವ ಭರವಸೆ ಇಲ್ಲದಾದಾಗ ಅಲ್ಲಿನ ಮಹಿಳೆಯರೇ ಶಾಂತಿ ಸ್ಥಾಪನೆ ಪ್ರಕ್ರಿಯೆಗೆ ಮುಂದಾಗಿದ್ದಾರೆ. ಜಾತಿ, ಧರ್ಮ, ಮತ, ಭಾಷೆ ಯಾವುದರ ಗೊಡವೆಯೂ ಇಲ್ಲದೆ ನೊಂದ ಮಹಿಳೆಯರೆಲ್ಲರೂ ಸಣ್ಣ ಸಣ್ಣ ಗುಂಪುಗಳನ್ನು ರಚಿಸಿಕೊಂಡು, ತಮ್ಮ ದುಃಖ ಹಂಚಿಕೊಳ್ಳುತ್ತಿದ್ದಾರೆ. ಕಾಶ್ಮೀರದ ಅಸಂಖ್ಯಾತ ಕುಟುಂಬಗಳಲ್ಲಿ ಇಂದು ವಯಸ್ಕ ಪುರುಷರೇ ಇಲ್ಲದಿರುವುದು ವಾಸ್ತವ ಸಂಗತಿ. ಹೆಚ್ಚಿನ ಪುರುಷರು ಭಯೋತ್ಪಾದಕರ ದಾಳಿಗೆ ಅಥವಾ ಅಪಹರಣಕ್ಕೆ ಅಥವಾ ಸೇನೆಯ ಕಾರ್ಯಾಚರಣೆಗೆ ಬಲಿಯಾಗಿದ್ದಾರೆ. ಆದರೆ ಈ ಕುಟುಂಬಗಳು ಇಂದಿಗೂ ಧೈರ್ಯವಾಗಿ ಕಣಿವೆಯಲ್ಲೇ ಬದುಕು ಮುಂದುವರಿಸಿವೆ. ಇಂತಹ ಕುಟುಂಬಗಳ ಮಹಿಳೆಯರು ಇಂದು ಒಂದಾಗಲು, ಪರಸ್ಪರ ನೋವಿಗೆ ಸಾಂತ್ವನ ಹೇಳಲು, ಬದುಕಿಗೊಂದು ದಿಕ್ಕು ನೀಡಲು, ಮಕ್ಕಳ ಭವಿಷ್ಯಕ್ಕೆ ರೂಪು ನೀಡಲು ಯತ್ನಿಸುತ್ತಿದ್ದಾರೆ. ಇಂತಹ ಪ್ರಯತ್ನಗಳು ಭಯೋತ್ಪಾದಕ ಸಂಘಟನೆಗಳಿಗೆ ಸವಾಲಾಗಿ ಕಂಡಿದೆ. ಒಂದಾದ ಮಹಿಳೆಯರ ಮಧ್ಯೆ ಪ್ರತ್ಯೇಕತೆಯ ಬೀಜ ಬಿತ್ತುವುದು ಈ ಉಡುಪು ಸಂಹಿತೆಯ ಹಿಂದಿರಬಹುದಾದ ಮತ್ತೊಂದು ಕುಟಿಲತೆ.

ಈ ಮಧ್ಯೆ ಕಾಶ್ಮೀರಿ ಮಹಿಳೆಯರು ಬುರ್ಖಾದೊಳಗೆ ಅನಿವಾರ್ಯವಾಗಿ ಅವಿತುಕೊಳ್ಳುತ್ತಿದ್ದಾರೆ. ತಮ್ಮ ಮನಸ್ಸಿನಾಳದ ಪ್ರತಿಭಟನೆಗೆ ಸಾಮಾಜಿಕ ಬೆಂಬಲದ ಸಹಾಯ ಹಸ್ತ ಇಲ್ಲದೆ ಅವರು ಅಸಹಾಯಕರಾಗಿದ್ದಾರೆ. ಈ ಉಡುಪು ಸಂಹಿತೆಗೆ ತಲೆಬಾಗಿರುವುದು ಭೀತಿಯಿಂದಲೇ ಹೊರತು ಇಸ್ಲಾಂ ಧರ್ಮದ ಕಾರಣದಿಂದಲ್ಲ ಎನ್ನುತ್ತಾರೆ ಜಮ್ಮು ಕಾಶ್ಮೀರದ ಜನತಾ ಪ್ರಜಾಸತ್ತಾತ್ಮಕ ಪಕ್ಷದ ಉಪಾಧ್ಯಕ್ಷೆ ಮೆಹಬೂಬ ಮುಫ್ತಿ. ಯಾಕೆಂದರೆ ಇಸ್ಲಾಂ ಧರ್ಮ ಅನುಯಾಯಿಗಳಿಗೆ ಏನನ್ನೂ ಹೇರುವುದಿಲ್ಲ ಎನ್ನುತ್ತಾರೆ ಅವರು.

ಖುರಾನ್‌ನ ವಿಶ್ಲೇಷಣೆಯ ಮೂಲಕ ಬುರ್ಖಾ ಹೇರಿಕೆ ಇಸ್ಲಾಂ ವಿರೋಧಿ ಕ್ರಮ ಎನ್ನುವ ಹಿರಿಯ ಚಿಂತಕ ಅಸ್ಗರ್ ಅಲಿ ಎಂಜಿನಿಯರ್ ಮತ್ತು ಮುಸ್ಲಿಂ ಮಹಿಳೆಯರ ವೇದಿಕೆಯ ಸಂಚಾಲಕಿ ಸಯೀದಾ ಹಮೀದ್ ಅವರುಗಳು, ಖುರಾನ್‌ನಲ್ಲಿ ಬುರ್ಖಾ ಮತ್ತು ಘೋಷಾ ಕುರಿತು ಬರುವ ಪ್ರಸ್ತಾವಗಳನ್ನು ಅಲ್ಲಿನ ಸಂದರ್ಭಾನುಸಾರ ಅರ್ಥೈಸಬೇಕು, ಖುರಾನ್ ರಚನೆಯಾದ ಕಾಲ ಮತ್ತು ಸಂದರ್ಭವನ್ನು ಆಗ ಚಾಲ್ತಿಯಲ್ಲಿದ್ದ ಮಹಿಳೆಯರ ಉಡುಪು ಮತ್ತು ನಡವಳಿಕೆಗಳನ್ನು ಗಮನದಲ್ಲಿರಿಸಿಕೊಳ್ಳಬೇಕು ಎನ್ನುತ್ತಾರೆ.

ಈ ರೀತಿಯ ನಿಯಂತ್ರಣಗಳ ಹೇರುವಿಕೆ ಸಾಧ್ಯವಾಗಲು ಮುಖ್ಯ ಕಾರಣ ದೇಶದಲ್ಲಿ ಹೆಚ್ಚುತ್ತಿರುವ ಮೂಲಭೂತವಾದ. ಈ ದೇಶದ ನೆಲದಲ್ಲೇ ಇತ್ತೀಚೆಗೆ ಹುಟ್ಟಿಕೊಂಡಿರುವ ಮೂಲಭೂತವಾದವು ಭಯೋತ್ಪಾದಕರ ಕುತಂತ್ರಗಳಿಗೆ ಸುಲಭ ದಾರಿ ಮಾಡಿಕೊಟ್ಟಿದೆಯಲ್ಲದೆ ಮೂಲಭೂತ ಹಕ್ಕುಗಳ ದಮನವನ್ನು ಸಂಸ್ಕೃತಿಯ ರಕ್ಷಣೆ ಎಂದು ವ್ಯಾಖ್ಯಾನಿಸುವ ಮಟ್ಟಕ್ಕೆ ತಲುಪಿವೆ.

ಜಗತ್ತಿನ ಯಾವ ಭಾಗದಲ್ಲಾಗಲಿ, ಇತಿಹಾಸದ ಯಾವ ಘಟ್ಟದಲ್ಲಾಗಲಿ (ನಿನ್ನೆಯು ಇಂದಿನ ಮಟ್ಟಿಗೆ ಇತಿಹಾಸವೇ) ಉಡುಪು ಸಂಹಿತೆಗೆ ಬಲಿಯಾಗಿರುವುದು ಮಹಿಳೆಯರೇ. ಯಾಕೆಂದರೆ ಇಂತಹ ಸಂಹಿತೆಗಳನ್ನು ರೂಪಿಸುವವರು ಪುರುಷರಾದ್ದರಿಂದ ಮಹಿಳೆಯರ ಚಲನಶೀಲತೆಯನ್ನು, ಆ ಮೂಲಕ ಅವರ ಅಭಿವೃದ್ಧಿಯನ್ನು, ನಿಯಂತ್ರಿಸಲು ಈ ಉಡುಪು ಸಂಹಿತೆ ಒಂದು ಅಸ್ತ್ರವಾಗಿ ಪರಿಣಮಿಸಿದೆ. ಸ್ಥಾಪಿತ ಮೌಲ್ಯಗಳು ತಮ್ಮೆಲ್ಲ ಹಿತಾಸಕ್ತಿಗಳ ಈಡೇರಿಕೆಗಾಗಿ ಮಹಿಳೆಯರ ಉಡುಗೆ ತೊಡುಗೆಯನ್ನು ಸದಾ ನಿಯಂತ್ರಿಸುತ್ತವೆ. ಧಾರ್ಮಿಕ ಮೂಲಭೂತವಾದಿಗಳು ಧರ್ಮ ಸಂಸ್ಕೃತಿಯ ಹೆಸರಿನಲ್ಲಿ, ಸನಾತನವಾದಿಗಳು ಕೌಟುಂಬಿಕ ಮೌಲ್ಯಗಳ ಹೆಸರಿನಲ್ಲಿ, ಭಯೋತ್ಪಾದಕರು-ಆಕ್ರಮಣಕಾರರು ರಾಜಕೀಯ ಹೋರಾಟದ ತಂತ್ರವಾಗಿ ಉಡುಪು ಸಂಹಿತೆ ಹೇರಿದ್ದಾರೆ, ಹೇರುತ್ತಿದ್ದಾರೆ. ಕಳೆದ ಒಂದೂವರೆ ದಶಕದಿಂದೀಚೆಗೆ ಇಂತಹ ಪ್ರಯತ್ನಗಳು ಭಾರತದ ನೆಲದಲ್ಲೇ ಹಲವು ಧರ್ಮಗಳಲ್ಲಿ ನಡೆದಿರುವುದನ್ನು ಕಾಣಬಹುದು. ಹಿಂದೂ ಮೂಲಭೂತವಾದಿಗಳು ಕಾಲೇಜು, ವಿಶ್ವವಿದ್ಯಾಲಯಗಳ ಮೂಲಕ ಇಂತಹ ನಿಯಂತ್ರಣ ಹೇರಿದ್ದಾರೆ. ಅಲ್ಪಸಂಖ್ಯಾತ ಸಮುದಾಯಗಳು ಬಹುಸಂಖ್ಯಾತ ಸಮುದಾಯಗಳ ಆಕ್ರಮಣಗಳಿಗೆ ಪ್ರತಿರೋಧವಾಗಿ, ತಮ್ಮ ಅಸ್ತಿತ್ವದ ಕುರುಹಾಗಿ, ಪ್ರತ್ಯೇಕತೆಯ ಸಂಕೇತವಾಗಿ ಇಂತಹ ನಿಯಂತ್ರಣವನ್ನು ತಮ್ಮ ಮಹಿಳೆಯರ ಮೇಲೆ ಹೇರಿದ್ದಾರೆ. ಆರಂಭದಲ್ಲಿ ಬಹುಸಂಖ್ಯಾತರ ಆಕ್ರಮಣಕ್ಕೆ ಪ್ರತಿರೋಧವಾಗಿ ಕಾಣಿಸಿಕೊಳ್ಳುವ ಇಂತಹ ಪದ್ಧತಿಗಳು ಮುಂದೆ ಆ ಧರ್ಮದ ಮೂಲಭೂತವಾದಿಗಳಿಂದಾಗಿ ಗಟ್ಟಿಯಾದ ನೆಲೆ ಕಂಡುಕೊಳ್ಳಲು ಆರಂಭಿಸುತ್ತವೆ. ಪುರುಷರ ಏಕಾಧಿಪತ್ಯವಾಗಿರುವ ಮೂಲಭೂತವಾದದ ಆಚರಣೆಯಲ್ಲಿ ಮಹಿಳೆ ದಾಳವಾಗಿದ್ದಾಳೆ. ಒಮ್ಮೆ ಬುರ್ಖಾ ಧರಿಸಿದರೆ ಮುಗಿಯಿತು ಇನ್ನಷ್ಟು, ಮತ್ತಷ್ಟು ನಿಯಂತ್ರಣಗಳು ಹಿಂಬಾಲಿಸುತ್ತವೆ.

ಸ್ಮ. ಎಸ್.
ಏಕತನ್, ೫ನೇ ಅಡ್ಡರಸ್ತೆ, ೧ನೇ ಮುಖ್ಯರಸ್ತೆ
ಲೋಹಿತ್ ನಗರ, ಮಂಗಳೂರು - ೫೭೫ ೦೦೬

## ಎಲ್ಲಿ ಹುಡುಕಲಿ ನಾ...



ಎಲ್ಲಿದೆ ಹೊಸತನ
ಸಂಸಾರವೆಂದ ಮೇಲೆ
ಕತ್ತಿನಾ ತುಂಬ
ಕರಿಮಣಿಯ ಕಪ್ಪು ಹುರಿ
ಪ್ರಕೃತಿಯಲ್ಲಿ
ಮುಳುಗಿದ ಮೇಲೆ ?
ಅದೇ ಹೊಂಬಿಸಿಲು !
ಅದೇ ಇರುಳ ಪರದೆ !
ಕಾವೇರಿಯಲ್ಲಿ ಮುಳುಗಿದ
ಕನಸುಗಳೆಷ್ಟೋ ?
ಭಾವನೆಗಳೆಷ್ಟೋ ?
ಎಲ್ಲಿ ಹುಡುಕಲಿ ? ಹೊಸತನ
ಕೋಗಿಲೆಯ ಇಂಚರ,
ಕಡಲ ಭೋರ್ಗರೆತ,
ನಕ್ಷತ್ರಗಳಾ ಹೊಳಪು –
ಎಲ್ಲೆಲ್ಲು ಹೊಸತನದ ಛಾಪು
ಕಾಣಲಾರೆ ನಾನೇಕೆ ?
ಹೌದು..... ನನಗೊತ್ತು
ಹೇಳುವಾ..... ಕವಿಮಾತು
‘ಪ್ರೀತಿಯ ಸೆಲೆಗೆ
ಬೆಳಕಲ್ಲದೆ ಹೊಸತನ’
ಆದರೆ –
ನನ್ನ ಪ್ರೀತಿಯ ಸೆಲೆ
ಹಿಂಗುತ್ತಿರುವಾಗ
ಎಲ್ಲಿ ಹುಡಕಲಿ.... ಹೊಸತನ ?

ಎ. ಪ್ರಮೀಳ ಕರುಂಬಯ್ಯ
ಕೆ. ಕೆ. ರಾಮಯ್ಯ ಕಾಂಪೌಂಡು, ಸುದರ್ಶನ ಬಡಾವಣೆ
ಮಡಿಕೇರಿ - ೫೭೧ ೨೦೧, ಕೊಡಗು ಜಿಲ್ಲೆ



# ರಂಗಭೂಮಿಯ ಪ್ರಸ್ತುತ ಸವಾಲುಗಳು

**ಡಾ॥ ಬಸವರಾಜ ಸಬರದ**

ಕಾಲದಿಂದ ಕಾಲಕ್ಕೆ ಬಂದೊದಗುವ ಅನೇಕ ಸವಾಲುಗಳನ್ನು ಎದುರಿಸುತ್ತಲೇ ರಂಗಭೂಮಿ ತನ್ನ ಚಲನಶೀಲತೆಯನ್ನುಳಿಸಿಕೊಂಡು ಬಂದಿದೆ. ಜಾಗತಿಕ ರಂಗಭೂಮಿ, ಭಾರತೀಯ ರಂಗಭೂಮಿ ಹಾಗೂ ಕನ್ನಡ ರಂಗಭೂಮಿಗಳಲ್ಲಿ ಪ್ರಾದೇಶಿಕ ವೈಶಿಷ್ಟ್ಯಗಳನ್ನು ಹೊರತುಪಡಿಸಿದರೆ ಅವುಗಳ ಶರೀರ ಒಂದೇಯಾಗಿದೆ. ಇಂದು ಜಾಗತಿಕ ರಂಗಭೂಮಿ ಎದುರಿಸುತ್ತಿರುವ ಸವಾಲುಗಳನ್ನೇ ಭಾರತೀಯ ರಂಗಭೂಮಿ ಹಾಗೂ ಕನ್ನಡ ರಂಗಭೂಮಿ ಎದುರಿಸುತ್ತಿವೆ. ದೇಶ-ಭಾಷೆ-ಕಾಲಗಳನ್ನು ಮೀರಿ ಬೆಳೆಯುವ ರಂಗಭೂಮಿ, ಸಾಹಿತ್ಯದ ಪ್ರಕಾರಗಳಿಗಿಂತ ತುಂಬಾ ವಿಶಿಷ್ಟವಾದುದು.

ಇಂದು ಒಟ್ಟಾರೆ ರಂಗಭೂಮಿಗೆ ಮಂಕು ಕವಿಯಲು ಕಾರಣಗಳೇನು ? ಇಡೀ ಜಾಗತಿಕ ರಂಗಭೂಮಿಯೇ ಹೀಗೆ ನಿಸ್ತೇಜಗೊಳ್ಳತೊಡಗಿರುವುದರ ಹಿನ್ನೆಲೆಯೇನು ? ಎಂಬಿತ್ಯಾದಿ ಪ್ರಶ್ನೆಗಳು ಇಂದು ಚರ್ಚೆಯ ವಿಷಯಗಳಾಗ ಬೇಕಾಗಿದೆ. ರಂಗಭೂಮಿಯ ಚರಿತ್ರೆಯನ್ನು, ಅದರ ಭವ್ಯ ಪರಂಪರೆಯನ್ನು ವೈಭವೀಕರಿಸುತ್ತಾ ಕೂಡುವುದರಿಂದ ಬರುವುದಾದರೂ ಏನು ? ವರ್ತಮಾನದ ಸ್ಥಿತಿ ಹೀಗೆ ಚಿಂತಾಜನಕವಾಗಲು ಕಾರಣಗಳೇನೆಂಬುದರ ಬಗೆಗೆ ಇಂದು ಆಲೋಚಿಸುವುದು ಅನಿವಾರ್ಯವಾಗಿದೆ.

ಪ್ರಾಚೀನ ರಂಗಭೂಮಿಯ ಪರಿಕಲ್ಪನೆಗೂ, ಮಧ್ಯಂತರ ರಂಗಭೂಮಿಯ ಪರಿಕಲ್ಪನೆಗೂ ತುಂಬಾ ವ್ಯತ್ಯಾಸವಿದೆ. ಅದೇ ರೀತಿ ಮಧ್ಯಂತರ ರಂಗಭೂಮಿಯ ಪರಿಕಲ್ಪನೆಗೂ, ಆಧುನಿಕ ರಂಗಭೂಮಿಯ ಪರಿಕಲ್ಪನೆಗೂ ಬಹಳಷ್ಟು ಅಂತರವಿದೆ. ಹೀಗೆ ಬದಲಾಗುತ್ತಿರುವ ರಂಗಪರಿಕಲ್ಪನೆ ಈಗಿನ ಸ್ಥಗಿತತೆಗೆ ಕಾರಣವೆ ? ಬದಲಾಗುತ್ತಿರುವ ಪರಿಕಲ್ಪನೆಗಳು ಸ್ಥಗಿತತೆಗೆ ಕಾರಣವಾಗಲಾರವು ಎಂಬಂತಹ ಉತ್ತರ ಸ್ಪಷ್ಟವಾಗಿದೆ.

ಪ್ರಾರಂಭದಲ್ಲಿ ರಂಗಭೂಮಿ ಧರ್ಮಕೇಂದ್ರಿತ ವಾಗಿತ್ತು. ದೇವಾಲಯಕ್ಕೂ ರಂಗಭೂಮಿಗೂ ಅವಿನಾಭಾವ ಸಂಬಂಧವಿತ್ತು. ನಟರಾಜನ ಪರಿಕಲ್ಪನೆ ರಂಗಭೂಮಿಯ ಪರಿಕಲ್ಪನೆಗೆ ಪೂರಕವಾದುದೇ ಆಗಿತ್ತು. ದೇವಾಲಯದ ಪ್ರಾಂಗಣದಲ್ಲಿ ಪ್ರಾರಂಭವಾದ ರಂಗಭೂಮಿ ತದನಂತರ ದೇವಾಲಯವನ್ನು ಬಿಟ್ಟು ಬಯಲಿಗೆ ಬಂದು ಬಯಲಾಟವಾಯಿತು. ಬಯಲು ರಂಗಭೂಮಿಯ ಪರಿಕಲ್ಪನೆ ನಮ್ಮ ಜಾನಪದರದ್ದು. ಅವರು ದೇವಾಲಯದಿಂದ ಬಯಲಿಗೆ ಬಂದು ರಂಗ ಕಟ್ಟಿದರೂ ದೇವಾಲಯದಲ್ಲಿರುವ ದೇವರನ್ನು ಮಾತ್ರ ಮರೆಯಲಿಲ್ಲ. ಬಯಲು ರಂಗಭೂಮಿಯಲ್ಲಿಯೇ ಒಳರಂಗವೊಂದನ್ನು ಮಾಡಿಕೊಂಡು, ದೇವಾಲಯದೊಳಗಿದ್ದ ದೇವರನ್ನು ಅಲ್ಲಿ ತಂದು ಸ್ಥಾಪಿಸಿದರು. ಇಂದಿಗೂ ಒಳರಂಗದಲ್ಲಿ ನಡೆಯುವ ನಾಂದಿ ಪದ್ಯ ಹಾಗೂ ಪೂಜೆ ಇದಕ್ಕೆ ನಿದರ್ಶನವಾಗಿದೆ.

ಜಾಗತಿಕ ಜಾನಪದ ರಂಗಭೂಮಿಯ ಮುಖ್ಯ ಉದ್ದೇಶವೇ ಧಾರ್ಮಿಕ ನೆಲೆಯನ್ನು ಹೊಂದಿದೆ. ಇದಕ್ಕೆ ಕರ್ನಾಟಕ ಜಾನಪದ ರಂಗಭೂಮಿಯೂ ಹೊರತಾಗಿರ ಲಿಲ್ಲ. ಜಾನಪದ ರಂಗಭೂಮಿಯ ವಿವಿಧ ಪ್ರಕಾರಗಳಲ್ಲಿ ದೊಡ್ಡಾಟ, ಯಕ್ಷಗಾನ, ಸಣ್ಣಾಟ, ದಾಸರಾಟ, ಡಪ್ಪಿನಾಟ, ಪಾರಿಜಾತ ಮುಖ್ಯವಾದವುಗಳಾಗಿವೆ. ಈ ಎಲ್ಲ ಆಟ ಗಳಲ್ಲಿಯೂ ಧಾರ್ಮಿಕ ನೆಲೆಯೇ ಮುಖ್ಯವಾಗಿದೆ. ಹೀಗೆ ಧರ್ಮಕೇಂದ್ರಿತವಾಗಿದ್ದ ಜಾನಪದ ರಂಗಭೂಮಿಗೆ ಪುರಾಣ ಪ್ರಸಂಗಗಳೇ ವಸ್ತುವಾದವು; ನೀತಿ ಬೋಧೆಯೇ ಅದರ ಪ್ರಮುಖ ಉದ್ದೇಶವಾಯಿತು. ನಂತರದ ದಿನಗಳಲ್ಲಿ ಜಾನಪದರು ಕೆಲವು ಸಾಮಾಜಿಕ ಸಣ್ಣಾಟಗಳನ್ನು ಪ್ರಯೋಗಿ ಸಿದರು. ಅದರಲ್ಲಿ ಸಂಗ್ಯಾ-ಬಾಳ್ಯದಂತಹ ಸಣ್ಣಾಟವನ್ನು ಉದಾಹರಿಸಬಹುದಾಗಿದೆ. ಈ ಅಲ್ಪ-ಸ್ವಲ್ಪ ಬದಲಾವಣೆ ಯಿದ್ದರೂ ಪ್ರಮುಖವಾಗಿ ಜಾನಪದ ರಂಗಭೂಮಿಯ ಉದ್ದೇಶ ಧರ್ಮಕೇಂದ್ರಿತವಾಗಿತ್ತು, ನೀತಿ ಪ್ರಧಾನ ವಾಗಿತ್ತು, ಭಕ್ತಿ ಮೌಲ್ಯವನ್ನು ಹೆಚ್ಚಿಸುವುದಾಗಿತ್ತೆಂಬುದಕ್ಕೆ ಭಿನ್ನಾಭಿಪ್ರಾಯವಿರಲಾರದು.

ವೃತ್ತಿ ರಂಗಭೂಮಿ ಪ್ರಾರಂಭದಲ್ಲಿ ಕೆಲವು ಪೌರಾಣಿಕ ನಾಟಕಗಳನ್ನು ಪ್ರಯೋಗಿಸಿ ನೀತಿಬೋಧೆಯ ಕಾರ್ಯವನ್ನು ಮಾಡಿದರೂ ನಂತರದ ದಿನಗಳಲ್ಲಿ ಅದು ಪೂರ್ಣವಾಗಿ ಸಮಾಜಮುಖಿಯಾಯಿತು. ಸಾಮಾಜಿಕ ನಾಟಕಗಳೇ ಅಲ್ಲಿ ಪ್ರಧಾನ ಸ್ಥಾನವನ್ನು ಪಡೆದವು. ಸಾಮಾಜಿಕ ಸಂದರ್ಭಕ್ಕೆ ವೃತ್ತಿರಂಗಭೂಮಿ ಸ್ಪಂದಿಸಿದರೂ, ಅದು ವೃತ್ತಿಯಾಗಿ ಬೆಳೆಯಬೇಕಾದುದರಿಂದ ಅನೇಕ ಗಿಮಿಕ್‌ಗಳಿಗೆ ಪ್ರಾಧಾನ್ಯತೆ ನೀಡಿತು. ಕೀಳು ಮನರಂಜನೆಯ ಪ್ರೇಕ್ಷಕರು ಏನು ಕೇಳುವರೋ ಅದನ್ನು ಕೊಡಲು ಸಿದ್ಧವಾಯಿತು. ಆಗ ಎರಡರ್ಥದ ಅಶ್ಲೀಲ ಪದಗಳು, ನೃತ್ಯಗಳ ಹೆಸರಿನಲ್ಲಿ ಹೆಣ್ಣುಗಳ ಮೈಮಾಟ ಪ್ರದರ್ಶನ ಪ್ರಾರಂಭವಾಯಿತು. ಸಾಮಾಜಿಕವಾಗಿ ಬೆಳೆಯಬೇಕಾಗಿದ್ದ ವೃತ್ತಿ ರಂಗಭೂಮಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕಾಗಿ ಎಲ್ಲಾ ರೀತಿಯ ರಾಜಿಗೂ ಸಿದ್ಧವಾಯಿತು.

ವೈಚಾರಿಕ ನೆಲೆಯಿಂದ ಹುಟ್ಟಿಕೊಂಡ ಹವ್ಯಾಸಿ ರಂಗಭೂಮಿಗೆ ಬೇರೆ ರೀತಿಯ ಸಮಸ್ಯೆಗಳೆದುರಾದುವು. ಪ್ರಾರಂಭದಲ್ಲಿ ಕನ್ನಡ ಹವ್ಯಾಸಿ ರಂಗಭೂಮಿ ಮಹತ್ವದ ಸಾಧನೆಯನ್ನು ಮಾಡಿತು. ಕೈಲಾಸಂ ಮತ್ತು ಶ್ರೀರಂಗ ಅವರು ಪಾರಂಪರಿಕ ರಂಗಭೂಮಿಯ ಪರಿಕಲ್ಪನೆಯನ್ನೇ ಬದಲಿಸಿ ಅದಕ್ಕೆ ಹೊಸ ಜೀವ ನೀಡಿದರು. ಕಾಲೇಜುಗಳಲ್ಲಿ ಕಲಿಸುವ ವೈಚಾರಿಕ ಸಂಗತಿಗಳು, ಸಾಮಾಜಿಕ ತಲ್ಲಣಗಳು, ರಾಜಕೀಯ ವಿಡಂಬನೆಗಳು ಹವ್ಯಾಸಿ ರಂಗಭೂಮಿಯ ಪ್ರಮುಖ ವಸ್ತುವಾದುವು. ಸಾಮಾನ್ಯ ಪ್ರೇಕ್ಷಕನೊಬ್ಬ ತನ್ನ ಸಮಾಜದ ಸಮಕಾಲೀನ ಸಂದರ್ಭವನ್ನು ಅರ್ಥೈಸಿಕೊಳ್ಳಲು ಹವ್ಯಾಸಿ ರಂಗಭೂಮಿ ತುಂಬಾ ಸಹಾಯ ಮಾಡಿತು. ಹವ್ಯಾಸಿ ರಂಗಭೂಮಿ ಸಾಮಾನ್ಯ ಪ್ರೇಕ್ಷಕರಿಗೆ ವೈಚಾರಿಕ ಶಿಕ್ಷಣವನ್ನು ನೀಡಿತು. ಜಾನಪದ ರಂಗಭೂಮಿಯ ಧರ್ಮ ಕೇಂದ್ರಿತ ನಿಲುವಾಗಲಿ, ವೃತ್ತಿರಂಗಭೂಮಿಯ ಅಸ್ತಿತ್ವದ ಪ್ರಶ್ನೆಯಾಗಲಿ ಇಲ್ಲಿ ಕಾಡಲಿಲ್ಲ. ಹೀಗಾಗಿ ಹವ್ಯಾಸಿ ರಂಗಭೂಮಿ ಮುಕ್ತವಾಗಿ ಬೆಳೆದು ನಿಲ್ಲಲು ಅನುಕೂಲ ವಾಯಿತು. ಮನರಂಜನೆಯ ಜತೆಗೆ ಶಿಕ್ಷಣವನ್ನು ನೀಡುವ, ರಂಗದ ಮೂಲಕ ಸಮುದಾಯವನ್ನು ಜಾಗೃತಗೊಳಿಸುವ ಹವ್ಯಾಸಿ ರಂಗಭೂಮಿ ಬೀದಿ ನಾಟಕದಂತಹ ಪ್ರಯೋಗಗಳ ಮೂಲಕ ಅನೇಕ ಪ್ರಗತಿಪರ ಚಳುವಳಿಗಳ ಹುಟ್ಟಿಗೆ ಕಾರಣವಾಯಿತು.

ವಿವಿಧ ರಂಗಭೂಮಿ ಪ್ರಕಾರಗಳ ಉದ್ದೇಶ ಬೇರೆಬೇರೆಯಾದರೂ, ಇವು ಜನಸಾಮಾನ್ಯರ-ಪ್ರೇಕ್ಷಕರ ನೈತಿಕ-ಶೈಕ್ಷಣಿಕ ಮೌಲ್ಯಗಳನ್ನು ಹೆಚ್ಚಿಸುವಲ್ಲಿ, ಮನರಂಜನೆ ನೀಡುವಲ್ಲಿ, ಯಶಸ್ವಿಯಾಗಿವೆ. ವೃತ್ತಿ ರಂಗಭೂಮಿಯಲ್ಲಿ ನಟ ಪ್ರಧಾನವಾದರೆ, ಹವ್ಯಾಸಿ ರಂಗಭೂಮಿಯಲ್ಲಿ ನಾಟಕಕಾರ-ನಿರ್ದೇಶಕ ಮಹತ್ವದ ಸ್ಥಾನ ಪಡೆದ. ಅನೇಕ ವೈವಿಧ್ಯತೆಗಳನ್ನು ಹಾಗೂ ಕೆಲವು ವೈರುಧ್ಯಗಳನ್ನು ತನ್ನೊಡಲೊಳಗಿಟ್ಟುಕೊಂಡಿರುವ ರಂಗಭೂಮಿ ಇಂದು ಹೀಗೆ ನಿಸ್ತೇಜವಾಗಲು ಅನೇಕ ಕಾರಣಗಳಿರಬಹುದು. ಆದರೆ ಮುಖ್ಯ ಕಾರಣ ಮಾತ್ರ ಜಾಗತೀಕರಣವೇ ಆಗಿದೆ.

ಜಾಗತೀಕರಣದಿಂದ ಉಂಟಾದ ಉದಾರೀಕರಣ ಹಾಗೂ ಖಾಸಗೀಕರಣದ ಬೆಳವಣಿಗೆಗಳು ನಮ್ಮ ಸಾಂಸ್ಕೃತಿಕ ನೆಲೆಗಳನ್ನೇ ಸಡಿಲುಗೊಳಿಸತೊಡಗಿವೆ. ಕೇವಲ ರಂಗ ಭೂಮಿಗೆ ಮಾತ್ರ ಈ ಮಾತು ಸೀಮಿತವಾಗಿಲ್ಲ. ಸಾಹಿತ್ಯ-ಕಲೆ-ಸಂಗೀತದಂತಹ ಕ್ಷೇತ್ರಗಳಲ್ಲೂ ಕೂಡ ಪಾಶ್ಚಾತ್ಯ ಸಂಸ್ಕೃತಿ ಪ್ರಭಾವ ದಟ್ಟವಾಗತೊಡಗಿದೆ. ಹಳ್ಳಿಗಳನ್ನು ಇಂದು ಸ್ಟಾರ್ ಚಾನಲ್‌ಗಳು ಪ್ರವೇಶಿಸಿವೆ. ಧಾರ್ಮಿಕ ಹಬ್ಬ-ಆಚರಣೆ-ಜಾತ್ರೆಗಳು ಕಡಿಮೆಯಾಗತೊಡಗಿವೆ. ಈ ಸಂದರ್ಭಕ್ಕೆ ಪೂರಕವಾಗಿ ಪ್ರಯೋಗಗೊಳ್ಳುತ್ತಿದ್ದ ಜಾನಪದ ದೊಡ್ಡಾಟ-ಸಣ್ಣಾಟಗಳು ಇಂದು ಕಾಣೆಯಾಗತೊಡಗಿವೆ. ಪಾರಿಜಾತದಂತಹ ನಾಟಕಗಳನ್ನು ಹಿಂದೆ ಇಂತಹ ಸಾಂಸ್ಕೃತಿಕ ಸಂದರ್ಭಗಳಲ್ಲಿ ಪ್ರಯೋಗಿಸುತ್ತಿದ್ದರು. ಆದರೆ ಅವು ಇಂದು

ಅರೆವೃತ್ತಿ ನಾಟಕ ಸಂಘಗಳಾಗಿವೆ. ಜನಪದ ರಂಗಭೂಮಿಯ ಪ್ರೇಕ್ಷಕರ ಸಂಖ್ಯೆಯೂ ಕೂಡ ವರ್ಷದಿಂದ ವರ್ಷಕ್ಕೆ ಕ್ಷೀಣಿಸತೊಡಗಿದೆ. ದಕ್ಷಿಣ ಕನ್ನಡ ಜಿಲ್ಲೆ ಹಾಗೂ ಕರಾವಳಿ ಪ್ರದೇಶದಲ್ಲಿ ಮಾತ್ರ ಯಕ್ಷಗಾನ ಪ್ರಸಂಗಗಳು ಇಂದಿಗೂ ನಡೆಯುತ್ತಲಿವೆ. ಆದರೆ ಉತ್ತರ ಕರ್ನಾಟಕದ ಜಾನಪದ ರಂಗಭೂಮಿ ನಿಸ್ತೇಜಗೊಂಡಿದೆ. ಜನಪದರನ್ನು ರಂಗ ಚಟುವಟಿಕೆಗಳಲ್ಲಿ ತೊಡಗಿಸಿ, ಅವರಿಗೆ ಉತ್ತೇಜನ ಕೊಡುವ ಮನಸ್ಸುಗಳಿಗೂ ಇಂದು ಕೊರತೆಯಿದೆ. ಜಾಗತೀಕರಣದ ತೀವ್ರದಾಳಿಯಿಂದ ಇಂದು ಹಳ್ಳಿಗಳು ಬಹಳಷ್ಟು ಬದಲಾವಣೆಯಾಗಿವೆ. ನೈತಿಕ ಹಾಗೂ ಧಾರ್ಮಿಕ ನೆಲೆಗಳ ಮೂಲಕ ಬೆಳೆದುಕೊಂಡು ಬಂದಿದ್ದ ಹಿಂದಿನ ಹಳ್ಳಿಗಳು ಇಂದು ನವವಸಾಹತುಶಾಹಿಯ ಆಕ್ರಮಣ ಕ್ಕೊಳಗಾಗಿ ಜರ್ಜರಿತವಾಗಿವೆ. ಗುಟಕಾ ಸಂಸ್ಕೃತಿ ಹಳ್ಳಿಗಳನ್ನು ವ್ಯಾಪಿಸಿಬಿಟ್ಟಿದೆ.

ಕರ್ನಾಟಕದಲ್ಲಿ ವೃತ್ತಿರಂಗಭೂಮಿಯ ಪ್ರಭಾವ ದೊಡ್ಡದು. ಗುಬ್ಬಿ ಕಂಪೆನಿ ಕಾಲದ ಸಂದರ್ಭವನ್ನು ನೆನಪಿಸಿಕೊಂಡರೆ ಅಭಿಮಾನವೆನ್ನಿಸುತ್ತದೆ. ಕನ್ನಡದ ಮೇರು ನಟರನ್ನು ಕೊಟ್ಟ ವೃತ್ತಿರಂಗಭೂಮಿ ಇಂದು ಅವಸಾನದ ಅಂಚಿನಲ್ಲಿದೆ. ಇದಕ್ಕೆ ಅನೇಕ ಕಾರಣಗಳಿವೆ. ಸಿನೆಮಾ ಬಂದಾಗ ರಂಗಭೂಮಿಗೆ ಸ್ವಲ್ಪ ತಡೆಯುಂಟಾಯಿತು. ಆದರೆ ಅದು ಅಂತಹ ದೊಡ್ಡ ಸಮಸ್ಯೆಯಾಗಿರಲಿಲ್ಲ. ಅದನ್ನು ಅರಗಿಸಿಕೊಂಡು ವೃತ್ತಿ ರಂಗಭೂಮಿ ಬೆಳೆದುನಿಂತಿತು. ಇಂದು ಸ್ಯಾಟಲೈಟ್ ಚಾನಲ್‌ಗಳ ದಾಳಿಯಿಂದಾಗಿ ಹಳ್ಳಿ-ಹಳ್ಳಿಗಳಲ್ಲಿ ಡಿಸ್ಕೋ ಡ್ಯಾನ್ಸ್‌ಗಳು ಕಣ್ಣಿಗೆ ರಾಚುತ್ತಿರುವಾಗ ನಾಟಕಗಳನ್ನು ನೋಡುವವರಾರು ? ಹಳ್ಳಿ-ನಗರಗಳೆರಡೂ ಕಡೆಯ ಪ್ರೇಕ್ಷಕರನ್ನೊಳಗೊಂಡಿದ್ದ ವೃತ್ತಿ ರಂಗಭೂಮಿ ಹೀಗೆ ನೆಲಕಚ್ಚಲು ಸ್ಟಾರ್‌ವಾರ್‌ಗಳ ದಾಳಿಯೇ ಪ್ರಮುಖ ಕಾರಣವಾಗಿದೆ. ಜಾನಪದ ನಾಟಕಗಳು ಹಳ್ಳಿಗರಿಗೆ ಸೀಮಿತವಾಗಿದ್ದರೆ, ಹವ್ಯಾಸಿ ನಾಟಕಗಳು ನಗರದವರ ಗಮನ ಸೆಳೆದಿದ್ದವು. ಆದರೆ ವೃತ್ತಿ ನಾಟಕಗಳು ಹಳ್ಳಿ ಮತ್ತು ನಗರಗಳೆರಡರ ಪ್ರೇಕ್ಷಕರ ಗಮನ ಸೆಳೆದಿದ್ದವು. ರಂಗಭೂಮಿಯಲ್ಲಿ ಸಮನ್ವಯ ಸಾಧಿಸುವ ಸಾಧ್ಯತೆಯಿದ್ದ ವೃತ್ತಿ ರಂಗಭೂಮಿಗೆ ಇಂದು ದೊಡ್ಡ ಹೊಡೆತ ಬಿದ್ದಿದೆ. ಡಿಜಿಟಲ್ ಯುಗದ ಈ ಸಂದರ್ಭದಲ್ಲಿ, ಹೈಟೆಕ್ ತಂತ್ರಜ್ಞಾನದ ಈ ಕಾಲದಲ್ಲಿ ರಂಗಭೂಮಿ ಅನೇಕ ಸಮಸ್ಯೆಗಳನ್ನೆದುರಿಸುತ್ತಲಿದೆ. ಸರಕಾರವೂ ಕೂಡ ವೃತ್ತಿ ರಂಗಭೂಮಿಯ ಕಲಾವಿದರಿಗೆ, ಪ್ರಮುಖ ವೃತ್ತಿ ಕಂಪೆನಿಗಳಿಗೆ ಪ್ರೋತ್ಸಾಹ ನೀಡುತ್ತಿಲ್ಲ.

ಇನ್ನು ವೃತ್ತಿ ಕಂಪೆನಿಗಳೂ ಕೂಡ ಇಂದು ಬೀಸುತ್ತಿರುವ ಬಿರುಗಾಳಿಯನ್ನೆದುರಿಸುವಲ್ಲಿ ವಿಫಲವಾಗಿವೆ. ಗುಬ್ಬೀ ವೀರಣ್ಣ, ಏಣಗಿ ಬಾಳಪ್ಪ, ಹಿರಣ್ಣಯ್ಯ, ಗುಡಗೇರಿ ಬಸವರಾಜ, ಚಿಂದೋಡಿ ಲೀಲಾ ಅವರಂತಹ ಮಹತ್ವಾಕಾಂಕ್ಷೆಯುಳ್ಳ ಕಂಪೆನಿ ಮಾಲಿಕರು ಇಂದು ಕಾಣಿಸುತ್ತಿಲ್ಲ. ಕಲಾವಿದರಲ್ಲಿ ಅನೇಕ ಪ್ರತಿಭಾವಂತರಿದ್ದರೂ ಅವರನ್ನು ಕರೆದು ಪ್ರೋತ್ಸಾಹಿಸುವವರಿಲ್ಲ.

ವೃತ್ತಿರಂಗಭೂಮಿಯಲ್ಲಿ ನಟರ ಕೊಡುಗೆ ಮುಖ್ಯವಾಗಿದ್ದರೆ, ಹವ್ಯಾಸಿ ರಂಗಭೂಮಿಯಲ್ಲಿ ನಾಟಕಕಾರ - ನಿರ್ದೇಶಕರ ಕೊಡುಗೆ ಗಮನ ಸೆಳೆಯುತ್ತದೆ. ಶ್ರೀರಂಗ, ಕೈಲಾಸಂ, ಕಾರ್ನಾಡ್, ಕಂಬಾರರಂತಹ ನಾಟಕಕಾರರು, ಬಿ.ವಿ. ಕಾರಂತ, ಪ್ರಸನ್ನ, ಸಿ.ಜಿ.ಕೆ.ಯವರಂತಹ ನಿರ್ದೇಶಕರು ಮುಂದಿನ ದಿನಗಳಲ್ಲಿ ಬೆಳೆದುಬರಲಿಲ್ಲ. ಶಿವಪ್ರಕಾಶ-ಬಸವಲಿಂಗಯ್ಯನವರಂತಹ ಪ್ರತಿಭೆಗಳು ಬಂದರೂ, ಹವ್ಯಾಸಿ ರಂಗಭೂಮಿ ವಿಸ್ತಾರಗೊಳ್ಳಲಿಲ್ಲ. ಒಂದು ಕಾಲಕ್ಕೆ ಹವ್ಯಾಸಿ ಕಲಾವಿದರು ತಮ್ಮ ಸ್ವಇಚ್ಛೆಯಿಂದ, ಆಸಕ್ತಿಯಿಂದ ಯಾವ ಸಂಭಾವನೆಯನ್ನೂ ಕೇಳದೆ ರಂಗಭೂಮಿಗೆ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು. ವೃತ್ತಿಯವರ ಹಾಗೆ ನಾವು ಹಣಕ್ಕಾಗಿ ಕಲಾಸೇವೆ ಮಾಡುವವರಲ್ಲವೆಂದು ಅಭಿಮಾನದಿಂದ ಹೇಳುತ್ತಿದ್ದರು. ಆದರೆ ಇಂದು ಏನಾಗಿದೆ ? ವೃತ್ತಿಯವರಿಗಿಂತ ಹೆಚ್ಚು ಹಣವನ್ನು ಇಂದಿನ ಹವ್ಯಾಸಿ ಕಲಾವಿದರು ಪಡೆಯತೊಡಗಿದ್ದಾರೆ. ರಂಗಭೂಮಿಯನ್ನು ಮರೆತು ಕಿರುತೆರೆಯ ಬೆನ್ನು ಹತ್ತಿದ್ದಾರೆ. ವಿವಿಧ ದೂರದರ್ಶನಗಳ ಕಿರುತೆರೆಯ ಸೀರಿಯಲ್‌ಗಳಲ್ಲಿ ಭಾಗವಹಿಸಿ ತಮಗೆ ಸಿಗುವ ಸಂಭಾವನೆಯೊಂದೇ ಮುಖ್ಯವೆಂದು ತಿಳಿದಿದ್ದಾರೆ. ಇಂದು ಯಾವುದೇ ಜಿಲ್ಲೆ-ನಗರಗಳಲ್ಲಿ ಒಂದು ನಾಟಕ ಮಾಡಬೇಕೆಂದರೆ ಒಳ್ಳೆಯ ಕಲಾವಿದರು ಸಿಗುತ್ತಿಲ್ಲ.



ಸಂಭಾವನೆ ಸಿಗದ ರಂಗಭೂಮಿಯ ಕಡೆ ಈಗ ಅವರ ಗಮನ ಹರಿಯುವುದಿಲ್ಲ. ಹವ್ಯಾಸಿ ರಂಗಭೂಮಿಯ ಕೇಂದ್ರವಾಗಿದ್ದ ನಟರು-ನಿರ್ದೇಶಕರೇ ಹೀಗೆ ಸಂಭಾವನೆಯ ಬೆನ್ನು ಹತ್ತಿ ಹೋದಾಗ ಹವ್ಯಾಸಿ ರಂಗಭೂಮಿಯನ್ನು ಬೆಳೆಸುವವರಾರು ? ಇದು ಇಂದಿನ ದೊಡ್ಡ ಪ್ರಶ್ನೆ. ಸರಕಾರ ನಾಟಕ ಅಕಾಡೆಮಿಗೆ ಹೆಚ್ಚಿನ ಧನಸಹಾಯ ನೀಡುತ್ತಿಲ್ಲವೆಂದು ಅಕಾಡೆಮಿಯು ತನ್ನ ಅಸಹಾಯಕತೆಯನ್ನು ಹೇಳತೊಡಗಿದೆ: ರಂಗತರಬೇತಿ ಕೇಂದ್ರಗಳಿಲ್ಲ, ರಂಗಶಿಬಿರಗಳಿಲ್ಲ. ಪರಿಸ್ಥಿತಿ ಹೀಗಿದ್ದಾಗ ಹೊಸ ನಟರು-ನಿರ್ದೇಶಕರು ಹುಟ್ಟಿ ಬರಲಾರರು.

ಜಾನಪದ ಕಲೆಗಳು ನಶಿಸಿಹೋಗತೊಡಗಿವೆ, ಜಾನಪದ ರಂಗಭೂಮಿ ನಿಸ್ತೇಜಗೊಂಡಿದೆ, ರಂಗಗೀತೆಗಳು ಕೇಳದಾಗಿವೆ. ಇದಕ್ಕೆಲ್ಲಾ ವರ್ತಮಾನದ ಬದಲಾವಣೆಗಳೇ ಕಾರಣಗಳಾಗಿವೆ. ಜಾನಪದ ರಂಗಕಲೆಗಳಾಗಲಿ, ವೃತ್ತಿ ನಾಟಕಗಳಾಗಲಿ ಇಂದು ಅವು ತಮ್ಮ ಮೂಲದ ನೆಲೆಯನ್ನು ಕಳೆದುಕೊಂಡು ದೂರದರ್ಶನದ ಚಾನಲ್‌ಗಳಲ್ಲಿ ಪ್ರಸಾರಗೊಳ್ಳುತ್ತಲಿವೆ. ಇದರಿಂದ ಒಂದು ಕಲೆ ಏಕಕಾಲಕ್ಕೆ ಹಲವಾರು ಜನರನ್ನು ತಲುಪಲು ಸಾಧ್ಯವಾಗಿರಬಹುದು. ಆದರೆ ಆ ರಂಗಮಾಧ್ಯಮದ ಜೀವಂತಿಕೆಯು ಇತರ ಮಾಧ್ಯಮಗಳ ಮೂಲಕ ಬಂದಾಗ ಕಳೆದುಹೋಗುತ್ತದೆ.

ಶಿವರಾಮ ಕಾರಂತರು ಯಕ್ಷಗಾನದ ಹೊಸ ಬೆಳವಣಿಗೆಗೆ ಕಾರಣರಾದರು. ಯಕ್ಷಗಾನದ ಸಾಂಪ್ರದಾಯಿಕ ವ್ಯವಸ್ಥೆಯನ್ನು ಮುರಿದು, ಆಧುನಿಕ ಪರಂಪರೆಯೊಂದನ್ನು ಕ್ಷೇತ್ರದಲ್ಲಿ ಕಟ್ಟಿ ನಿಲ್ಲಿಸಿದ ಕಾರಂತರು ಅಭಿನಂದನಾರ್ಹರಾಗಿದ್ದಾರೆ. ಆ ಸಂದರ್ಭದಲ್ಲಿ ಕೆಲವರು "ಕಾರಂತರು ಯಕ್ಷಗಾನವನ್ನು ಕೆಡಿಸುತ್ತಿದ್ದಾರೆ, ಅವರ ಪ್ರಯೋಗಗಳು ಮೂಲ ಧಾಟಿಯನ್ನೇ ಮರೆತುಬಿಟ್ಟಿವೆ" ಎಂದು ಟೀಕೆ ಮಾಡಿದರು. ಆದರೆ ನನ್ನ ಪ್ರಕಾರ ಇದೊಂದು ಮಹತ್ವದ ಬೆಳವಣಿಗೆ. ಯಾವುದೇ ಕಲೆ ಚಲನಶೀಲಗೊಳ್ಳಬೇಕಾದರೆ, ಅದು ಜೀವಂತಿಕೆಯಿಂದ ಬೆಳೆಯಬೇಕಾದರೆ ವರ್ತಮಾನದ ಅನಿವಾರ್ಯತೆಗಳನ್ನು ಗಮನಿಸಬೇಕಾಗುತ್ತದೆ. ಮೂರು ದಿವಸ ಪ್ರಯೋಗವಾಗುತ್ತಿದ್ದ ಯಕ್ಷಗಾನವನ್ನು ಮೂರು ತಾಸಿಗೆ ಸಂಕ್ಷಿಪ್ತಗೊಳಿಸಿದ ಕಾರಂತರು ಆಧುನಿಕರನ್ನು, ನಗರದ ಪ್ರೇಕ್ಷಕರನ್ನು ಯಕ್ಷಗಾನದತ್ತ ಆಕರ್ಷಿಸಿದರು. ಏಕತಾನತೆಯನ್ನು, ಪುನರಾವರ್ತನೆಯನ್ನು ಕೈಬಿಟ್ಟು ನೇರ-ಸಂಕ್ಷಿಪ್ತ ಶೈಲಿಯನ್ನಳವಡಿಸಿ ಹೊಸತನವನ್ನು ಕಟ್ಟಿಕೊಟ್ಟರು. ಯಕ್ಷಗಾನದ ಮೂಲ ಶೈಲಿ ಹಾಗೂ ಅದರ ಒಟ್ಟು ಸ್ವರೂಪವನ್ನುಳಿಸಿಕೊಂಡೇ ಅದಕ್ಕೊಂದು ಹೊಸ ಚಾಲನೆ ನೀಡಿದ್ದು, ಯಕ್ಷಗಾನವು ಆಧುನಿಕ ಸಂದರ್ಭದಲ್ಲೂ ಬೆಳೆದು ನಿಲ್ಲಲು ಮುಖ್ಯ ಕಾರಣವಾಯಿತು. ಇಂತಹ ಪ್ರಯತ್ನಗಳು ಹೀಗೆ ಗಟ್ಟಿಯಾಗಿ ಉತ್ತರ ಕರ್ನಾಟಕದ ಪ್ರಸಿದ್ಧ ಕಲೆಯಾಗಿರುವ ದೊಡ್ಡಾಟದ ಬಗೆಗೆ ನಡೆಯಲಿಲ್ಲ. ಆದರೆ ಈ ಒಂದು ದಶಕದಲ್ಲಿ ಧಾರವಾಡ ಜಿಲ್ಲೆಯ ಶಿಗ್ಗಾಂವಿಯಲ್ಲಿ 'ಕರ್ನಾಟಕ ರಾಜ್ಯ ದೊಡ್ಡಾಟ ಗುಂಪು' ಎಂಬ ಸಂಸ್ಥೆಯನ್ನು ಕಟ್ಟಿಕೊಂಡು ದೊಡ್ಡಾಟಗಳನ್ನು ಪ್ರಯೋಗಿಸಿದ ಕೀರ್ತಿ ಶ್ರೀ ಸೊಲಬಕ್ಕನವರ ಅವರಿಗೆ ಸಲ್ಲುತ್ತದೆ.

ಹೀಗೆ ಒಂದು ಕಲೆಯನ್ನು ಹೊಸಯುಗಕ್ಕೆ ತಕ್ಕಂತೆ

ಪರಿಷ್ಕರಿಸಿ, ಅದನ್ನು ಮುರಿದು ಕಟ್ಟುವುದು ಕಲೆಯ ಬೆಳವಣಿಗೆಯ ಪ್ರಮುಖ ಕಾರ್ಯವಾಗುತ್ತದೆ. ಇದಕ್ಕೆ ಸಂಪ್ರದಾಯವಾದಿಗಳ ವಿರೋಧ ಬಂದರೂ ಕೂಡ ರಂಗಕಲೆಗಳ ಉಳಿವಿನ ದೃಷ್ಟಿಯಿಂದ ಇಂತಹ ಪ್ರಯೋಗಗಳು ಅನಿವಾರ್ಯವಾಗುತ್ತವೆ. ಕರಾವಳಿ ಕರ್ನಾಟಕದಲ್ಲಿ ಯಕ್ಷಗಾನವನ್ನು ಸುಶಿಕ್ಷಿತರು-ಪದವೀಧರರು ಕಟ್ಟಿ ಬೆಳೆಸಿದರೆ, ಉತ್ತರ ಕರ್ನಾಟಕದಲ್ಲಿ ಅದೇ ಬಯಲಾಟವನ್ನು ಸುಶಿಕ್ಷಿತರು ಕಣ್ಣೆತ್ತಿ ನೋಡಲಿಲ್ಲ. ಆಧುನೀಕರಣಕ್ಕೆ ಒಳಗಾಗದ ಈ ರಂಗಕಲೆ ಇಂದು ತನ್ನ ಸಾಂಪ್ರದಾಯಿಕ ಜಡತ್ವದಿಂದ, ಜನಪದರ ಅಸಹಾಯಕತೆಯಿಂದ ನಶಿಸುವ ಅಂಚಿನಲ್ಲಿದೆ.

ಇಲ್ಲಿ ಒಂದು ಅಂಶವನ್ನು ಸೂಕ್ಷ್ಮವಾಗಿ ಗಮನಿಸಬೇಕು; ಒಂದು ಕಲಾ ಮಾಧ್ಯಮವನ್ನು ಆಧುನೀಕರಣಗೊಳಿಸಿ, ಅದರ ಚಲನಶೀಲತೆಯನ್ನುಳಿಸಿಕೊಳ್ಳುವುದು ಒಂದು ರೀತಿಯಾದರೆ, ಒಂದು ಮಾಧ್ಯಮವನ್ನು ಇನ್ನೊಂದು ಮಾಧ್ಯಮದಲ್ಲಿ ಲೀನಗೊಳಿಸಿ ಅದರ ಮೂಲ ನೆಲೆಯನ್ನು ಕಳೆದುಕೊಳ್ಳುವುದು ಮತ್ತೊಂದು ರೀತಿ. ಮೊದಲನೆಯ ರೀತಿಗಿಂತ ಎರಡನೆಯ ರೀತಿ ಅಪಾಯಕಾರಿಯಾಗಿ ಕಾಣಿಸುತ್ತದೆ. ಮೊದಲನೆಯ ರೀತಿಯಲ್ಲಿ ಒಂದು ರಂಗಕಲೆ ಆಧುನೀಕರಣಗೊಳ್ಳುವುದರ ಮೂಲಕ ತನ್ನ ಮೂಲತನವನ್ನುಳಿಸಿಕೊಂಡೇ ವರ್ತಮಾನಕ್ಕೆ ಹತ್ತಿರವಾಗುತ್ತದೆ. ಆದರೆ ಎರಡನೆಯ ರೀತಿ ಒಂದು ಮಾಧ್ಯಮವನ್ನು ಇನ್ನೊಂದು ಮಾಧ್ಯಮದಲ್ಲಿ ಸೇರಿಸಿಬಿಟ್ಟಾಗ, ಅದು ತನ್ನ ಮೂಲ ನೆಲೆಯನ್ನೇ ಕಳೆದುಕೊಂಡು ಇನ್ನೊಂದರ ಮೇಲೆ ಸದಾ ಅವಲಂಬಿತವಾಗಬೇಕಾಗುತ್ತದೆ. ಇಂದು ನಡೆದಿರುವುದು ಇದೇ ಆಗಿದೆ. ದೂರದರ್ಶನದವರು ಕರೆದಾಗ ಮಾತ್ರ ಹೋಗಿ ನಾಟಕ ಪ್ರಯೋಗ ಮಾಡುವುದು ರಂಗಭೂಮಿಯ ಮೂಲ ಧೋರಣೆಯನ್ನೇ ಮರೆತಂತಾಗುತ್ತದೆ.

ವಿವಿಧ ರಂಗಭೂಮಿಗಳಲ್ಲಿರುವ ಸ್ಥಗಿತತೆಯನ್ನು ಗುರುತಿಸಿ, ಆಧುನೀಕರಣಗೊಳಿಸಿ ಅವುಗಳನ್ನು ಜೀವಂತಗೊಳಿಸುವುದು ಇಂದಿನ ಅಗತ್ಯವಾಗಿದೆ. ನಮ್ಮ ರಂಗಕಲೆಗಳ ಬಗೆಗೆ ನಮ್ಮ ಯುವಕರಲ್ಲಿ ಅಭಿಮಾನವನ್ನು ಹುಟ್ಟಿಸಿ, ನಮ್ಮ ಕಲೆಗಳು ನಮ್ಮ ಸಂಸ್ಕೃತಿಯ ಹೆಮ್ಮೆಯೆಂಬುದನ್ನು ಸುಶಿಕ್ಷಿತರಲ್ಲಿ ಸ್ಪಷ್ಟಪಡಿಸಬೇಕಾಗಿದೆ.

ಇಂದು ಸಮಾಜ ವ್ಯವಸ್ಥೆಯಲ್ಲಿ ಸಾಮುದಾಯಿಕ ಪ್ರಜ್ಞೆ ಕಡಿಮೆಯಾಗುತ್ತ, ವ್ಯಕ್ತಿ ಪ್ರಜ್ಞೆ ಹೆಚ್ಚಾಗತೊಡಗಿದೆ. ಕೊಳ್ಳುಬಾಕ ಸಂಸ್ಕೃತಿ ಬೆಳೆಯತೊಡಗಿದೆ. ನಮ್ಮ ಸೃಜನಶೀಲತೆಯನ್ನು ಕಳೆದುಕೊಂಡು ಭೋಗಜೀವನವೊಂದೇ ಅಂತಿಮಗುರಿಯೆಂದು ತಿಳಿದುಕೊಂಡಿದ್ದೇವೆ. ನಮ್ಮ ಜಾಹೀರಾತು ಸಂಸ್ಕೃತಿ ನಮ್ಮನ್ನಿಂದು ಮಾರಾಟದ ಸರಕುಗಳನ್ನಾಗಿ ಮಾಡಿದೆ. ಮುಂಜಾನೆಯಿಂದ ಸಂಜೆಯವರೆಗೆ ಪ್ರಸಾರವಾಗುತ್ತಿರುವ ಜಾಹೀರಾತುಗಳಲ್ಲಿ ಮೈ, ಕೈ, ತಲೆ, ಮುಖ ಇತ್ಯಾದಿಗಳನ್ನು ತಿಕ್ಕಿಕೊಳ್ಳುವ ಪದಾರ್ಥಗಳೇ ಜಾಹೀರಾತಿನ ಮೂಲಕ ಕಿವಿಗೆ ಅಪ್ಪಳಿಸುತ್ತವೆ. ಈ ಅಬ್ಬರದಲ್ಲಿ, ಈ ಸಪ್ಪಳದಲ್ಲಿ ನಮ್ಮ ಮನಸ್ಸು ತಿಕ್ಕಿಕೊಳ್ಳುವ, ನಮ್ಮ ಆತ್ಮ ಶೋಧನೆ ಮಾಡಿಕೊಳ್ಳುವ ಕ್ರಿಯೆ ಸ್ಥಗಿತಗೊಂಡಿದೆ. ಈ ಮನಸ್ಸು ತಟ್ಟುವ ಕ್ರಿಯೆ ಹೀಗೆ ಸ್ಥಗಿತಗೊಳ್ಳತೊಡಗಿದ್ದರಿಂದಲೇ ನಮ್ಮ ಸೃಜನಶೀಲ ಕಲೆಗಳು ಇಂದು ಅವಸಾನದ ಅಂಚನ್ನು ತಲುಪಿವೆ.

ಜನಸಾಮಾನ್ಯರಲ್ಲಿ ಕೊಳ್ಳುಬಾಕ ಸಂಸ್ಕೃತಿಯನ್ನು ಬೆಳೆಸಿ, ತಮ್ಮಲ್ಲಿರುವ ನಿರುಪಯೋಗಿ ವಸ್ತುಗಳಿಗೆ ಮಾರುಕಟ್ಟೆ ಕಲ್ಪಿಸುವ, ಜಾಗತೀಕರಣವನ್ನು ಒಂದು ಅಸ್ತ್ರವನ್ನಾಗಿ ಮಾಡಿಕೊಂಡಿರುವ ಶ್ರೀಮಂತ ದೇಶಗಳ ಹುನ್ನಾರವನ್ನು ಸ್ಪಷ್ಟಪಡಿಸಿಕೊಳ್ಳದಿದ್ದರೆ ನಮ್ಮ ಸಾಂಸ್ಕೃತಿಕ ಲೋಕ ಬೆಳೆಯದು. ಈ ಸಮಾಜ ವ್ಯವಸ್ಥೆಯಲ್ಲಿ ವಿವಿಧ ಕ್ಷೇತ್ರಗಳು ತೋರಿಕೆಗೆ ಬೇರೆ ಬೇರೆಯಾಗಿ ಕಂಡರೂ ಅವುಗಳ ಸಮನ್ವಯತೆ ಬಹುಮುಖ್ಯವಾಗಿದೆ. ಇಂದು ನಾವು ರಂಗಭೂಮಿಯ ಬಗೆಗೆ ಚರ್ಚೆ ಮಾಡುವುದೆಂದರೆ, ನಮ್ಮ ಆರ್ಥಿಕ ರಂಗದ ಬಗೆಗೆ ನಮ್ಮ ರಾಜಕೀಯ ರಂಗದ ಬಗೆಗೆ ಚರ್ಚೆ ಮಾಡಿದಂತೆ. ಪ್ರತಿಯೊಂದು ಕ್ಷೇತ್ರಕ್ಕೂ ಒಂದಕ್ಕೊಂದು ಸಂಬಂಧವಿದೆ. ವರ್ತಮಾನದ ಆಗುಹೋಗುಗಳನ್ನು ಮರೆತು, ನಮ್ಮೆದುರೇ ನಡೆಯುತ್ತಿರುವ ಜಾಗತೀಕರಣದ ಹುನ್ನಾರಗಳನ್ನು ಕೈಬಿಟ್ಟು, ನವವಸಾಹತುಶಾಹಿಯ ಆಕ್ರಮಣವನ್ನು ಕಡೆಗಣಿಸಿ ಕೇವಲ ರಂಗಭೂಮಿಯ ಬಗೆಗೆ ಮಾತನಾಡುವುದು ನಿರರ್ಥಕವಾಗುತ್ತದೆ. ಆದ್ದರಿಂದ ಪ್ರಸ್ತುತ ರಂಗಭೂಮಿಯ ಸವಾಲುಗಳು ನಮ್ಮ ಸಮಾಜ ವ್ಯವಸ್ಥೆಯ ಸವಾಲುಗಳೂ ಆಗಿವೆ. ಇಂತಹ ಅನೇಕ ಸವಾಲುಗಳನ್ನೆದುರಿಸುತ್ತಲೇ ನಮ್ಮ ಕಲೆ-ರಂಗಭೂಮಿ ಬೆಳೆದುಕೊಂಡು ಬಂದಿವೆ. ಅಂತಹ ಬೆಳವಣಿಗೆಗೆ ಇಂದು ನಾವೆಲ್ಲರೂ ಕೂಡಿಯೇ ಶ್ರಮಿಸಬೇಕಾಗಿದೆ.

*(ಚಿತ್ರ ಕೃಪೆ : ಕರ್ನಾಟಕ ಜನಪದ ಕಲೆಗಳ ಕೋಶ, ಚಿರಿಯರ ಕರ್ನಾಟಕ)*

**ಡಾ|| ಬಸವರಾಜ ಸಬರದ**
ಪ್ರವಾಚಕರು, ಕನ್ನಡ ಅಧ್ಯಯನ ಸಂಸ್ಥೆ ಗುಲ್ಬರ್ಗಾ ವಿಶ್ವವಿದ್ಯಾಲಯ,
ಗುಲ್ಬರ್ಗಾ-೫೮೫ ೧೦೬

## ಪಲಾಯನ

ಹಾಲು ಬಿಟ್ಟು ಹೆಜ್ಜೆ ಕಲಿತ
ಮುದ್ದು ಕಂದಮ್ಮಗಳಿಗೆಲ್ಲ
ಗೇಟು ದಾಟಿ ಬೀದಿಗಿಳಿವ
ವಯೋ ಸಹಜ ಚಪಲ.

ಕಣ್ಣೆದುರು ಹೊಸ ಲೋಕ
ಮೈಯ ಮರೆಸುವ ನಾಕ
ಅತಿಶಯದ ಬೆರಗಿನಲಿ
ಮಾತಿಲ್ಲ, ಮೂಕ.

ಹಾರಿ ಬಳಿ ಬಾ ಮಗುವೆ
ಬೇಕಾದ್ದು ನಿನಗೀವೆ,
ಕೈಯ ಚಾಚಿದ ಭಂಗಿ,
ಕಂದನಿಗೆ ಮೈಮರವೆ.

ಚೂಟಿ ಚುರುಕಿನ ಕಂದ
ಕಂಡವರಿಗಾನಂದ,



ಎತ್ತಿ, ಆಡಿಸಿ, ಕುಣಿಸಿ,
ನೋಡಿದರು ಚಂದ.

ಯಾರದೋ ಮನೆಯೊಳಗೆ
ಕಂದನಿಗೆ ಬೆಳವಣಿಗೆ
ಬೇಡಿದ್ದು ಬಯಸಿದ್ದು
ದಕ್ಕುವುದು ಕ್ಷಣದೊಳಗೆ

ಎಂದೋ ಅಮ್ಮನ ನೆನಹು
ಎದೆಯೊಳಗೆ ತಳಮಳವು,
ಚಕ್ರಭೀಮನ ಕೋಟೆ,
ಬಂಧಿಯಾಗಿದೆ ಮಗುವು.

ಮನೆಯ ಕದ ತೆರೆದಿಟ್ಟು
ಜೀವ ಕಣ್ಣಲಿ ಇಟ್ಟು
ಅಮ್ಮನದು ಹಲವರಿಕೆ,
'ಬಾ ನನ್ನ ಪುಟ್ಟು'

**ಮಧುಮತಿ ಉಡುಪ**
''ಗೌರಿ, ೪ನೇ ಕ್ರಾಸ್, ಗಾಂಧಿನಗರ
ಬಡಾವಣೆ, ಶಿವಮೊಗ್ಗ -೫೭೭೨೦೧

## ವಿನೋದ ಗಣಿತ

### ನವೆಂಬರ್ ತಿಂಗಳ ಪ್ರಶ್ನೆಗೆ ಉತ್ತರ

ಒಂದು ರಾಷ್ಟ್ರದಲ್ಲಿರುವ ಭಯಂಕರವಾದಿಯೊಬ್ಬನನ್ನು ಅವನಿರುವ 'ಅ' ಪಟ್ಟಣದಿಂದ ಆ ರಾಷ್ಟ್ರದೊಳಗೇ ಇರುವ 'ಅ'ನಿಂದ ಅತ್ಯಧಿಕ ದೂರವಿರುವ 'ಕ' ಎಂಬ ಇನ್ನೊಂದು ಪಟ್ಟಣಕ್ಕೆ ಗಡಿಪಾರು ಮಾಡಲಾಗುತ್ತದೆ. ಕೆಲವು ಸಮಯದ ನಂತರ 'ಕ' ಪಟ್ಟಣದಿಂದ ಅತ್ಯಧಿಕ ದೂರವಿರುವ ಮತ್ತೊಂದು ಪಟ್ಟಣ 'ಗ' ಗೆ ಗಡಿಪಾರು ಮಾಡಲಾಗುತ್ತದೆ. ಅಲ್ಲದೆ 'ಗ' ಪಟ್ಟಣವು 'ಅ'ಗಿಂತ ಭಿನ್ನವಾದ ಇನ್ನೊಂದು ಪಟ್ಟಣವಾಗಿದೆ. ಇದೇ ರೀತಿಯ *ಗಡಿಪಾರು* ಪ್ರಕ್ರಿಯೆ ನಿರಂತರವಾಗಿ ನಡೆಯುತ್ತಿರುತ್ತದೆ. ಮುಂದಿನ ಯಾವುದೇ ಸ್ತರದಲ್ಲಿ ಭಯಂಕರವಾದಿಯು ಆರಂಭದಲ್ಲಿ ಅವನಿದ್ದ 'ಅ' ಪಟ್ಟಣಕ್ಕೆ ಪುನಃ ಪ್ರವೇಶ ಮಾಡಲು ಸಾಧ್ಯವಿಲ್ಲವೆಂದು ತೋರಿಸಬೇಕಾಗಿದೆ.

ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ 'ಅ' ಪಟ್ಟಣದಿಂದ ಆ ರಾಷ್ಟ್ರದಲ್ಲಿರುವ ಪಟ್ಟಣಗಳಲ್ಲಿ ಗರಿಷ್ಠ ದೂರವಿರುವ ಪಟ್ಟಣವೆಂದರೆ 'ಕ'. ಹೀಗಾಗಿ 'ಅ' ಕೇಂದ್ರ ಮಾಡಿಕೊಂಡು 'ಅ' ನಿಂದ 'ಕ'ಗಿರುವ ದೂರದಷ್ಟು ತ್ರಿಜ್ಯವುಳ್ಳ ವೃತ್ತವನ್ನೆಳೆದರೆ ಆ ವೃತ್ತದ ಪರಿಧಿ ಒಳಗೆ ಆ ರಾಷ್ಟ್ರದ ಉಳಿದೆಲ್ಲ ಪಟ್ಟಣಗಳೂ ಇರುತ್ತವೆ, ಎಂಬುದು.

ಈಗ 'ಕ'ನಿಂದ ಗರಿಷ್ಠ ದೂರದಲ್ಲಿರುವ ಪಟ್ಟಣ 'ಗ', 'ಅ'ಗಿಂತ ಬೇರೆಯಾಗಿರುವುದರಿಂದ 'ಕ' ಮತ್ತು 'ಗ'ಗಳ ನಡುವಣ ದೂರ ಹಿಂದೆ ಹೇಳಿದ ವೃತ್ತದ ತ್ರಿಜ್ಯಕ್ಕಿಂತ ಅಧಿಕ.

ಮತ್ತೊಮ್ಮೆ 'ಗ' ನಿಂದ ಗರಿಷ್ಠ ದೂರದಲ್ಲಿರುವ 'ಘ' ಪಟ್ಟಣಕ್ಕೆ ಗಡಿಪಾರಾದಾಗ 'ಘ' ಪಟ್ಟಣವು 'ಕ'ಗಿಂತ ವಿಭಿನ್ನವಾಗಿದ್ದು 'ಗ' ಮತ್ತು 'ಘ'ಗಳ ನಡುವಣ ದೂರ 'ಕ' ಮತ್ತು 'ಗ'ಗಳ ನಡುವಣ ದೂರಕ್ಕಿಂತ ಅಧಿಕ.

ಅಷ್ಟಾಗಿ 'ಗ' ಮತ್ತು 'ಘ'ಗಳ ನಡುವಿನ ದೂರ ಹಿಂದೆ ಹೇಳಿದ ವೃತ್ತದ ತ್ರಿಜ್ಯಕ್ಕಿಂತ ಅಧಿಕ.

ಹೀಗೆ ಮುಂದುವರಿಯುತ್ತಾ ಪ್ರತಿ ಗಡಿಪಾರಿನ ಸಮಯದಲ್ಲಿ ಕಂಡುಬರುವ ಎರಡು ಪಟ್ಟಣಗಳ ದೂರ ಯಾವಾಗಲೂ ಹಿಂದೆ ಹೇಳಿದ ವೃತ್ತದ ತ್ರಿಜ್ಯಕ್ಕಿಂತ 'ಅಧಿಕ'ವಾಗಿಯೇ ಉಳಿಯುತ್ತದೆ.

ಹೀಗಿರುವಾಗ ಗಡಿಪಾರಿನ ಯಾವುದೇ ಸಂದರ್ಭದಲ್ಲಿ ಬೇರೊಂದು ಪಟ್ಟಣದಿಂದ ವೃತ್ತದ ಕೇಂದ್ರದಲ್ಲಿರುವ 'ಅ' ಪಟ್ಟಣಕ್ಕೆ ಬಂದು ಸೇರುವ ಸಾಧ್ಯತೆಯೇ ಇಲ್ಲ.

□□

# ಕುರ್ತಕೋಟಿಯವರ ಎರಡು ವಿಮರ್ಶಾ ಸಂಪುಟಗಳು

"ಕನ್ನಡ ಸಾಹಿತ್ಯ ಸಂಗಾತಿ" ಮತ್ತು "ನೂರು ಮರ ನೂರು ಸ್ವರ" ಈ ಗ್ರಂಥಗಳು ಕನ್ನಡದ ಅನನ್ಯ ವಿಮರ್ಶಾ ಗ್ರಂಥಗಳೆಂಬುದರಲ್ಲಿ ಎರಡು ಮಾತಿರಲು ಸಾಧ್ಯವೇ ಇಲ್ಲ. ಇಲ್ಲಿಯ ಅಭ್ಯಾಸದ ಆಳ ಮತ್ತು ವಿಸ್ತಾರಗಳು ಎಷ್ಟಿವೆ ಎಂದರೆ, ಈ ಗ್ರಂಥಗಳಲ್ಲಿ ವ್ಯಕ್ತವಾದ ಧೋರಣೆಗಳನ್ನು ಸೆರೆಹಿಡಿಯಲು ಬಹುದೊಡ್ಡ ಪ್ರಬಂಧವನ್ನೇ ಬರೆಯಬೇಕಾದೀತು. ಈ ಲೇಖನದ ವ್ಯಾಪ್ತಿಯನ್ನು ಅದು ಮೀರಿರುವುದರಿಂದ ಕುರ್ತಕೋಟಿಯವರ ಈ ಎರಡು ಗ್ರಂಥಗಳ ಪರಿಚಯವನ್ನು ನೀಡುವ ಪ್ರಯತ್ನವನ್ನು ಮಾತ್ರ ಮಾಡಬಹುದು. "ಕನ್ನಡ ಸಾಹಿತ್ಯ ಸಂಗಾತಿ"ಗೆ ಬರೆದ ಪ್ರಸ್ತಾವನೆಯೇ ಒಂದು ಪಾಂಡಿತ್ಯ ಪೂರ್ಣವಾದ ಮತ್ತು ಹಲವಾರು ಒಳನೋಟಗಳನ್ನು ಒಳಗೊಂಡ ವಿದ್ವತ್‌ಪೂರ್ಣ ಪ್ರಬಂಧವಾಗಿದೆ. "ಹಳೆಯ ಕನ್ನಡ ಸಾಹಿತ್ಯವನ್ನು ಅಭ್ಯಾಸ ಮಾಡುವಾಗ ಇನ್ನಾದರೂ ನಮ್ಮ ದೃಷ್ಟಿಕೋನ ಬದಲಾಗಬೇಕು. ಹಳೆಯ ಸಾಹಿತ್ಯವೆಲ್ಲ ರೂಢಿಬದ್ಧವಾದದ್ದು, ಅಲ್ಲಿ ಸ್ವತಂತ್ರ ದೃಷ್ಟಿಗೆ ಅವಕಾಶವಿಲ್ಲವೆಂಬ ನಿಲುವು ರೂಢಮೂಲವಾಗಿದೆ. ಆದರೂ ನಿಯಮಬದ್ಧವಾದ ಸಾಹಿತ್ಯದ ಅರ್ಥವಂತಿಕೆಯಾದರೂ ಏನು ಎಂಬುದನ್ನು ಇನ್ನಾದರೂ ತಿಳಿದುಕೊಳ್ಳಬೇಕಾಗಿದೆ." ಪ್ರಸ್ತಾವನೆಯಲ್ಲಿ ಬರುವ ಈ ಮಾತುಗಳು ಈ ಗ್ರಂಥ ರಚನೆಗಳ ಹಿಂದಿರುವ ಉದ್ದೇಶವನ್ನು ಸೂಚ್ಯವಾಗಿಯಾದರೂ ಸ್ಪಷ್ಟವಾಗಿ ಹೇಳುತ್ತವೆ. ಪ್ರಸ್ತಾವನೆಯಲ್ಲಿಯ ಒಳನೋಟಗಳು ಕನ್ನಡದ ಹಳಗನ್ನಡ ಮತ್ತು ನಡುಗನ್ನಡ ಕಾವ್ಯದ ಬೆಳವಣಿಗೆಗಳನ್ನು ಮತ್ತು ಕೊಂಡಿಗಳನ್ನು ಬಹುಸ್ಪಷ್ಟವಾಗಿ ಗುರುತಿಸುತ್ತ ಹೋಗುತ್ತವೆ. ಆದರೆ ಇಂಥ ಒಂದು ಪ್ರಯತ್ನದ ಹಿಂದೆ ಆಂಗ್ಲ ಸಾಹಿತ್ಯದ ಮತ್ತು ಸಂಸ್ಕೃತ ಸಾಹಿತ್ಯದ ಅಭ್ಯಾಸದ ಅಗಾಧವಾದ ಹಿನ್ನೆಲೆಯಿರುವುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಈ ಗ್ರಂಥದುದ್ದಕ್ಕೂ ಸಂಸ್ಕೃತ, ಆಂಗ್ಲ ಸಾಹಿತ್ಯ ಮತ್ತು ಕನ್ನಡ ಮಹಾಕಾವ್ಯದ ಅಭ್ಯಾಸಗಳು ನಿಚ್ಚಳವಾಗಿ ತಮ್ಮ ಪ್ರಭಾವವನ್ನು ಬೀರಿವೆ.

ಹಲ್ಮಿಡಿ ಶಾಸನದಿಂದ (ಕ್ರಿ. ಶ. ೪೫೦) ಹಿಡಿದು ಮುದ್ದಣ (ಕ್ರಿ. ಶ. ೧೮೭೦ - ೧೯೦೧) ಮತ್ತು "ಗೋವಿನ ಕತೆ ಮತ್ತು ಕೆರೆಗೆ ಹಾರ"ದವರೆಗೆ ಸಾಹಿತ್ಯ ಸಂಗಾತಿಯಲ್ಲಿ ಒಟ್ಟು ೫೫ ಲೇಖನಗಳಿವೆ. ಇವುಗಳಲ್ಲಿ ವಚನಕಾರರು, ಚಾಮರಸನ ಪ್ರಭುಲಿಂಗ ಲೀಲೆ, ಕುಮಾರವ್ಯಾಸ, ಲಕ್ಷ್ಮೀಶ, ರಾಜಾಶ್ರಯ ಮತ್ತು ಸಾಹಿತ್ಯ ಇವು ಅತ್ಯಂತ ಪ್ರಮುಖವಾದ ಲೇಖನಗಳು. ಏಕೆಂದರೆ ಈ ಲೇಖನಗಳಲ್ಲಿ ಕುರ್ತಕೋಟಿಯವರು ಕನ್ನಡದ ಭಾವ ಪ್ರಪಂಚವೊಂದನ್ನು ಅದರ ಬೆಳವಣಿಗೆ ಸಮೇತ ಸೆರೆ ಹಿಡಿಯಲು ಪ್ರಯತ್ನಿಸುತ್ತಾರೆ. ಕುರ್ತಕೋಟಿಯವರ ನೆನಪಿನ ಶಕ್ತಿ ಅಗಾಧವಾದದ್ದು ಇರಲೇಬೇಕು. 'ಭಾವನಾ'ದ ಯುಗಾದಿ ಸಂಚಿಕೆಯ ತಮ್ಮ ಪುಟ್ಟ ಲೇಖನದಲ್ಲಿ ಅವರು 'ಸಾಹಿತ್ಯ ಮತ್ತು ಯುಗಧರ್ಮದ' ಲೇಖನಗಳು ಕೇವಲ ನೆನಪಿನ ಆಧಾರದ ಮೇಲೆ ರಚಿಸಿದ್ದಾಗಿ ಹೇಳಿದ್ದಾರೆ. ದೂರದ ಗುಜರಾತಿನಲ್ಲಿ ಕನ್ನಡದ ಯಾವುದೇ ಪುಸ್ತಕ ಲಭ್ಯವಿಲ್ಲದಿದ್ದಾಗಲೂ ಆ ಲೇಖನಗಳನ್ನು ಬರೆದಿರುವುದಾಗಿ ಹೇಳಿರುವ ಅವರ ನೆನಪಿನ ಶಕ್ತಿ ಅಚ್ಚರಿಯನ್ನುಂಟು ಮಾಡುವಂಥದು. 'ಸಾಹಿತ್ಯ ಸಂಗಾತಿಯ' ಹರಹು ವಿಸ್ಮಯವನ್ನುಂಟುಮಾಡುವುದರ ಜೊತೆಗೆ ಕುರ್ತಕೋಟಿಯವರ 'ನೆನಪು' ಎಷ್ಟೊಂದು ಶಕ್ತಿಯುತ ಆಧಾರವಾಗಿ ಈ ಗ್ರಂಥಕ್ಕೆ ನಿಂತಿದೆ ಎಂಬುದೂ ಗೊತ್ತಾಗುತ್ತದೆ.




ಪುಟ-೪೧೨ ಬೆಲೆ : ೧೨೦

ಪ್ರಕಾಶಕರು : ಕನ್ನಡ ವಿಶ್ವವಿದ್ಯಾಲಯ

ಎರಡನೆಯ ಗ್ರಂಥವಾದ "ನೂರು ಮರ ನೂರು ಸ್ವರ"ದಲ್ಲಿ ಒಟ್ಟು ೬೦ ಲೇಖನಗಳಿವೆ. ಪಂಜೆ ಮಂಗೇಶರಾಯರಿಂದ ಹಿಡಿದು ದೇವನೂರು ಮಹಾದೇವರವರೆಗೆ ೨೦ನೇ ಶತಮಾನದ ಕನ್ನಡ ಸಾಹಿತ್ಯವನ್ನು ಈ ಗ್ರಂಥವು ವಿಮರ್ಶಾತ್ಮಕವಾಗಿ ಅವಲೋಕಿಸುತ್ತದೆ. ಇಲ್ಲಿಯ ಲೇಖಕರ ಮತ್ತು ಗ್ರಂಥಗಳ ಆಯ್ಕೆಯು "ಯಾದೃಚ್ಛಿಕ" ಎಂದು ಲೇಖಕರು ಹೇಳಿದ್ದಾರೆ. ಆದರೂ ಕೂಡ ಕುರ್ತಕೋಟಿಯವರು ಇತಿಹಾಸ ನಿರ್ಮಿಸಿದ ಕಾಲಮಾನ ಮತ್ತು ಋತುಮಾನಗಳನ್ನು ಮೀರಿದ ಭಾವ ಪ್ರಪಂಚದ ಸಂಪ್ರದಾಯವನ್ನು ಅರಸಿಕೊಂಡೇ ಈ ಗ್ರಂಥದಲ್ಲಿಯೂ ಹೋಗುತ್ತಾರೆ. ಇಲ್ಲಿಯ ಪ್ರಸ್ತಾವನೆ ಕೂಡ ಒಂದು ಗಾಢವಾದ ಪ್ರಬಂಧದ ರೂಪವನ್ನೇ ತಾಳಿದ್ದು, ಹೊಸಗನ್ನಡ ಸಾಹಿತ್ಯಕ್ಕೆ ಕಾರಣವಾದ ಮೂಲ ಕಾರಣಗಳನ್ನು ಮತ್ತು ಸೆಲೆಗಳನ್ನು ಶೋಧಿಸುತ್ತ ಹೋಗುತ್ತದೆ.




ಪುಟ-೪೧೨ ಬೆಲೆ : ೧೨೦

ಪ್ರಕಾಶಕರು : ಕನ್ನಡ ವಿಶ್ವವಿದ್ಯಾಲಯ

ಹೊಸಗನ್ನಡದ ಎಲ್ಲ ಸಾಹಿತ್ಯಿಕ ಚಳುವಳಿಗಳ ಮತ್ತು ಧೋರಣೆಗಳ ವಿಮರ್ಶಾತ್ಮಕ ವಿಶ್ಲೇಷಣೆಯನ್ನು ಆಯಾ ಲೇಖಕರ ಮೇಲಿನ ಲೇಖನಗಳ ಸಂದರ್ಭದಲ್ಲಿ ಮಾರ್ಮಿಕವಾಗಿ ಚರ್ಚಿಸಿದ್ದಾರೆ. ವಿಮರ್ಶೆಯು ಸೃಜನಾತ್ಮಕವಾಗಬೇಕು ಎಂಬ ಆಶಯವನ್ನಿಟ್ಟುಕೊಂಡು ಬೆಳೆಯಬೇಕೆನ್ನುವ ತನಕ ಈ ಗ್ರಂಥದಲ್ಲಿ ಕೇವಲ ತವಕವಾಗಿ ಉಳಿಯದೆ ಸಾರ್ಥಕತೆಯನ್ನು ಪಡೆದಿದೆ. ಈ ಗ್ರಂಥದಲ್ಲಿಯ ಲೇಖನಗಳನ್ನು ಓದುತ್ತ ಹೋದಂತೆ ಆ ಕೃತಿಗಳ ಮತ್ತು ಲೇಖಕರ ಬಗೆಗೆ ನಮ್ಮ ಅರಿವು ಮತ್ತು ತಿಳಿವಳಿಕೆ ಹಿಗ್ಗುತ್ತ ಹೋಗುತ್ತದೆ: ರೂಢಮೂಲವಾದ ನಮ್ಮ ಅಭಿಪ್ರಾಯಗಳು ನಮ್ಮ ಓದಿನ ಹರಹಿನ ಸಂಕುಚಿತತೆಯಿಂದ ಮೂಡಿದವುಗಳೆಂಬ ಅರಿವು ಮೂಡುತ್ತದೆ. ಹಾಗೆಯೇ ಭಿನ್ನಾಭಿಪ್ರಾಯಗಳನ್ನು ಹೊಂದುವ ಬಯಕೆ ಮೂಡಿದಾಗ, ಆ ಭಿನ್ನಾಭಿಪ್ರಾಯಕ್ಕೆ ಎಂಥ ವಿಮರ್ಶಾತ್ಮಕ ಪಾರಿಭಾಷೆ ಇರಬೇಕು ಎಂಬುದನ್ನು ಕಲಿಸಿಕೊಡುತ್ತವೆ. ಕನ್ನಡ ಸಾಹಿತ್ಯದ ಅಭ್ಯಾಸವೇ ಇಂದು ನಾನಾ ಗೊಂದಲಗಳ ಆಗರವಾಗಿರುವಾಗ ಈ ಗ್ರಂಥವು ಒಂದು ದಾರಿದೀಪವಾಗಿದೆ. ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸುವಾಗ ಕೂಡ, ವಿನಯದ ಮಾರ್ಗವನ್ನು ಬಿಡಬೇಕಿಲ್ಲ ಮತ್ತು ಆಳವಾದ ಅಭ್ಯಾಸದ ಆವಶ್ಯಕತೆ ಇದೆ ಎಂಬುದನ್ನು ಈ ಗ್ರಂಥವು ಮನಗಾಣಿಸಿಕೊಡುತ್ತದೆ.

"ನೂರು ಮರ ನೂರು ಸ್ವರ" ಗ್ರಂಥವು ನವೋದಯ, ನವ್ಯ, ಬಂಡಾಯ ಮುಂತಾದ ಸಾಹಿತ್ಯ ಚಳುವಳಿಗಳನ್ನು ವಿಶ್ಲೇಷಣೆಗೆ ಒಳಪಡಿಸುವುದರ ಜೊತೆಗೆ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲಗಳಲ್ಲಿ ಸಾಹಿತ್ಯದ ಮೇಲೆ ಬೀರಿದ ಪರಿಣಾಮಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಮುನ್ನಡೆಯುತ್ತದೆ. ಅಂದರೆ ಸಾಹಿತ್ಯ ಚಳುವಳಿಗಳಿಂದ ಕೃತಿಗಳನ್ನು ಪ್ರತ್ಯೇಕಿಸಿ ಅದರಲ್ಲಿಯ ಸಾಹಿತ್ಯಿಕ ಅಂಶಗಳಿಗೆ ಮೂಲ ಸೆಲೆಯಾಗಿ ನಿಂತ ಅಂಶಗಳಿಗೆ ಈ ಗ್ರಂಥವು ಹೆಚ್ಚಿನ ಮಹತ್ವ ನೀಡಿದೆ. ಸಾಹಿತ್ಯ ಚಳುವಳಿಗಳೊಡನೆಯೇ ಬೆಳೆದ ವಿಮರ್ಶಕರೊಬ್ಬರು ಹೀಗೆ ಆ ಚಳುವಳಿಗಳಿಂದ ದೂರ ನಿಂತು ಕೃತಿ ವಿಮರ್ಶೆಗೆ ತೊಡಗುವುದು ಬಹಳ ಕಷ್ಟದ ಕೆಲಸ. ಕುರ್ತಕೋಟಿಯವರು ಈ ಕಠಿಣವಾದ ಕೆಲಸವನ್ನು ತಮ್ಮ ಹೊಸ ವಿಮರ್ಶಾ ಭಾಷೆಯ ಆವಿಷ್ಕಾರದ ಮೂಲಕ ಸುಲಭವಾಗಿ ಸಾಧಿಸುತ್ತಾರೆ.

ಈ ಎರಡೂ ಗ್ರಂಥಗಳಲ್ಲಿ ತಾತ್ವಿಕ ಆಧಾರದ ಮೇಲೆ ಒಂದು ಸಾಹಿತ್ಯ ಪರಂಪರೆಯನ್ನು ಪೋಷಿಸುವ ಪ್ರಯತ್ನವನ್ನು ಮಾಡಲಾಗಿಲ್ಲ. ಇಲ್ಲಿ ಹೆಚ್ಚು ಒತ್ತು ಬಿದ್ದಿರುವುದು ಭಾವ ಪ್ರಪಂಚದ ಮೇಲೆಯೆ. ಭಾವ ಪ್ರಪಂಚವನ್ನು ಪೋಣಿಸುತ್ತ ಹೋಗುವಾಗಲೂ ಕೂಡ ಕೃತಿಯ ತಿರುಳು ಮಹತ್ವದ್ದಾಗುತ್ತ ಹೋಗುತ್ತದೆಯೇ ಹೊರತು, ಒಂದು ಭಾವ ಪ್ರಪಂಚಕ್ಕೂ ಇನ್ನೊಂದು ಭಾವ ಪ್ರಪಂಚಕ್ಕೂ ಇರುವ ವೈರುಧ್ಯಗಳನ್ನು ಎತ್ತಿ ಹಿಡಿದು, ತಮ್ಮ ನಿಲುವುಗಳನ್ನು ರೂಪಿಸಿಕೊಳ್ಳುವುದರಲ್ಲಿ ಕುರ್ತಕೋಟಿಯವರಿಗೆ ಆಸಕ್ತಿ ಇದ್ದಂತಿಲ್ಲ. ಏಕೆಂದರೆ ಅವರ ಮೂಲಪ್ರೀತಿ ಇರುವುದು ಸಾಹಿತ್ಯ ಕೃತಿಯ ಮೇಲೆ. ನಂತರದಲ್ಲಿ ಬರುವುದು ಆ ಕೃತಿಗಳು ನಿರ್ಮಿಸುವ ಭಾವ ಪ್ರಪಂಚದ ಪರಂಪರೆ. ಅವರ ಮನಸ್ಸಿನಲ್ಲಿ ಈ ವಿಷಯಗಳು ಮತ್ತು ಈ ವಿಮರ್ಶಾತ್ಮಕ ತಾರತಮ್ಯ ಭಾವ ಗಟ್ಟಿಯಾಗಿ ಕೂತಿವೆ. ಸಾಹಿತ್ಯ ಕೃತಿಯ ತಿರುಳನ್ನು ಅದರ ವಿವಿಧ ಆಯಾಮಗಳೊಡನೆ ಸೆರೆಹಿಡಿಯುವ ಮೂಲಕ ತಮ್ಮ ಸೃಜನಾತ್ಮಕ ಧೋರಣೆಯನ್ನು, ಶಕ್ತಿಯನ್ನು ಅಭಿವ್ಯಕ್ತಿಪಡಿಸುತ್ತಾರೆ. ತತ್ವಗಳು ಮೊದಲು ರೂಪಗೊಂಡು, ಆ ತತ್ವಗಳಿಗೆ ಅನುಗುಣವಾದ ಕೃತಿಗಳನ್ನು ಮಾತ್ರ ಒಂದು ಮಹಾ ಪರಂಪರೆಯ ಕೃತಿಗಳೆಂದು ಸಾರುವ ಆಂಗ್ಲ ವಿಮರ್ಶಾ ಪದ್ಧತಿಯಿಂದ ಈ ಅಂಶದಲ್ಲಿ ಕುರ್ತಕೋಟಿಯವರು ಭಿನ್ನವಾಗಿದ್ದಾರೆ. ಇದರ ಸ್ಪಷ್ಟವಾದ ಅರಿವು ಅವರ ಬರವಣಿಗೆಯಲ್ಲಿ ವ್ಯಕ್ತವಾಗಿದೆ.

ಕನ್ನಡದ ಸಾಹಿತ್ಯ ವಿಮರ್ಶೆ ಈ ಹಿನ್ನೆಲೆಯಲ್ಲಿ ಈ ಗ್ರಂಥಗಳಿಂದ ಕಲಿಯಬೇಕಾದದ್ದು ಬಹಳವಿದೆ. ಒಂದು ಹಂತದಲ್ಲಿ ಅಡಿಗರ ಮೇಲೆ ಬರೆಯುತ್ತ ಅವರ ಒಂದು ಹೇಳಿಕೆ "ಅಪಮಾನಕರವಾದದ್ದು" ಎನ್ನುತ್ತಾರೆ. ಕೇವಲ ಅಡಿಗರನ್ನು ಮತ್ತು ಬೇಂದ್ರೆಯವರನ್ನು

ಮುಂದಿನ ಪುಟಕ್ಕೆ

**ನಾ**ಟಿ ವೈದ್ಯರನ್ನು ಭೇಟಿ ಮಾಡಲು ಹೋದಾಗ, ಅವರನ್ನು ಅದಾಗ ವೈದ್ಯಕ್ಕೆಂದು ಯಾರೋ ಕರೆದೊಯ್ದ ವಿಷಯ ತಿಳಿದು ನಿರಾಶೆಯಾಗಲಿಲ್ಲ. ನಮಗಿಂತ ಅವರ ತುರ್ತಿನ ಅಗತ್ಯ ಹೆಚ್ಚಾಗಿರುವುದು ರೋಗ ಪೀಡಿತ ಜಾನುವಾರುಗಳಿಗಷ್ಟೇ! ಅತ್ತಿತ್ತ ತಿರುಗಾಡುತ್ತ ಅವರು ಹಿಂದಿರುಗುವುದನ್ನು ನಿರೀಕ್ಷಿಸಬೇಕಾಯಿತು.

ಸುಳ್ಯ ಮತ್ತು ಸುಬ್ರಹ್ಮಣ್ಯ ಮಾರ್ಗದಲ್ಲಿರುವ ಒಂದು ಪುಟ್ಟ ಗ್ರಾಮ ನಾರ್ಣಕಜೆ. ಬಸ್ಸು ನಿಲ್ಲುವಲ್ಲಿ ಒಂದು ಪುಟ್ಟ ಅಂಗಡಿ, ಗುಡ್ಡದ ಮೇಲೊಂದು ಶಾಲೆ. ಅಡಿಕೆ, ತೆಂಗಿನ ತೋಟಗಳ ಮಧ್ಯೆ ಅಲ್ಲಲ್ಲಿ ತಲೆ ಮರೆಸಿಕೊಂಡಿರುವ



# ನಾಟಿ ವೈದ್ಯ ನಾರಾಯಣ ಪಾಟಾಳಿ

ಮನೆಗಳು. ಈ ಊರು ಎಲ್ಲಿ ಅವಿತಿಕೊಂಡಿದೆ ಎಂದು ಹುಡುಕಾಡಬೇಕು! ನಾರ್ಣಕಜೆ ಮಾತ್ರವಲ್ಲದೆ, ಸುತ್ತಮುತ್ತಲ ಗ್ರಾಮವಾಸಿಗಳು ಸಾಕಿರುವ ಹಸು, ಎಮ್ಮೆ, ಆಡು, ನಾಯಿ, ಕೋಳಿ, ಹಂದಿ - ಮುಂತಾದ ಪ್ರಾಣಿಗಳಿಗೆ ಏನಾದರೂ ಕಾಯಿಲೆಯಾದಾಗ ಅವರಿಗೆ ಥಟ್ಟನೆ ನೆನಪಾಗುವ ವ್ಯಕ್ತಿ ನಾಟಿ ವೈದ್ಯ ನಾರಾಯಣ ಪಾಟಾಳಿ. ರಾತ್ರಿ, ಹಗಲು ಯಾವ ಹೊತ್ತಾಗಿರಲಿ, ಮಳೆ, ಬಿಸಿಲು ಏನೇ ಇರಲಿ, ರಸ್ತೆಗಳಿಲ್ಲದ ಕಡೆಗೆ ಗುಡ್ಡ ಹತ್ತಿ ನಡೆದೇ ಬಂದು ಜಾನುವಾರುಗಳಿಗೆ ಚಿಕಿತ್ಸೆ ನೀಡುವವರು ಇವರು. ಕೆಲವೊಮ್ಮೆ ದೂರದ ಊರುಗಳಿಂದಲೂ ಇವರನ್ನು ಅರಸಿ ಜನರು ಬರುತ್ತಾರೆ. ಹೊರಗಿನಿಂದ ಕರೆಬಂದ ಕೂಡಲೇ ಇವರು ಮಾಡುತ್ತಿದ್ದ ಕೆಲಸ ಮುಂದೆ ಸಾಗುವುದಿಲ್ಲ. ಹೊರಟುಬಿಡುತ್ತಾರೆ. ಕರೆದಲ್ಲಿಗೆ ಹೋಗಿ ಜಾನುವಾರುಗಳಿಗೆ ಔಷಧೋಪಚಾರ ಮಾಡಿಬರುತ್ತಾರೆ.

ಸರಕಾರಿ ಡಾಕ್ಟರಿರುವಲ್ಲಿಗಾದರೂ ನಾಲ್ಕಾರು ಕಿಲೋಮೀಟರು ನಡೆಯದೆ ಉಪಾಯವಿಲ್ಲ. ಮತ್ತೆ ಆ ಡಾಕ್ಟರೂ ಚಿಕಿತ್ಸೆಗಾಗಿ ಬೇರೆ ಬೇರೆ ಊರುಗಳಿಗೆ ಹೋಗುತ್ತಾರೆ. ಕೆಲವು ಸಂದರ್ಭಗಳಲ್ಲಿ ಆ ಡಾಕ್ಟರೇ ನಾಟಿ ವೈದ್ಯರ ಸಹಾಯ ಪಡೆಯುವಂತೆ ಜನರಿಗೆ ಸಲಹೆ ಮಾಡುವುದುಂಟು.

ನಾರಾಯಣ ಪಾಟಾಳಿ ಸಾಮಾನ್ಯವಾಗಿ ಎಂಟು ಬಗೆಯ ಶೀತ (ಕಪ್ಪೆ) ಬಾಧೆಗೆ, ರೋಮ ಉದುರುವಿಕೆ, ಹೊಟ್ಟೆಉಬ್ಬರಿಕೆ, ಗಂಟಲು ಹುಣ್ಣು, ಕೆಚ್ಚಲು ಬಾವು - ಮುಂತಾದ ರೋಗರುಜಿನಗಳಲ್ಲದೆ, ಗರ್ಭದ ದನಗಳಿಗೆ ಹಾಗೂ ಕರು ಹಾಕುವ ಸಂದರ್ಭದಲ್ಲಿ ಉಂಟಾಗುವ ತೊಡಕುಗಳಿಗೆ, ಕಾಲು ಮುರಿತ, ಚಪ್ಪೆ ಜಾರುವುದು - ಮುಂತಾದ ಅಪಘಾತಗಳಿಗೆ ಚಿಕಿತ್ಸೆ ಮಾಡುತ್ತಾರೆ.

ಈಗ ಕೇರಳದಲ್ಲಿ ಸೇರಿಹೋಗಿರುವ ಪೆರ್ಲ ಇವರ ಸ್ವಂತ ಊರು. ಮನೆಯಲ್ಲಿ ಮಲಯಾಳಂ ಮಾತನಾಡುತ್ತಾರೆ. ಕಳೆದ ಮೂವತ್ತು ವರ್ಷಗಳಿಂದ ನಾಟಿ ವೈದ್ಯರೆಂದು ಪರಿಚಿತರು. ಇವರ ತಾಯಿಯ ತಂದೆ ಸಹ ನಾಟಿ ವೈದ್ಯರೇ. ಅಜ್ಜನ ಚಟುವಟಿಕೆಗಳನ್ನು ಅತ್ಯಾಸಕ್ತಿಯಿಂದ ಗಮನಿಸುತ್ತ, ಪ್ರಾಣಿಗಳಿಗೆ ತಗುಲಿರಬಹುದಾದ ರೋಗವನ್ನು ಅಂದಾಜು ಮಾಡುವುದನ್ನು ಕಲಿತರು. ಈ ಹುಡುಗನ ಬಗ್ಗೆ ಅಜ್ಜನಿಗೆ ನಂಬಿಕೆ ಹುಟ್ಟಿದ ನಂತರ, ಅಜ್ಜ ಈತನನ್ನು ಜತೆಯಲ್ಲಿ ಕರೆದೊಯ್ಯತೊಡಗಿದರು. ತನ್ನ ಸ್ವಂತ ಮಗನಿಗೆ ಈ ನಾಟಿ ವೈದ್ಯದಲ್ಲಿ ಆಸಕ್ತಿಯಿಲ್ಲ ಎಂಬುದನ್ನು ಗ್ರಹಿಸಿದ ಅಜ್ಜ ತನ್ನ ವಿದ್ಯೆಯನ್ನು ಮೊಮ್ಮಗನಿಗೆ ಹೇಳಿಕೊಟ್ಟರು. ಜಾನುವಾರುಗಳಿಗೆ ತಗಲುವ ರೋಗಗಳ ಲಕ್ಷಣಗಳನ್ನು, ಔಷಧೋಪಚಾರಕ್ಕೆ ಬೇಕಾಗುವ ಹಸಿರೆಲೆ, ಬೇರು, ಬಳ್ಳಿ, ಗಿಡ, ಕಾಯಿ ಇತ್ಯಾದಿಗಳನ್ನು 'ಒಂದೊಂದಾಗಿ ಪರಿಚಯ ಮಾಡಿಕೊಟ್ಟರು.

ಮೂಕ ಪ್ರಾಣಿಗಳಿಗೆ ಚಿಕಿತ್ಸೆ ನೀಡುವಾಗ ರೋಗವನ್ನು ಸರಿಯಾಗಿ ಅಂದಾಜು ಮಾಡುವುದು ಬಹಳ ಮುಖ್ಯವಾಗುತ್ತದೆ. ಸಾಮಾನ್ಯವಾಗಿ ತಗಲುವ ರೋಗಗಳ ಜೊತೆಗೆ ಅವು ತಿಂದಿರಬಹುದಾದ ಪ್ಲಾಸ್ಟಿಕ್ ಹಾಳೆಗಳು, ರಬ್ಬರ್ ಮರದ ಎಲೆಗಳು, ಕುಡಿದಿರಬಹುದಾದ ವಿಷಯುಕ್ತ ನೀರು – ಇವನ್ನು ಅಂದಾಜು ಮಾಡಲು ಅನುಭವ ಹಾಗೂ ಸಾಮಾನ್ಯ ಪರಿಜ್ಞಾನ ಅಗತ್ಯವಾಗುತ್ತದೆ.

ಅನಂತರ ನೀಡಬೇಕಾದ ಚಿಕಿತ್ಸೆಗೆ ಅಗತ್ಯವಾದ ಹಸಿರೆಲೆ, ಬಳ್ಳಿ, ಬೇರು, ಕಾಯಿ, ಸೊಪ್ಪುಗಳನ್ನು ತತ್‌ಕ್ಷಣ ಗುರುತಿಸಿ ತಂದು ಬಳಸುವುದು ಅಷ್ಟೇ ಮುಖ್ಯವಾಗುತ್ತದೆ. ಕೆಲವನ್ನು ಹಸಿ ರಸವಾಗಿ, ಕೆಲವನ್ನು ಕುದಿಸಿ ಕಷಾಯ ರೂಪದಲ್ಲಿ, ಮತ್ತೆ ಕೆಲವನ್ನು ಅರೆದು ಲೇಪವಾಗಿ ಬಳಸುತ್ತಾರೆ.

ನಾರ್ಣಕಜೆಯ ಸುತ್ತಮುತ್ತ ಪ್ರಾಣಿ ಚಿಕಿತ್ಸೆಯಲ್ಲಿ ಬಳಕೆಯಾಗುವ ನೂರಾರು ಔಷಧಯುಕ್ತ ಗಿಡಗಳಿವೆ. ಪಾಟಾಳಿಯವರು ಚಿಕಿತ್ಸೆಯಲ್ಲಿ ಸುಮಾರು ಐವತ್ತು ಬಗೆಯ ಸೊಪ್ಪು, ಬಳ್ಳಿ, ಬೇರು, ಕಾಯಿಗಳನ್ನು ಬಳಸುತ್ತಾರೆ. ಈ ಪೈಕಿ ಸುಮಾರು ಇಪ್ಪತ್ತರ ಹೆಸರು ತಿಳಿಯದು. ವಾಸನೆಯಿಂದ ತಮಗೆ ಅಗತ್ಯವಾದುದನ್ನು ಗುರುತಿಸಿ ಬಳಸುತ್ತಾರೆ.

ಗಾಣದಿಂದ ಎಣ್ಣೆ ತೆಗೆಯುವ ಮೂಲ ಕಸುಬು ನಾರಾಯಣ ಪಾಟಾಳಿಯವರ ತಂದೆಯ ಕಾಲಕ್ಕೆ ಕೊನೆಯಾಗಿದೆ. ರಸ್ತೆಯಂಚಿನ ಒಂದು ಪುಟ್ಟ ಹಿತ್ತಿಲು ಮನೆಯಲ್ಲಿ ತಾಯಿ, ಪತ್ನಿ ಮತ್ತು ನಾಲ್ಕು ಮಕ್ಕಳೊಂದಿಗೆ ವಾಸಿಸುತ್ತಿದ್ದಾರೆ. ಇಬ್ಬರು ಹೆಣ್ಣು ಮಕ್ಕಳಲ್ಲಿ ಹಿರಿಯವಳಿಗೆ ಮದುವೆಯಾಗಿದೆ. ಕಿರಿಯವಳು ಎಸ್ಸೆಸ್ಸೆಲ್ಸಿವರೆಗೆ ಕಲಿತಿದ್ದಾಳೆ. ಪಿ.ಯು.ಸಿ. ಮುಗಿಸಿರುವ ಹಿರಿಯ ಮಗ ಅಂಗಡಿಯೊಂದರಲ್ಲಿ ಕೆಲಸ ಮಾಡುತ್ತಾನೆ. ಮತ್ತೊಬ್ಬ ಮಗ ಕಾಲೇಜಿನಲ್ಲಿ ಕಲಿಯುತ್ತಿದ್ದಾನೆ.

ಇವರ ಮಕ್ಕಳಲ್ಲಿ ಯಾರಿಗೂ ಈ ನಾಟಿ ವೈದ್ಯದಲ್ಲಿ ಆಸಕ್ತಿಯಿಲ್ಲ. ಆಸಕ್ತಿಯಿಲ್ಲದವರಿಗೆ ಹೇಳಿಕೊಡುವಂತೆಯೂ ಇಲ್ಲ. ಇವರಿಗೊಬ್ಬ ಸಮರ್ಥ ಶಿಷ್ಯ ಸಿಕ್ಕಬೇಕಷ್ಟೆ. ಅವರ ಅಜ್ಜ ತಿಳಿಸಿರುವಂತೆ, ಈ ವಿದ್ಯೆಯನ್ನು ತೀರಾ ನಂಬಿಕಸ್ಥ ಶಿಷ್ಯನಿಗೆ ಮಾತ್ರ ಹೇಳಿಕೊಡಬೇಕಂತೆ. ಬೇರೆಯವರಿಗೆ ಅದರ ಗುಟ್ಟು ಬಿಡಬಾರದಂತೆ!

''ಪ್ರಾಣಿಗಳಿಗೆ ಚಿಕಿತ್ಸೆ ಮಾಡಿದ್ದಕ್ಕೆ ಸಾಮಾನ್ಯವಾಗಿ ಎಷ್ಟು ಚಾರ್ಜು ಮಾಡುತ್ತೀರಿ ?''

ಅವರು ಒಂದು ಕ್ಷಣ ತಡೆದು ಹೇಳಿದರು : ''ಓ.... ನಾನು ಇಷ್ಟೆಂತ ಹೇಳುವುದಿಲ್ಲ, ಅವರು ಕೊಟ್ಟಷ್ಟನ್ನು ತೆಗೆದುಕೊಳ್ಳುತ್ತೇನೆ.''

''ವೈದ್ಯವಲ್ಲದೆ ಬೇರೇನಾದರೂ ಮಾಡುತ್ತೀರಾ ?''

''ಕೂಲಿ ಕೆಲಸ ಮಾಡುತ್ತೇನೆ. ಮನೆಯ ಮಾಡುಗಳಿಗೆ ಹುಲ್ಲು ಹೊದಿಸುವುದು. ತೆಂಗಿನ ಕಾಯಿ ಸುಲಿಯುವುದು... ಯಾವ ಕೆಲಸ ಸಿಕ್ಕಿದರೆ ಅದು.''

ತನ್ನ ನಾಟಿ ವೈದ್ಯದಿಂದ ಹೆಚ್ಚು ವರಮಾನ ನಿರೀಕ್ಷಿಸದೆ, ಸಿಕ್ಕಿದ್ದರಲ್ಲಿ ತೃಪ್ತಿಪಟ್ಟುಕೊಳ್ಳುವ ಅವರು, ದೈಹಿಕ ದುಡಿಮೆಯನ್ನು ನೆಚ್ಚಿಕೊಂಡು, ಮಕ್ಕಳಿಗೆ ಕಲಿಯಲು ಪ್ರೋತ್ಸಾಹಿಸಿದ್ದಾರೆ. ಜಾನಪದ ವೈದ್ಯನೊಬ್ಬನ ನಮ್ರತೆಯ ಪ್ರತೀಕವಾಗಿ ಅವರು ನನಗೆ ಕಾಣಿಸಿದರು.

– *ಕೆ. ಪಿ. ಸ್ವಾಮಿ*

*ಹಿಂದಿನ ಪುಟದಿಂದ*

ಓದಿದವರಿಗೆ ಅಡಿಗರ ಹೇಳಿಕೆ ಅಪಮಾನಕರವಾದುದಲ್ಲ. ಆದರೆ ಕುರ್ತಕೋಟಿಯವರ ಇಲ್ಲಿಯ ಲೇಖನಗಳನ್ನು ಓದುತ್ತ ಹೋದಂತೆ ಒಂದು ''ಮಹಾ ಭಾವ ಪರಂಪರೆಯ'' ಅನುಭವವಾಗುತ್ತದೆ. ಅದರ ಬೆಳಕಿನಲ್ಲಿ ಮಾತ್ರ ಎಂಥ ಹೇಳಿಕೆ ಅವಮಾನಕರವಾದುದು ಎಂಬುದರ ಅರಿವು ಮೂಡುತ್ತದೆ. ಅಂದರೆ ಲೇಖಕರಲ್ಲಿ ಮತ್ತು ವಿಮರ್ಶಕರಲ್ಲಿ ಈ ಗ್ರಂಥಗಳು ಉಂಟುಮಾಡಬಹುದಾದ ಜವಾಬ್ದಾರಿಯ ಅಂಶವಿದೆಯಲ್ಲ ಅದು ಅನನ್ಯವಾದದ್ದು. ಈ ಅಂಶದಲ್ಲಿಯೇ ಈ ಶ್ರೇಷ್ಠ ವಿಮರ್ಶಕನ ಬಗೆಗೆ ನಮ್ಮಲ್ಲಿ ಧನ್ಯಭಾವ ಮೂಡುತ್ತದೆ.

''ಸಾಹಿತ್ಯ ಮತ್ತು ಯುಗಧರ್ಮ''ದಂಥ ಗ್ರಂಥ ಬಂದ ನಂತರ, ಮತ್ತೆ ಅಂಥ ಪ್ರಯತ್ನ ಕನ್ನಡದಲ್ಲಿ ನಡೆಯಲಿಲ್ಲ. ಆದರೆ ''ಕನ್ನಡ ಸಾಹಿತ್ಯ ಸಂಗಾತಿ'' ಮತ್ತು ''ನೂರು ಮರ ನೂರು ಸ್ವರ'' ಗ್ರಂಥಗಳು ಆ ಕೊರತೆಯನ್ನು ಯಶಸ್ವಿಯಾಗಿ ತುಂಬಿಕೊಡುತ್ತವೆ. ಆ ಕೆಲಸವನ್ನು ಮಾಡಲು ಇಷ್ಟು ವರ್ಷಗಳಾದ ಮೇಲೆಯೂ ಮತ್ತೆ ಕುರ್ತಕೋಟಿಯವರೇ ಶ್ರಮಪಡಬೇಕಾಯಿತು ಮತ್ತು ಅವರು ಪ್ರೀತಿಯಿಂದ ಆ ಕೆಲಸವನ್ನು ನಿರ್ವಹಿಸಿದ ರೀತಿಯನ್ನು ನೋಡಿದರೆ, ಕನ್ನಡದ ವಿಮರ್ಶಾಲೋಕ ಸರಿಯಾಗಿ ಮಾಗಬೇಕಾದರೆ, ''ಕುರ್ತಕೋಟಿ ಆಯಾಮ''ವನ್ನು ಪೂರ್ತಿಯಾಗಿ ತನ್ನದನ್ನಾಗಿ ಮಾಡಿಕೊಳ್ಳಬೇಕಾದ ಅವಶ್ಯಕತೆಯನ್ನು ಒತ್ತಿ ಹೇಳಬೇಕಿಲ್ಲ.

ಮಾಧವ ಕುಲಕರ್ಣಿ
ಇ. ಡಬ್ಲ್ಯು. ಎಸ್. ೧೫೫ (OYHS), ೯ನೇ ಮುಖ್ಯರಸ್ತೆ, ಪ್ರಥಮ ಹಂತ, ಹೆಬ್ಬಾಳ್, ಮೇಟಗಳ್ಳಿ ಅಂಚೆ, ಮೈಸೂರು - ೫೭೦ ೦೧೬

# ಯುದ್ಧಕ್ಕೆ ಆಹ್ವಾನ - ತುರುಗಾಳಗ



ತುರುಗಾಳಗವನ್ನು ತುರುಗೋಳ್, ಗೋಗ್ರಹಣ ಎಂದೆಲ್ಲಾ ಕರೆಯಲಾಗಿದೆ. ತುರುವನ್ನು ಕೊಂಡೊಯ್ಯುವ ಅಥವಾ ಗೋವುಗಳನ್ನು ಹಿಡಿಯುವ ಅಂದರೆ ಬಂಧಿಸುವ ಮೂಲಕ ನಡೆಯುವ ಕಾಳಗವೇ ತುರುಗಾಳಗ. ಭಾರತೀಯ ಪರಂಪರೆಯಲ್ಲಿ ಈ ವಿಧದ ಕಾಳಗಕ್ಕೆ ಬಹಳ ಹಿಂದಿನಿಂದಲೂ ಮಾನ್ಯತೆ ಇತ್ತು ಎಂದು ತಿಳಿಯಲಾಗಿದೆ.

ಮಹಾಭಾರತದಲ್ಲಿಯೂ ಗೋಗ್ರಹಣದ ಪ್ರಸ್ತಾಪ ಇದೆ. ಪಾಂಡವರು ವಿರಾಟರಾಜನ ಆಸ್ಥಾನದಲ್ಲಿ ಅಜ್ಞಾತವಾಸ ಮಾಡುತ್ತಿದ್ದಾರೆ ಎಂಬ ಸುಳಿವು ದೊರೆತ ಕೌರವರ ಪಕ್ಷದವರು, ಪಾಂಡವರನ್ನು ಪತ್ತೆಹಚ್ಚಿ ಸೆರೆಹಿಡಿಯಲು ವಿರಾಟ ರಾಜನ ಗೋವುಗಳನ್ನು ಅಪಹರಿಸುತ್ತಾರೆ. ವೀರರಾದ ಪಾಂಡವರು ತಮ್ಮ ಆಶ್ರಯದಾತನ ಗೋವುಗಳ ಅಪಹರಣವನ್ನು ಸಹಿಸುವವರಲ್ಲ: ಆದ್ದರಿಂದ ಅವರು ಗೋವುಗಳನ್ನು ಬಿಡಿಸಿಕೊಳ್ಳಲು ಯುದ್ಧಕ್ಕೆ ಬಂದೇಬರುತ್ತಾರೆಂಬ ನಿರೀಕ್ಷೆ ಕೌರವರದು. ಕೌರವರ ನಿರೀಕ್ಷೆಯಂತೆ ಪಾಂಡವರ ಪರವಾಗಿ ಅರ್ಜುನ ಯುದ್ಧಕ್ಕೆ ಬಂದ. ಆದರೆ ಕೌರವರು ಸೋತರು. ಇದು ಬಹುತೇಕ ಎಲ್ಲರಿಗೂ ತಿಳಿದಿರುವ ಕತೆ. ಈ ಕತೆಯಿಂದಾಗಿ, ಮಹಾಭಾರತ ನಡೆದಿದೆ ಎಂದು ತಿಳಿದಿರುವ ಕಾಲಕ್ಕಾಗಲೇ ಯುದ್ಧದ ಒಂದು ಭಾಗವಾಗಿ 'ಗೋಗ್ರಹಣ' ಇತ್ತು.

ಕೃಷಿಗೆ ಪ್ರಾಧಾನ್ಯತೆ ಇದ್ದ ಮಾನವನ ಇತಿಹಾಸದ ಆರಂಭ ಕಾಲದಲ್ಲಿ ಗೋವುಗಳನ್ನು ಹೆಚ್ಚು ಜವಾಬ್ದಾರಿಯಿಂದ ನೋಡಿಕೊಳ್ಳಲಾಗುತ್ತಿತ್ತು ಮತ್ತು ಅವುಗಳನ್ನು 'ಜೀವಧನ' ಎಂದು ಭಾವಿಸಲಾಗಿತ್ತು. ಸಮಾಜದ ಆರ್ಥಿಕ ವ್ಯವಸ್ಥೆಯು ಜೀವಧನವನ್ನು ಅವಲಂಬಿಸಿತ್ತು. ಇಂತಹ ಜೀವಧನವನ್ನು ಅಪಹರಿಸುವುದು ಎಂದರೆ ಶತ್ರುಗಳ ಶಕ್ತಿಯನ್ನು ಕಡಿಮೆ ಮಾಡುವುದು ಎಂದೇ ಅರ್ಥ. ಯುದ್ಧದ ಆರಂಭಕ್ಕೆ ಕಾರಣವಾಗಿ ಅಥವಾ ಅಪಹರಿಸುವ ಉದ್ದೇಶದಿಂದಲೇ ತುರುಗೋಳ್ ನಡೆಯುತ್ತಿತ್ತು ಎಂದು ತಿಳಿಯಲಾಗಿದೆ. ಯಾವುದೇ ಕಾರಣದಿಂದ ಆದರೂ ತಮ್ಮ ಸಮಾಜದ ಜೀವಧನದ ಅಪಹರಣವನ್ನು ತಡೆಯುವ ಪ್ರಯತ್ನಗಳು ನಡೆಯುತ್ತಿದ್ದವು. ಅಂತಹ ತುರುಗಾಳಗಗಳ ಬಗ್ಗೆ ಕರ್ನಾಟಕದಲ್ಲಿ ಅಪಾರವಾದ ಸಮಕಾಲೀನ ದಾಖಲೆಗಳಿವೆ. ಯಾವುದೇ ವ್ಯಕ್ತಿಯ ವೀರಮೌಲ್ಯವನ್ನು ಗುರುತಿಸಲು ತುರುಗಾಳಗಗಳು ನೆರವಾಗುತ್ತಿದ್ದವು.

*ತುಱುಪರಿವಾಗಳೆಮ್ಮ ಪೆಣನಂ ತುೞಿದುಂ ಪರಿಗುಂದಲೆಂದು ಚೆ:*
*ತಱುಗೊಳೆ ಬಾಱಿಮೆಂದು ತುಱುಗೋಳೊಳೆ ಸಾವುದು ಸೈಪಿದೆಂದು ಪಾ*
*ಯ್ದಱಿಕೆಯ ಗೋವರಣ್ಣ ಬರೆ ಪಾಯಿಸಿ ಪೋಟಿಯಿಲರ್ ತುಗುಳ್ದ ತ*
*ತ್ತಱಿ ತ್ತಱಿದಿಕ್ಕೆ ದೇಗುಲಕೆ ಪೆರ್ಮಗನಂ ಕಡಿವಂತೆ ಮಾಡಿದರ್॥*

ಕನ್ನಡದ ಆದಿಕವಿ ಎನಿಸಿಕೊಂಡ ಪಂಪನು ಕೌರವನ ಕಡೆಯವರು ವಿರಾಟನ ಕಡೆಯ ಗೋವುಗಳನ್ನು ಹಿಡಿದಾಗ, ಅವುಗಳ ರಕ್ಷಣೆಗಿದ್ದ ಗೋಪಾಲಕರ ಪರಿಸ್ಥಿತಿಯನ್ನು ಹೀಗೆ ವರ್ಣಿಸಿದ್ದಾನೆ.

ಕನ್ನಡದ ಮತ್ತೊಬ್ಬ ಕವಿ ರನ್ನನು ವ್ಯಕ್ತಿಯ ಗಂಡುತನವನ್ನು ಕುರಿತು ಆಡಿರುವ ಈ ಮಾತುಗಳು ಪ್ರಸಿದ್ಧವಾಗಿವೆ:

ತುಱುಗೋಳೊಳ್ ಪೆಣ್ಬುಯ್ಯಲೊ
ಳೞಿವೆಸದೊಳ್ ನೆಂಟನೆಡಱೊಳೂರಟಿವಿನೊಳಂ।
ತಱಿಸಂದು ಗಂಡುತನಮನೆ
ನೆಱಪದವಂ ಗಂಡನಲ್ಲನೆಂತು ಷಂಡಂ॥

ಒಂದು ಊರಿನ, ಊರಿನ ಗೋವುಗಳ ಮತ್ತು ಹೆಣ್ಣುಗಳ ರಕ್ಷಣೆ ಮಾಡುವುದು ವೀರತನ ಎಂದು ನಮ್ಮ ಹಿಂದಿನ ಜನ ತಿಳಿದಿದ್ದರು. ಹೀಗೆ ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ವಿಶೇಷವಾಗಿ ಉಲ್ಲೇಖಗೊಂಡಿರುವ ತುರುಗೋಳ್ ಅಥವಾ ತುರುಗಾಳಗಕ್ಕೆ ಅನೇಕ ವೀರಗಲ್ಲು ಶಾಸನಗಳು ದಾಖಲೆಯಾಗಿ ಉಳಿದುಬಂದಿವೆ. ಅಪಾರ ಸಂಖ್ಯೆಯಲ್ಲಿರುವ ಈ ವೀರಗಲ್ಲುಗಳು ಶಾಸನಸಹಿತವಾಗಿರಬಹುದು ಅಥವಾ ಶಾಸನರಹಿತವಾಗಿರಬಹುದು; ಸಾಮಾನ್ಯವಾಗಿ ಕರ್ನಾಟಕದ ಪ್ರತಿಯೊಂದು ಗ್ರಾಮದಲ್ಲೂ ಒಂದಾದರೂ ವೀರಗಲ್ಲು ಇದ್ದೇ ಇರುತ್ತದೆ. ಈ ವೀರಗಲ್ಲುಗಳು ಈಗಾಗಲೇ ತಿಳಿಸಿರುವಂತೆ ಊರಟಿವು, ತುರುಗೋಳ್, ಪೆಣ್ಬುಯ್ಯಲ್ ಅಥವಾ ಇನ್ನಾವುದೇ ರೀತಿಯ ಹೋರಾಟವನ್ನು ದಾಖಲಿಸಿರುತ್ತವೆ.

ಗದಗ ತಾಲ್ಲೂಕಿನ ಸಿರುಂಜಾದಲ್ಲಿರುವ ಒಂದು ವೀರಗಲ್ಲು ಶಾಸನದ ಕಾಲವು ಕ್ರಿ. ಶ. ೮೮೩. ಈ ಶಾಸನವು ಎಱೆಯಮ್ಮ ಎಂಬುವವನು ತುರುಗೋಳ್‌ನಲ್ಲಿ ಕಾದು ಸತ್ತ ವಿಷಯವನ್ನು ವಿವರವಾಗಿ ದಾಖಲಿಸಿದೆ. ಇಂತಹ ಶಾಸನಸ್ಥ ದಾಖಲೆಗಳು ಯಥೇಚ್ಛ ಎನ್ನುವ ಪ್ರಮಾಣದಲ್ಲಿಯೇ ದೊರೆತಿವೆ. ತುರುಗೋಳ್‌ನಲ್ಲಿ ಹೋರಾಡಿ, ತುಱುವನ್ನು ಹಿಂದಕ್ಕೆ ಮರಳಿಸಿ, ಮರಣ ಹೊಂದಿದ ಅನೇಕ ವೀರರ ಹೆಸರುಗಳು ಹಲವಾರು ಶಾಸನಗಳ ಮೂಲಕ ತಿಳಿದುಬಂದಿದೆ. ಇಂತಹ ವೀರರ ಸ್ಮಾರಕವಾಗಿ ವೀರಗಲ್ಲುಗಳಿವೆ. ಹೆಚ್ಚು ಸಂಖ್ಯೆಯ ವೀರಗಲ್ಲುಗಳಲ್ಲಿ ಕೇವಲ ಶಿಲ್ಪ ಇರುತ್ತದೆ. ಶಿಲ್ಪದ ಮೂಲಕವೇ ಯುದ್ಧಕ್ಕೆ ಕಾರಣ, ಯುದ್ಧ ಪ್ರಸಂಗಗಳ ಪ್ರಮುಖ ಅಂಶಗಳನ್ನು ತಿಳಿಯಬಹುದು. ಸಾಮಾನ್ಯವಾಗಿ ತುರುಗೋಳ್‌ಗೆ ಸಂಬಂಧಿಸಿದ ವೀರಗಲ್ಲುಗಳಲ್ಲಿ, ಮುಂದಡಿ ಇಟ್ಟಿರುವ ವೀರನ ಹಿಂದೆ ಹಿಮ್ಮುಖವಾಗಿ, ಅಂದರೆ ಊರಿನತ್ತ ಮುಖ ಮಾಡಿ ನಿಂತಿರುವ ಗೋವುಗಳ ಚಿತ್ರ ಇರುತ್ತದೆ.

ಜಗದೇಕರಸನ ಆಜ್ಞೆಯಂತೆ ಕಾಳರಸ ಎಂಬುವವನು ಕೊರಕೋಡು ಎಂಬ ಊರಿನ ತುರುಗಳನ್ನು ಕೊಂಡು ಹೋಗುವಾಗ ದೇವಗಾವುಂಡ ಮತ್ತು ಮಲ್ಲಗಾವುಂಡ ಎಂಬ ಇಬ್ಬರು ಸೋದರರು ಅದನ್ನು ತಡೆದು ಹೋರಾಡಿ ಸಾಯುತ್ತಾರೆ. ಅವರ ಹೆಣಗಳನ್ನು ದನಗಳು ತುಳಿದು ಓಡುತ್ತವೆ. ಅದನ್ನು ನೋಡಿ ಸಿಟ್ಟುಗೊಂಡ ಅವರ ತಮ್ಮ ಬಪ್ಪಗಾವುಂಡನು ಶತ್ರುಗಳನ್ನು ಹೊಡೆದು ಓಡಿಸಿ, ಗೆದ್ದು ಗೋವುಗಳನ್ನು ಹಿಂದಿರುಗಿಸುತ್ತಾನೆ. ತುರುಗಳ ಅಪಹರಣವಾದಾಗ ಅದನ್ನು ವಿರೋಧಿಸದೆ, ಹೇಡಿಯಂತೆ ಓಡಿಬಂದವರಿಗೆ ಅರಿಶಿನ, ಕುಂಕುಮ ಮತ್ತು ಬಳೆಗಳನ್ನು ಕೊಡುತ್ತಿದ್ದರು ಎಂದು ಒಂದು ತೆಲುಗು ಜನಪದ ಕತೆ ತಿಳಿಸುತ್ತದೆ (ಇದು ಮಹಿಳೆಯರ ಬಗೆಗಿನ ಸಾಂಪ್ರದಾಯಿಕ ಅಭಿಪ್ರಾಯದ ಸೂಚನೆಯೂ ಆಗಿದೆ). ಗೋವುಗಳನ್ನು ಕೇವಲ ಕಳ್ಳತನದ ಉದ್ದೇಶದಿಂದ ಅಪಹರಿಸುತ್ತಿದ್ದ ಉದಾಹರಣೆಗಳಿವೆ. ರಾಜಕೀಯ ಉದ್ದೇಶಗಳಂತೂ ತುರುಗೋಳ್‌ನಲ್ಲಿ ಪ್ರಮುಖವಾಗಿದ್ದವು. ಕೆಲವು ಬಾರಿ ಆಳುವವರು ಚಾಡಿಕೋರರ ಮಾತುಗಳನ್ನು ಕೇಳಿ ಊರೊಂದರ ಮೇಲೆ ದಾಳಿ ಮಾಡಲು ಆಜ್ಞೆ ಮಾಡುತ್ತಿದ್ದರು. ಅಂತಹ ಒಂದು ಮಹತ್ವದ ಉದಾಹರಣೆ ಚೋಳ ಮಹಾದೇವಿ ಎಂಬ ಹೊಯ್ಸಳ ರಾಣಿಗೆ ಸಂಬಂಧಿಸಿದಂತೆ ಇದೆ. ರಾಣಿಯು ದುಷ್ಟ ಕಷ್ಟರ ಮಾತುಗಳನ್ನು ಕೇಳಿ ಬೇವೂರಿನ ಮೇಲೆ ದಾಳಿ ಮಾಡಲು ಹೇಳಿದಾಗ ಸೇನೆಯು ಬೇವೂರನ್ನು ಮುತ್ತಿ ತುರುಗಳನ್ನು ಹೊಡೆದುಕೊಂಡು ಹೋಗುತ್ತಿದ್ದಾಗ, ಕೇತಮಲ್ಲ ಎಂಬುವವನು ಪ್ರತಿಭಟನೆ ಮಾಡಿ ತುರುಗಳನ್ನು ಬಿಡಿಸಿಕೊಂಡ ಕತೆ ಅದು.

ತುರುಗಾಳಗದಲ್ಲಿ ಹೋರಾಡಿ ಮಡಿದ ವೀರರಿಗೆ ಸ್ಮಾರಕವಾಗಿ ಅನೇಕ ವೀರಗಲ್ಲುಗಳನ್ನು ಹಾಕಿಸಲಾಗಿದೆ. ಹೋರಾಟದ ಪ್ರಸಂಗಗಳಲ್ಲಿ ನಾಡಿನ ಜೀವಧನ ಎಂದು ಪರಿಗಣಿತವಾದ ಗೋವುಗಳನ್ನು ನಮ್ಮ ಹಿರಿಯರು ಹೇಗೆ ತಮ್ಮ ಅನುಕೂಲಕ್ಕೆ ಬಳಸಿಕೊಳ್ಳುತ್ತಿದ್ದರು ಎಂಬುದಕ್ಕೆ ಮತ್ತು ಅದೇ ಜೀವಧನಗಳನ್ನು ರಕ್ಷಿಸಲೂ ಸಹ ನಮ್ಮ ಹಿರಿಯರು ಎಂತಹ ಹೋರಾಟಕ್ಕೆ ಅಣಿಯಾಗುತ್ತಿದ್ದರು ಎಂಬುದಕ್ಕೆ ಅನೇಕ ವೀರಗಲ್ಲುಗಳು ಸಾಕ್ಷಿಯಾಗಿವೆ.

■ ಎಚ್. ಎಸ್. ಗೋಪಾಲರಾವ್
'ಸ್ವಸ್ತಿಶ್ರೀ ಸ್ಕಂದ', ಅರಿಸಿನಕುಂಟೆ - ೫೬೨ ೧೨೩
ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ

**ದಜ್ಜಾಲ** (ಕತೆಗಳು)

*ಫಕೀರ ಮುಹಮ್ಮದ್ ಕಟ್ಪಾಡಿ*

**ಪುಟ : 134** **ಬೆಲೆ : ರೂ. 100**

**ಸಿ.ವಿ.ಜಿ. ಪಬ್ಲಿಕೇಷನ್ಸ್**, ನಂ. 70, ಎರಡನೇ ಮೈನ್, ಜಬ್ಬರ್ ಬ್ಲಾಕ್, ವೈಯಾಲಿಕಾವಲ್, ಬೆಂಗಳೂರು-560003



*ಪರಸ್ಪರ ಸಂಶಯದ ಸುಳಿಗೆ ಸಿಕ್ಕಿ ಜಾತಿ ಮತಗಳ ಹೆಸರಿನಲ್ಲಿ ಬಡಿದಾಡುವ ಹಿಂದೂ ಮುಸ್ಲಿಂ ಸೋದರರ ಬದುಕಿನ ಕ್ಷಣಗಳು ಈ ಕಥೆಗಳನ್ನು ರೂಪಿಸಿವೆ. ಮಾನವೀಯ ಸಂಬಂಧದ ಜಾಗದಲ್ಲಿ ರಾಕ್ಷಸೀ ಪ್ರವೃತ್ತಿ ಆಕ್ರಮಿಸಿದಾಗ ಸಂಭವಿಸುವ ಅನಾಹುತ ಸರಿಪಡಿಸಲಾರದ್ದು. ಕೋಮುಗಲಭೆಗಳಲ್ಲಿ ತೊಡಗುವ ಜನರ ಕೆಟ್ಟ ಮುಖಗಳನ್ನಿಲ್ಲಿ ಕಾಣಬಹುದು.*

**ಎಲ್ಲಿ ಆ ಕಣ್ಣುಗಳು**

*ಬಿ. ಆರ್. ಪೊಲೀಸ್ ಪಾಟೀಲ*

**ಪುಟ : 83** **ಬೆಲೆ : ರೂ. 35**

**ವಾತ್ಸಲ್ಯ ಪ್ರಕಾಶನ**, ಬನಹಟ್ಟಿ -587311, ಬಾಗಲಕೋಟೆ ಜಿಲ್ಲೆ

*ಇಂಗ್ಲಿಷ್ ಮೂಲದ ಶ್ರೇಷ್ಠ ಸಾಹಿತ್ಯ-ಕಥೆಗಳು ಎಲ್ಲಿ ಅಡಗಿ ಕುಳಿತಿದ್ದರೂ ಸಹಾ ಪೊಲೀಸ್ ಪಾಟೀಲರ ಕಣ್ಣು ತಪ್ಪಿಸಿ ಉಳಿಯುವುದು ಸಾಧ್ಯವಾಗಿಲ್ಲ. ಅವರು ಅವುಗಳನ್ನು ಕೂಡಲೇ ಪತ್ತೆ ಹಚ್ಚಿ ತಂದು ಕನ್ನಡಕ್ಕೆ ರೂಪಾಂತರಿಸಿ ಕನ್ನಡಿಗರಿಗೊಪ್ಪಿಸಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಇಲ್ಲಿನ ಹನ್ನೊಂದು ಕಥೆಗಳು ಒಳ್ಳೆಯ ಸಾಹಿತಿಗಳೆಂದು ಹೆಸರು ಮಾಡಿದ ಇಂಗ್ಲಿಷ್ ಲೇಖಕರ ಅತ್ಯುತ್ತಮ ಕಥೆಗಳಾಗಿವೆ. ಭಾರತ ಹಾಗೂ ಹೊರದೇಶದ ಕಥೆಗಳ ಸಂಗ್ರಹ.*



**ಕನ್ನಡ ಪರ ಚಿಂತನೆ ಮತ್ತು ಪರಂಪರೆ**

*ಡಾ|| ಕಾ. ವೆಂ. ಶ್ರೀನಿವಾಸ ಮೂರ್ತಿ*

**ಪುಟ : 360** **ಬೆಲೆ : ರೂ. 100**

**ಕನಕ ಸಾಹಿತ್ಯ ಪ್ರತಿಷ್ಠಾನ**, ನಂ. 137, ಮೊದಲನೇ ಮೈನ್, ವೆಸ್ಟ್ ಆಫ್ ಕಾರ್ಡ್ ರಸ್ತೆ, ಮಂಜುನಾಥ ನಗರ, ಬೆಂಗಳೂರು - 560010

*ಕನ್ನಡ ನಾಡು - ನುಡಿಯ ಬಗ್ಗೆ ನಮ್ಮ ಪೂರ್ವ ಕವಿ - ಸಾಹಿತಿಗಳು ತಳೆದಿದ್ದ ಅಭಿಮಾನ, ಕನ್ನಡ ಪರ ಚಿಂತನೆಗಳನ್ನು ಅವರ ಸಾಹಿತ್ಯದ ಮೂಲಕ ಅರ್ಥೈಸಿಕೊಳ್ಳುವ ಅಪೂರ್ವ ಪ್ರಯತ್ನ. ಕನ್ನಡಿಗರು ವಿಶ್ವಾದ್ಯಂತ ಹಂಚಿಹೋಗಿರುವ ಇಂಥ ಸಂದರ್ಭದಲ್ಲಿ ''ಎಲ್ಲಿದ್ದರೂ ಕನ್ನಡವಾಗಿರು'' ಎಂಬ ಮೂಲತತ್ವಕ್ಕೆ ಇರುವ ಮಹತ್ವ ಮಾತ್ರ ಕನ್ನಡಾಭಿಮಾನವೇ ? ಗತಕಾಲದ ಇಂಥ ಅಧ್ಯಯನಗಳಿಂದ ಪ್ರಸ್ತುತ ಸಂದರ್ಭಕ್ಕೆ ತಕ್ಕುದಾದ ಮಾರ್ಗದರ್ಶನ ಲಭ್ಯವಾಗಬಹುದು.*

**ಕೆಂಡ ಸಂಪಿಗೆ** (ಕವನ ಸಂಕಲನ)

*ಡಾ|| ಬಸವರಾಜ ಸಬರದ*

**ಪುಟ : [illegible]** **ಬೆಲೆ : ರೂ. 40**

**ಪಲ್ಲವಿ ಪ್ರಕಾಶನ**, ಸರಸ್ವತಿಪುರ, ವಿಶ್ವವಿದ್ಯಾಲಯ ಅಂಚೆ, ಗುಲಬರ್ಗಾ - 585 106



*ಒಂದು ಭ್ರಷ್ಟ ವ್ಯವಸ್ಥೆಯ ಮೇಲೆ ಅಸಮಾಧಾನಗೊಂಡಾಗ ಕೆಂಡದ ಮಳೆಗರೆದಂತೆ ಕವನ ಬರೆಯುವ ಸೋದರ ಬಸವರಾಜ ಸಬರದರು ಸುಂದರ ಸಮಾಜವೊಂದನ್ನು ಕಲ್ಪಿಸಿಕೊಂಡಾಗ ಅಷ್ಟೇ ಮೃದುವಾದ ಹೂವಿನ ಪಕಳೆಗಳು ಉದುರಿದಂತೆ ಪದ್ಯ ರಚಿಸಬಲ್ಲವರು. ತಮ್ಮ ಒಡಲಿನಲ್ಲಿ ಮಾನವ ಪ್ರೀತಿಯ ಝರಿ ಬತ್ತದಂತೆ ನೋಡಿಕೊಂಡು ಸಾಹಿತ್ಯ ರಚನೆ ಮಾಡಿದವರು. ಉತ್ತಮ ಸಮಾಜ ವ್ಯವಸ್ಥೆಗಾಗಿ ಚಿಂತಿಸುವ ಅವರ ಮನಸ್ಸು ಇಲ್ಲಿನ ಕವಿತೆಗಳಲ್ಲಿ ಪ್ರತಿಫಲಿಸಿದೆ.*

**ಕಿತಾಬ್ - ಎ - ನೌರಸ್**

*ಇಮ್ಮಡಿ ಇಬ್ರಾಹಿಂ ಆದಿಲ್ ಶಾಹ್*

*ಕನ್ನಡಕ್ಕೆ : ಅಬ್ದುಲ್ ಮಜೀದ್ ಖಾನ್*

**ಪುಟ : 248** **ಬೆಲೆ : ರೂ. 100**

**ಕರ್ನಾಟಕ ಉರ್ದು ಅಕಾಡೆಮಿ**, ನೃಪತುಂಗ ರಸ್ತೆ, ಬೆಂಗಳೂರು - 1



*ದಕ್ಷಿಣ ಭಾರತದ ಬಿಜಾಪುರದಲ್ಲಿ ಅರಸನಾಗಿದ್ದ ಇಬ್ರಾಹಿಂ ಆದಿಲ್‌ಶಾಹ್‌ನ ಉರ್ದು ಗೀತೆಗಳನ್ನು ಕನ್ನಡ ಭಾವಾನುವಾದ ಸಹಿತ ಸಂಗ್ರಹಿಸಲಾಗಿದೆ. ಇಲ್ಲಿನ ಗೀತೆಗಳನ್ನು ಹಿಂದುಸ್ತಾನಿ ಗಾಯನದ ರಾಗಗಳಿಗೆ ಅಳವಡಿಸಲಾಗಿದ್ದು ಶ್ರೇಷ್ಠ ಸಂಗ್ರಹವೆಂದು ಗೌರವಿಸಲಾಗಿದೆ. ಪರಮತ ಸಹಿಷ್ಣುವಾಗಿದ್ದು, ಅಂದಿನ ದಕ್ಷ ಆಡಳಿತಗಾರನೆಂದು ಪ್ರಸಿದ್ಧನಾಗಿದ್ದ ಸಾಹಿತ್ಯಾಸಕ್ತನಾಗಿದ್ದ ದೊರೆಯ ಬದುಕು-ಬರಹದ ಬಗ್ಗೆ ಉಲ್ಲೇಖಿಸಲಾಗಿದೆ. ಅನೇಕ ಘಟನೆಗಳನ್ನೂ ದಾಖಲಿಸಲಾಗಿದೆ.*



**ಮಹಿಳಾ ಅಧ್ಯಯನ**

*ನೇಮಿಚಂದ್ರ*

**ಪುಟ : 150** **ಬೆಲೆ : ರೂ. 80**

**ಅಂಕಿತ ಪುಸ್ತಕ**, 53, ಶ್ಯಾಮ್ ಸಿಂಗ್ ಕಾಂಪ್ಲೆಕ್ಸ್, ಗಾಂಧಿಬಜಾರ್, ಬಸವನಗುಡಿ, ಬೆಂಗಳೂರು - 560 004

*ವೈಜ್ಞಾನಿಕ - ವೈಮಾನಿಕಗಳಂಥ ಕಠಿಣ ಕ್ಷೇತ್ರಗಳಲ್ಲಿ ಕಾಲಿಟ್ಟು ಯಶಸ್ವಿಯಾಗಿ ಉನ್ನತ ಪ್ರಶಸ್ತಿ ಗಳಿಸಿದ ಮಹಿಳೆಯರ ಹೆಜ್ಜೆ ಗುರುತು ಇತಿಹಾಸದಲ್ಲಿ ಮೂಡಿದೆ. ಇವರನ್ನು ತಮ್ಮ ಲೇಖನಗಳ ಮೂಲಕ ಪರಿಚಯಿಸಿ ತನ್ಮೂಲಕ ಮಹಿಳೆಯನ್ನು ಕೀಳರಿಮೆಯಿಂದ ಆತ್ಮವಿಶ್ವಾಸದೆಡೆಗೆ ಕರೆತರುವ ಸಾಹಸದ ಕೆಲಸವನ್ನು ಶ್ರೀಮತಿ ನೇಮಿಚಂದ್ರ ಮಾಡುತ್ತಿದ್ದಾರೆ. ಸ್ತ್ರೀವಾದದ ವಿಶಾಲ ತಳಹದಿಯಿಂದ ಎದ್ದು ಬರುವ ಅವರ ಪ್ರಬುದ್ಧ ಬರವಣಿಗೆ ಎಲ್ಲೂ ಸೋಲದೆ ರೋಚಕ ಅನುಭವ ನೀಡುತ್ತದೆ.*



**ಸಮಗ್ರ ಕಾವ್ಯ**

*ಬ. ಗಿ. ಯಲ್ಲಟ್ಟಿ*

**ಪುಟ : 272** **ಬೆಲೆ : ರೂ. 120**

**ವಾತ್ಸಲ್ಯ ಪ್ರಕಾಶನ**, ಬನಹಟ್ಟಿ -587311, ಬಾಗಲಕೋಟೆ ಜಿಲ್ಲೆ

*ಒಂದು ತಲೆಮಾರಿನಷ್ಟು ಹಳೆಯ ನೆನಪು-ಅನುಭವಗಳನ್ನು ತುಂಬಿಕೊಂಡ ಅಪರೂಪದ ಕವನಗಳು ಈ ಸಂಗ್ರಹದಲ್ಲಿವೆ. ಕವಿಯ ಬದುಕು ಹೇಗೆ ಏರಿಳಿತಗಳನ್ನು ಕಂಡು ಸಾಗಿ ಬಂದಿತೋ ಅಂತೆಯೇ ಅಂತಃಕರಣದಿಂದ ಸ್ಫುರಿಸಿದ ಭಾವನೆಗಳೂ ಕಾವ್ಯಧಾರೆಗಳಾಗಿ ಹರಿದುಬಂದಿವೆ. ಎಳೆಯ ವಯಸ್ಸಿನಲ್ಲೇ ಕಾವ್ಯದ ಬೆನ್ನು ಹತ್ತಿದ್ದ ನಾಲ್ಕು ಸಂಕಲನಗಳ ಕಾವ್ಯಗಳನ್ನೆಲ್ಲ ಸಮಗ್ರವಾಗಿ ಸಂಗ್ರಹಿಸಿ ಅವರ ಇಳಿವಯಸ್ಸಿನಲ್ಲಿ ಹೊರತರಲಾಗಿದೆ.*

**ಉನ್ನತ ಸರಸ್ವತಿ** (ಕಾದಂಬರಿ)

*ಮಾಧವ ಕುಲಕರ್ಣಿ*

**ಪುಟ : 105** **ಬೆಲೆ : ರೂ. 45**

**ಸಾಹಿತ್ಯ ಮಾಲಿಕಾ ಪ್ರಕಾಶನ**, ನಂ. 623, ನ್ಯೂ ಕಾಂತರಾಜ ಅರಸ್ ರಸ್ತೆ, ಕುವೆಂಪು ನಗರ, ಮೈಸೂರು - 23

*ಗುರು ಶಿಷ್ಯ ಪರಂಪರೆಗೆ ಒಂದು ಗೌರವ ಸ್ಥಾನವನ್ನು ತಂದು ಕೊಟ್ಟಿದ್ದ ಭಾರತೀಯ ಕಲಿಕೆ ವಿಧಾನವನ್ನು ಇಂದಿನ ಉನ್ನತ ಶಿಕ್ಷಣ ವ್ಯವಸ್ಥೆಯೊಂದಿಗೆ ತಾಳೆ ನೋಡುವ ಪ್ರಯತ್ನ. ಸಂಪೂರ್ಣ ವ್ಯಾಪಾರೀಕರಣಗೊಂಡು ದುರಂತದ ಹಾದಿ ಹಿಡಿದ ಉನ್ನತ ವ್ಯಾಸಂಗವನ್ನು ಗೇಲಿ ಮಾಡುತ್ತ ನಾವೆಲ್ಲಿ ಸೋತಿರಬಹುದೆಂದು ನಮಗೆ ಜ್ಞಾಪಿಸುತ್ತ ಕಾದಂಬರಿ ಮುನ್ನಡೆದಿದೆ.*

**- ಇಂದಿರಾ ಕುಮಾರಿ**



# ಜೈ ಗುಂಡೇಶ್ವರ !

**ಮ**ಳೆ ದೇವರಿಗೆ ಹುಣಿಸೆ ಹಣ್ಣಿನ ತುಲಾಭಾರ ಮಾಡಲು ಗೊಂದಲಪುರದ ಜನರು ಸಿದ್ಧತೆ ಮಾಡಿಕೊಳ್ಳುತ್ತಿದ್ದರಷ್ಟೆ. ಅದಕ್ಕೆ ಸಾಕ್ಷಾತ್ ಮಳೆಯೇ ವಿಘ್ನ ತಂದಿತು ! ಒಂದು ರಾತ್ರಿ ಮಿಂಚು ಗುಡುಗಿನೊಂದಿಗೆ ಪ್ರಾರಂಭವಾದ ಮಳೆ ಹಗಲು ರಾತ್ರಿ ಬಾರಿಸತೊಡಗಿತು. ದಿನಗಟ್ಟಲೆ ಮಳೆ ನಿಲ್ಲುವ ಸುಳಿವೇ ಕಾಣಿಸಲಿಲ್ಲ. ಊರ ಕೆರೆ ಕಟ್ಟೆಗಳು ತುಂಬಿ ತುಳುಕಿದವು. 'ನಮ್ಮ ಬ್ವಾರೆ ಹುಣಿಸೇ ಹಣ್ಣಿಗೆ ಮಳೆರಾಯನೇ ಹೆದರಿದ' – ಎಂದು ಜನರು ಹಗುರವಾಗಿ ತಮಾಷೆ ಮಾಡಿಕೊಂಡರು. ಅದನ್ನು ಹೊಂಚಿ ಕೇಳಿಸಿಕೊಂಡ ಮಳೆ ಮತ್ತೆ ಮತ್ತೆ ಜೊರಗುಟ್ಟುತ್ತ ಸುರಿದು ಸಾಕಪ್ಪ ಎನ್ನಿಸಿಬಿಟ್ಟಿತು. 'ಅಯ್ಯೋ ನಿನ್ ಮನೆ ಯಕ್ಕುಟ್ಟೋಗ' – ಎಂದು ಜನರು ಪ್ರೀತಿಯಿಂದ ಮಳೆಯನ್ನು ಶಪಿಸಿದರು.

ಊರ ದೇವರಾದ ಹನುಮಂತ ಉರುಫ್ ಬಜರಂಗಬಲಿಯನ್ನು ಜನರು ಮರತೇಬಿಟ್ಟರು ! ಹೊಳೆ ದಾಟಿದ ಮೇಲೆ ಅಂಬಿಗನ ಹಂಗೇನು - ಎಂಬುದು ಅವರ ನಂಬಿಕೆ. ಪೂಜಾರಿ ಮಾಂತಪ್ಪನಿಗೆ ಸಲ್ಲುತ್ತಿದ್ದ ಕಾಣಿಕೆ ಷೇರು ಮಾರುಕಟ್ಟೆಯಂತೆ ಜರ್ರನೆ ಇಳಿದು ಒಂದು ಬಗೆಯ ಹೊಟ್ಟೆ ಉರಿಯ ರೋಗ ತಗುಲಿತು. ಸಿದ್ದೇಶ್ವರಾನಂದಜೀ ಜೊತೆಗೆ ಭಂಗಿ ಗೋಷ್ಠಿ ನಡೆಸುತ್ತ 'ಈ ಜನರ ಆಟಾನೆಲ್ಲ ದೇವ್ರು ನೋಡ್ತಾನೆ ಇರ್ತಾನೆ. ಏನಾದ್ರೊಂದು ಮಾಡ್ತಾನೆ' – ಎಂದು ಭಂಗಿ ಹೊಗೆ ಬಿಡತೊಡಗಿದ ಮಾಂತಪ್ಪ.

ಸಿದ್ದೇಶ್ವರಾನಂದಜಿಗೂ ನಿರಾಶೆಯಾಗದೆ ಇರಲಿಲ್ಲ. ತುಲಾಭಾರದ ಸಂದರ್ಭದಲ್ಲಿ ತಾನು ಹೇಗೆ ಭಕ್ತಿ ಭಾವದಿಂದ ಜನರ ಪ್ರೀತಿಯನ್ನು ಸ್ವೀಕರಿಸಬೇಕು ಎಂದೆಲ್ಲ ಮಾಡಿಕೊಂಡಿದ್ದ ಕಲ್ಪನೆ ಜಡಿಮಳೆಯಲ್ಲಿ ಕೊಚ್ಚಿ ಹೋಯಿತು. ಸದ್ಯ ಏನೋ ಯಡವಟ್ಟು ಮಾಡಲು ಹೋಗಿ ಚೆಲುವಕ್ಕನ ಕೈಗೆ ಸಿಕ್ಕಿ ಮಾನ ಕಳೆದುಕೊಳ್ಳುವುದು ತಪ್ಪಿತಲ್ಲ ಎಂದು ಆತನಿಗೆ ಒಳಗೊಳಗೇ ಸಂತೋಷವೂ ಆಯಿತು.

ಸಿದ್ದೇಶ್ವರಾನಂದಜಿ ಕೆಲವು ದಿನ ಊರಿನಿಂದ ಕಣ್ಮರೆಯಾದ. ಈತನ ಮೈಗಳ್ಳತನ, ಬೇಜವಾಬ್ದಾರಿಗಳು ಚೆಲುವಕ್ಕನಿಗೆ ಹೊಸದೇನಲ್ಲವಲ್ಲ! ಇವಕ್ಕೆಲ್ಲ ತಲೆ ಕೆಡಿಸಿಕೊಳ್ಳದೆ ಕೂಲಿ ನಾಲಿ ಮಾಡಿ ಮನೆ ಸಂಸಾರ ನಡೆಸುತ್ತಿದ್ದಳು. ಈಗ ಗ್ರಾಮ ಪಂಚಾಯ್ತಿ ಸದಸ್ಯೆ ಬೇರೆ. ತನ್ನ ಮಗ ರಾಮನಿಂದ ಮನೆ ಪಾಠ ಹೇಳಿಸಿಕೊಳ್ಳುತ್ತ ಅಕ್ಷರ ಕಿರಣಗಳ ಬೆಳಕಿನಲ್ಲಿ ಈಜಾಡುತ್ತಿದ್ದಳು. ಆಕೆಯ ಮಾಸ್ತರ್ ರಾಮನಾದರೋ 'ನಿನ್ನ ಅಕ್ಷರ ಕೋಳಿ ಕಾಲ್ನಂಗವೆ, ಒತ್ತಕ್ಷರ ಮರ್ರು ತಪ್ ಮಾಡ್ತೀಯೆ. ಇಂಗಾದ್ರೆ ನಿನ್ನ ಫೇಲ್ ಮಾಡ್ತೀನಿ !' – ಎಂದು ಹೆದರಿಸುತ್ತಿದ್ದ.

ಗೊಂದಲಪುರದ ಜನರು ವರ್ಷಪೂರ್ತಿ ಮಾಡುವ ಹಬ್ಬ ಹರಿದಿನಗಳಲ್ಲದೆ, ಯಾವಾಗಲಾದರೊಮ್ಮೆ ಬಿಡುವಾದಾಗ ಊರ ಹನುಮಂತನನ್ನು ನೆನಪು ಮಾಡಿಕೊಳ್ಳುತ್ತಿದ್ದರು. ಕೆಲವು ವರ್ಷಗಳಿಂದೀಚೆಗೆ ಕೆಲವರು ಕಪ್ಪು ಬಟ್ಟೆ ಧರಿಸಿ ಅಯ್ಯಪ್ಪ ಸಮಾಜ ಮಾಡಿಕೊಂಡು ಊರ ಜನರನ್ನು ಕಿವಿಡೆಬ್ಬಿಸುತ್ತಿದ್ದರು. ಇದರಿಂದ ಊರ ದೇವರ ಪ್ರಭಾವ ಕಡಮೆಯಾಗತೊಡಗಿತ್ತು. ಇದನ್ನು ತಪ್ಪಿಸಿ ಊರಿನವರ ಭಕ್ತಿ ಊರಿನಲ್ಲೇ ಇಂಗುವಂತೆ ಮಾಡುವ ಉಪಾಯಕ್ಕಾಗಿ ಮಾಂತಪ್ಪ ಆಲೋಚಿಸುತ್ತಿದ್ದ. ಒಂದು ದಿನ ಭಂಗಿ ಗೋಷ್ಠಿಯಲ್ಲಿ ಇದಕ್ಕೆ ತಕ್ಕ ಉಪಾಯ ಹೊಳೆಯಿತು. ಇದರಿಂದ ಮಾಂತಪ್ಪ, ಆತನ ಬಾಮೈದ ಈರಭದ್ರ ಮತ್ತು ಸಿದ್ದೇಶ್ವರಾನಂದಜಿ - ಇವರ ಕಲ್ಯಾಣ ಮಾತ್ರವಲ್ಲದೆ ಗೊಂದಲಪುರದ ಕಲ್ಯಾಣವೂ ಆಗುತ್ತದೆ ಎಂಬುದು ಅವರ ನಂಬಿಕೆ.

ಆದರೆ 'ಗುಂಡೇಶ್ವರನಿಗೆ ಮಾಲೆ ಧರಿಸುವ' ಹೊಸ ವಿಚಾರದಿಂದ ಆಸಕ್ತ ಭಕ್ತರಿಗೆ ಸ್ವಲ್ಪ ಗೊಂದಲವೇ ಆಯಿತು. ಊರಿಗೆ ನಾಲ್ಕು ಮೈಲು ದೂರದಲ್ಲೇ ಗುಂಡೇಶ್ವರನ ಗುಡ್ಡವಿದೆ. ಒಂದು ಲೆಕ್ಕದಲ್ಲಿ ಗುಂಡೇಶ್ವರ ಗೊಂದಲಪುರದವರ ಸ್ವಂತ ದೇವರು ! ಗುಡ್ಡದ ಮೇಲೆ ಯಾರೋ ಯಾವುದೋ ಕಾಲದಲ್ಲಿ ಕಟ್ಟಿಸಿದ ಕಲ್ಲಿನ ಗುಡಿಯಿದೆ. ಗೊಂದಲಪುರದವರಿಗೆ ಆ ದೇವರ ಬಗ್ಗೆ ಒಂದು ರೀತಿಯ ಸದರ. ಹೇಗೂ ನಮ್ಮ ದೇವರೇ ತಾನೆ ! ಎಂಬುದೇ ಅದು.

ಜನರ ಮನಸ್ಸಿನಲ್ಲಿ ಗುಂಡೇಶ್ವರನ ಬಗ್ಗೆ ನಂಬಿಕೆ ಬರುವಂತೆ ಮಾಡಲು ಮಾಂತಪ್ಪ ಎಲ್ಲ ತಲೆ ಖರ್ಚು ಮಾಡಬೇಕಾಯಿತು ! ಜನರ ಮನಸ್ಸನ್ನು ಇತ್ತ ತಿರುಗಿಸಲು ಸಾಕಷ್ಟು ರಿಯಾಯಿತಿ ಸಬ್ಸಿಡಿ ನೀಡಬೇಕಾಯಿತು. ಏನಾದರೂ ಅಯ್ಯಪ್ಪನಷ್ಟು ಸ್ಟ್ರಿಕ್ಟ್ ಅಲ್ಲ ಎನ್ನಿಸಿದ ಮೇಲೆ ಮಾಲೆ ಧರಿಸಲು ಅನೇಕರು ಬಂದರು. ಎಲ್ಲರೂ ಹಳದಿ ಉಡುಪು ಧರಿಸಬೇಕು. ಈರಭದ್ರ ಗುಲ್ಲೂರಿಗೆ ಹೋಗಿ ಥಾನುಗಟ್ಟಲೆ ಹಳದಿ ಬಟ್ಟೆ ತಂದು ಭಕ್ತರ ಬೇಡಿಕೆ ಪೂರೈಸಿದ. ಹನುಮಂತನ ಗುಡಿಯಲ್ಲಿ ಭಕ್ತರಿಗೆ ಮಾಲೆ ತೊಡಿಸಲು ಸಿದ್ದೇಶ್ವರಾನಂದಜಿ ತಯಾರಾದರು. ಎಲ್ಲ ಹಳೆಯ ಭಜನೆ ಪದ್ಯಗಳನ್ನು ನೆನಪು ಮಾಡಿಕೊಂಡು ಹನುಮಂತನ ಗುಡಿಯಲ್ಲಿ ಕಿರಿಚಾಟ ನಡೆಯಿತು. 'ಸ್ವಾಮಿಯೇ ಅಯ್ಯಪ್ಪೋ !' – ಎಂಬ ಸ್ಲೋಗನ್‌ಗೆ ಬದಲು ಬೇರೊಂದು ಸ್ಲೋಗನ್‌ಗಾಗಿ ಬಹಳ ಜನ ಭಕ್ತರು ತಲೆ ಖರ್ಚು ಮಾಡಿದರು. ಕೊನೆಗೆ 'ಜೈ ಜೈ ಗುಂಡೇಶ್ವರಾ ಹರಹರ ಮಹಾದೇವ' ಎಂಬ ಒಂದು ರೀತಿಯ ಎಲ್ಲರೂ ಸುಮಾರು ಒಪ್ಪುವಂಥ ಸ್ಲೋಗನ್ ತಯಾರಿಸಲಾಯಿತು.

''ಲೋ ತಿಮ್ಮ... ಅಯ್ಯಪ್ಪ ಅಂದ್ರೆ ಬೆಂಕಿ ಇದ್ದಂಗೆ. ದಿನಾ ತಣ್ಣೀರ್ ಸ್ನಾನ, ಚಿಕ್ಕೋರು, ದೊಡ್ಡೋರು, ಎಂಗಸ್ರು ಎಲ್ಲರ್ನೂ ಸ್ವಾಮಿ ಅನ್ಬೇಕು. ಒಂದ್ ಕೆಟ್ ಮಾತಾಡುವಂಗಿಲ್ಲ. ಮಾಂಸ ಮಡ್ಡಿ ತಿನ್ನುವಂಗಿಲ್ಲ. ಎಂಡಾ ಸಾರಾಯದ ಸುದ್ದಿ ಎತ್ತುವಂಗಿಲ್ಲ, ಮನೆ ಒಳಗೆ ಮಲ್ಗುವಂಗಿಲ್ಲ – ಅದೂ ನಲವತ್ತೆಂಟ್ ದಿನ. ಒಂದ್ ಬೀಡಿ ಸೇದುವಂಗಿಲ್ಲ. ಯಾಕಪ್ಪ ಈ ಬಂದಾನ ! ಈಗ್ನೋಡು ನಮ್ ಗುಂಡೇಶ್ವರ, ನಮ್ಮ ಕಸ್ಟ ಸುಖ ಕಂಡಿರೋನು... ನಾವು ತಿಳೀದ್ ಜನ. ಏನ್ ಮಾಡಿದ್ರೂ ನಮ್ಮ ಗುಂಡೇಶ್ವರ ಒಟ್ಟೇಗಾಕೋತಾನೆ...'' ಎಂದು ಹಳದಿ ಅಂಗಿಯ ಭಕ್ತ ಗುಂಡೇಶ್ವರನನ್ನು ತಾರೀಫು ಮಾಡಿದ.

''ಅಷ್ಟ ಮಾತ್ರ ಅಲ್ಲ ಕಣಣ್ಣೋ, ಎಂಗಸ್ರು, ಉಡುಗೀರು ಮಾಲೆ ಆಕೋಬೌದು ! ಗುಂಡೇಶ್ವರನ್ ಜಾತ್ರೇಲಿ ಎಂಡ, ಸಾರಾಯಿಗೆಲ್ಲ ಸಬ್ಸಿಡಿಯಂತೆ ! ನೀರಾ ಅಂಗ್ಡೀನೂ ಇರ್ತಾವಂತೆ. ಜೈ ಗುಂಡೇಶ್ವರ !!'' ಎಂದ ತಿಮ್ಮ.

ಗುಲ್ಲೂರಿನ ಪತ್ರಿಕೆಯೊಂದರ ಬಾತ್ಮಿದಾರಿಣಿ ಗುಂಡೇಶ್ವರನಿಗೆ ಮಾಲೆ ಧರಿಸಲು ಪ್ರಾರಂಭಿಸಿರುವ ಗೊಂದಲಪುರದ ಜನರ ಬಗ್ಗೆ ಒಂದು ಲೇಖನ ಬರೆಯಲೆಂದು ಬಂದವಳು, ಗ್ರಾಮ ಪಂಚಾಯ್ತಿ ಸದಸ್ಯೆ ಚೆಲುವಕ್ಕನನ್ನು ಭೇಟಿ ಮಾಡಿದಳು. ಆಕೆಯ ಬಾಯಿಯಿಂದ ಈ ವಿಷಯ ತಿಳಿದ ಚೆಲುವಕ್ಕ ''ಈ ಸಲ ಆ ಮಾಂತಪ್ಪನ್ಗೂ ಇವನ್ಗೂ ಗಾಚಾರ ಇಳಿಸ್ಲಿಲ್ಲ ಅಂದ್ರೆ ನಾನು ಚೆಲುವಕ್ಕೇ ಅಲ್ಲ'' ಎಂದು ಹಲ್ಲುಕಡಿದಳು.

ಚೆಲುವಕ್ಕನಿಗೆ ಕೋಪ ಬಂದಿತೆಂದರೆ ಸಿದ್ದಣ್ಣನಿಗೆ ಹಿಡಿದ ಗ್ರಹಚಾರ ಮತ್ತೆ ಒಂದೆರಡು ವರ್ಷ ಅತ್ತ ತಲೆ ಹಾಕುವುದಿಲ್ಲ ಎಂಬುದು ತಿಳಿದ ವಿಷಯ. ಇನ್ನು ಗುಡ್ಡದ ಗುಂಡೇಶ್ವರನ ಗಾಚಾರ ಹೇಗಿದೆಯೋ ಕಾದು ನೋಡಬೇಕು.

*- ಬೀರಣ್ಣ ಗೊಂದಲಪುರ*

### ವಿಶೇಷ ಸಂಚಿಕೆಗಾಗಿ

ಜೀವನದಲ್ಲಿ ಮನಮುಟ್ಟುವ ಪ್ರಸಂಗಗಳು ಬಹುಶಃ ಎಲ್ಲರ ಅನುಭವದಲ್ಲೂ ಇರುತ್ತವೆ. ಅವುಗಳಲ್ಲಿ ಅತಿ ಮನಮುಟ್ಟುವ ಕ್ಷಣ ಯಾವುದಾಗಿತ್ತು ? ಅಂತಹ ನಿಮ್ಮ ಅನುಭವವನ್ನು ಕುರಿತು ನೂರೈವತ್ತು ಪದಗಳಲ್ಲಿ ಬರೆದು ಕಳಿಸಿ. ಆಯ್ದ ಬರಹಗಳು ಜನವರಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ ಮತ್ತು ಪ್ರಕಟವಾದುವಕ್ಕೆ ಸಂಭಾವನೆ ಇದೆ. ಬರಹಗಳು ೨೦೦೧ರ ಡಿಸೆಂಬರ್ ೧೦ನೇ ತಾರೀಖಿನೊಳಗೆ ನಮಗೆ ತಲುಪುವಂತೆ ಕಳಿಸಿ.

'ಹೊಸತು', ಅಂಚೆ ಪೆಟ್ಟಿಗೆ ೫೧೮೫, ಬೆಂಗಳೂರು - ೫೬೦ ೦೦೧

# ರಾಜಕೀಯ ಪಗಡೆಯಾಟ ಮತ್ತು ಬೀಜಿಂಗ್ ಕ್ರೀಡಾಕೂಟ

ರಾಜಾಶ್ರಯವನ್ನೋ ಜನಾಶ್ರಯವನ್ನೋ ಪಡೆದು ಬೆಳೆದುಬಂದ ಕ್ರೀಡೆಗಳು ಹಾಗೂ ಕ್ರೀಡಾಕೂಟಗಳು ರಾಜಮುಕುಟ ಅಳಿದರೂ ರಾಜಕೀಯದಿಂದ ದೂರವುಳಿಯಲು ಸಾಧ್ಯವಾಗಲಿಲ್ಲವೆಂಬುದು ರಾಜಕೀಯದ ಕರಾಳ ವ್ಯಾಪ್ತಿಗೆ ನಿದರ್ಶನವಷ್ಟೆ. ಜಾಗತೀಕರಣ ಮತ್ತು ಉದಾರೀಕರಣದ ನೆರಳಿನಲ್ಲಿ ಯಾವಾಗ ಆಧುನಿಕ ಕ್ರೀಡಾಕೂಟಗಳು ಚಿನ್ನದ ಮೊಟ್ಟೆ ಇಡುವ ಕೋಳಿಗಳಾದವೋ ಆಗ ಎಲ್ಲ ನೈತಿಕ ಎಲ್ಲೆಗಳನ್ನು ಮೀರಿ ಕ್ರೀಡಾಕೂಟಗಳು ಒಂದು ರಾಷ್ಟ್ರದ ಹೆಮ್ಮೆಯ ಪ್ರತೀಕವಾಗತೊಡಗಿದವು. ಮಾನವ ಸಮಾಜದ ಸ್ನೇಹ ಸೌಹಾರ್ದತೆಗಳ ಪ್ರತೀಕವಾಗಬೇಕಿದ್ದ ಕ್ರೀಡಾಕೂಟಗಳನ್ನು ಹೊಟ್ಟೆಬಾಕ ಸಿರಿವಂತ ರಾಷ್ಟ್ರಗಳು ತಮ್ಮ ಪ್ರತಿಷ್ಠೆಯ ಕಣವನ್ನಾಗಿಸಿದ್ದು ವಿಪರ್ಯಾಸವೇ ಸರಿ. ಕ್ರೀಡಾಕೂಟಗಳ ಪರಿಶ್ರಮ - ಸಾಧನೆಗಿಂತ ಅವರು ಒಟ್ಟುಗೂಡಿಸುವ ಆಸ್ಥೆಯ ಬಗ್ಗೆ ಜಗತ್ತು ಉತ್ಸುಕವಾಗಿರುವುದು ಕ್ರೀಡೆಗಳು ಯಾವ ದಿಶೆಯಲ್ಲಿ ಮುಂದುವರಿಯುತ್ತಿವೆ ಎಂಬುದಕ್ಕೆ ಸ್ಪಷ್ಟ ನಿದರ್ಶನ.



ಟಿನಾನ್‌ಮೆನ್ ಚೌಕ

ಬೀಜಿಂಗ್ ೨೦೦೦ನೇ ಒಲಂಪಿಕ್ಸ್ ಕ್ರೀಡಾಕೂಟಗಳನ್ನು ಕೇವಲ ಎರಡು ಮತಗಳ ಅಂತರದಿಂದ ಸೋತಾಗ ಎಷ್ಟೋ ರಾಷ್ಟ್ರಗಳು ಸಹಾನುಭೂತಿ ವ್ಯಕ್ತಪಡಿಸಿದ್ದವು. ಸಿಡ್ನಿ ಆ ಒಲಂಪಿಕ್ ಕ್ರೀಡಾಕೂಟಗಳನ್ನು ತನ್ನದಾಗಿಸಿಕೊಂಡು ಅದ್ದೂರಿಯಾಗಿ ನೆರವೇರಿಸಿತಾದರೂ ಆಸ್ಟ್ರೇಲಿಯಾದ ಮೂಲನಿವಾಸಿಗಳು ಆ ಸಮಯದಲ್ಲಿ ನಡೆಸಿದ ಪ್ರತಿಭಟನೆಗಳು ಬ್ರಿಟನ್ನಿನ ರಾಣಿಯ ಮುಕುಟದಡಿಯಲ್ಲಿ ಬದುಕುತ್ತಿರುವ ಆ ದೇಶದ ಹುಳುಕು - ಕೊಳಕುಗಳನ್ನೆಲ್ಲಾ ಎತ್ತಿ ತೋರಿಸಿದವು. ಮೂಲನಿವಾಸಿಗಳಲ್ಲೇ ಒಬ್ಬಳಾದ ವಿಶ್ವವಿಖ್ಯಾತ ಕ್ರೀಡಾಪಟು ಕ್ಯಾಥಿ ಫ್ರೀಮನ್‌ರಿಂದ ಜ್ಯೋತಿ ಬೆಳಗಿಸಿ ತನ್ನ ಕೊಳಕನ್ನು ಕೊಂಚ ತೊಳೆದುಕೊಂಡಿತ್ತು. ಅದೇ ಒಲಂಪಿಕ್ಸ್ ಕ್ರೀಡಾಕೂಟಗಳಲ್ಲಿ ಚೀನಾ ಪದಕ ಪಟ್ಟಿಯಲ್ಲಿ ಮೂರನೇ ಸ್ಥಾನ ಪಡೆದು ಶ್ರೇಷ್ಠ ಪ್ರದರ್ಶನ ನೀಡಿತಲ್ಲದೆ ಮುಂದಿನ ಆತಿಥ್ಯಕ್ಕಾಗಿ ತಾನಿನ್ನು ಬಲಿಷ್ಠ ಎಂಬುದನ್ನು ಸಾಬೀತುಪಡಿಸಿತು.

ಅಮೆರಿಕಾ, ಇಂಗ್ಲೆಂಡ್ ಮೊದಲಾದ ಬಂಡವಾಳ ಪ್ರಧಾನ ರಾಷ್ಟ್ರಗಳ ತತ್ವಕ್ಕೆ ವಿರುದ್ಧವಾಗಿ ಮೇಲೆದ್ದ ಒಂದು ಸಮಾಜವಾದಿ ರಾಷ್ಟ್ರ ಒಲಂಪಿಕ್ಸ್ ಕ್ರೀಡೆಗಳನ್ನು ನಡೆಸಿ ಜಗತ್ತಿಗೇ ತನ್ನ ಜನರ ಸಂಸ್ಕೃತಿ - ಸಾಧನೆಗಳನ್ನು ಪರಿಚಯಿಸುವುದು ಜಾಗತಿಕ ಸ್ವಯಂಘೋಷಿತ ಮುಖಂಡರಿಗೆ ನುಂಗಲಾಗದ ತುತ್ತಾಗಿತ್ತು. ಇದಕ್ಕಾಗಿಯೇ ಹಿಂಬಾಗಿಲಿನಿಂದ ತಮ್ಮ ಕಾರ್ಯಚಟುವಟಿಕೆಯನ್ನು ಚೀನಾ ೨೦೦೮ರ ಒಲಂಪಿಕ್ಸ್‌ಗಾಗಿ ತನ್ನ ದಾವೇದಾರಿ ಸಲ್ಲಿಸಿದಾಗಿನಿಂದಲೂ ಶುರುಹಚ್ಚಿಕೊಂಡಿದ್ದವು. ಫಲೂನ್ ಗ್ಯಾಂಗ್ ಹಾಗೂ ಟಿಬೆಟ್ಟಿನ ನಿರಾಶ್ರಿತರ ನಿರೀಕ್ಷಿತ ಪ್ರತಿಭಟನೆ ಹೊಸ ರೂಪ, ಹೊಸ ಆಕಾರದೊಂದಿಗೆ ಬರುವುದರಲ್ಲಿತ್ತು. ಇವುಗಳೊಂದಿಗೆ ಢೋಂಗಿ ಮಾನವ ಹಕ್ಕುಗಳ ಹೋರಾಟಗಾರರು ಹಾಗೂ ಮಾಧ್ಯಮಪತಿಗಳು ಒಲಂಪಿಕ್ಸ್ ನಡೆಸಲು ಚೀನಾದ ಅರ್ಹತೆ ಬೇಕಾವುದಕ್ಕಿಂತಲೂ ರಾಜಕೀಯವಾಗಿ ಮೊಟ್ಟಮೊದಲು ನಿರ್ಧರಿತವಾಗಬೇಕೆಂದು ಆಗ್ರಹಿಸುವ ಪರಿಸ್ಥಿತಿ ನಿರ್ಮಾಣವಾಗಿತ್ತು.

೧೯೬೮ರಲ್ಲಿ ಮೆಕ್ಸಿಕೊ ದೇಶದಲ್ಲಿ ಒಲಂಪಿಕ್ಸ್ ನಡೆದಾಗ ಅದು ತೃತೀಯ ಜಗತ್ತಿನ ಒಲಂಪಿಕ್ಸ್ ಎಂಬ ಭಾರಿ ಪ್ರಚಾರದೊಂದಿಗೆ ನೆರವೇರಿತ್ತು. ಮೆಕ್ಸಿಕೊ ಸೇರಿದಂತೆ ತೃತೀಯ ಜಗತ್ತಿನ ಬಡರಾಷ್ಟ್ರಗಳನ್ನು ಸುಲಿಗೆ ಮಾಡುತ್ತಿದ್ದ ಬಹುರಾಷ್ಟ್ರೀಯ ಕಂಪನಿಗಳೇ ಅದನ್ನು ಪ್ರಯೋಗಿಸಿ ಮಿಲಿಯಗಟ್ಟಳೆ ಡಾಲರ್ ನುಂಗಿ ನೀರು ಕುಡಿದಿದ್ದು ಮಾತ್ರ ಮಾಧ್ಯಮಗಳ ಗದ್ದಲದಲ್ಲಿ ಮರೆಯಾಗಿತ್ತು. ಅಮೆರಿಕಾ, ಕೆನಡಾ, ಐರೋಪ್ಯ ಒಕ್ಕೂಟಗಳಿಗೆ ಪ್ರಬಲ ಪ್ರತಿಸ್ಪರ್ಧಿಯಾಗಿ ಮೇಲೆದ್ದು ಬರುತ್ತಿರುವ ಚೀನಾ, ಈ ಪ್ರತಿಷ್ಠಿತ ಕ್ರೀಡಾಕೂಟವನ್ನು ಯಶಸ್ವಿಯಾಗಿ ನಡೆಸಿ ತನ್ನ ಸ್ಥಾನ ಭದ್ರಪಡಿಸಿಕೊಂಡರೆ ಅದರಿಂದ ತಮಗೇ ನಷ್ಟ ಎಂದು ಅರಿತಿದ್ದರಿಂದಲೇ ಈ ಬಾರಿ ರಾಜಕೀಯ ಕ್ರೀಡೆಯನ್ನು ಹಿಂದೆ ಹಾಕಿ ಪ್ರತಿಭಟನೆಯಂತಹ ಕುಂಟುನೆಪಗಳ ಮೂಲಕ ಈ ದೇಶಗಳು ತಮ್ಮ ಕರಾಳ ಹಸ್ತ ಚಾಚಿದ್ದುವು. ಬೀಜಿಂಗ್‌ನಲ್ಲಿ ಜರುಗಿದ 'ಜಾಗತಿಕ ಸಂಸದೀಯ ಪ್ರಜಾಸತ್ತೆಯ' ವಿಚಾರ ಸಂಕಿರಣಕ್ಕೆ ಪ್ರತಿಭಟನೆ ನಡೆಯದಿದ್ದರೂ, ಒಲಂಪಿಕ್ಸ್‌ನ ಆತಿಥ್ಯದ ವಿಷಯದಲ್ಲಿ ಅದು ತಾರಕಕ್ಕೇರಿತ್ತು. ಆದರೂ ನಿರ್ಗಮಿಸುತ್ತಿರುವ ಅಂತರರಾಷ್ಟ್ರೀಯ ಒಲಂಪಿಕ್ಸ್ ಸಮಿತಿಯ ಅಧ್ಯಕ್ಷರ ರಾಜಕೀಯ ಮತ್ತು ಕ್ರೀಡೆಗಳ ಬಗ್ಗೆ ಅವರಿಗಿದ್ದ ಅಚಲ ನಿಲುವು ಮತ್ತು ಸದಸ್ಯರು ಚೀನಾದಲ್ಲಿ ವಿಶ್ವಾಸ ವ್ಯಕ್ತಪಡಿಸಿದ್ದರಿಂದ ೨೦೦೮ರ ಒಲಂಪಿಕ್ಸ್‌ಗೆ ಚೀನಾ ಆತಿಥೇಯ ರಾಷ್ಟ್ರವಾಯಿತು.

ಮಾಸ್ಕೋದಲ್ಲಿ ನಡೆದ ಅಂತರರಾಷ್ಟ್ರೀಯ ಒಲಂಪಿಕ್ಸ್ ಸಮಿತಿಯ ಸಭೆಯಲ್ಲಿ ಬೀಜಿಂಗ್ ತನ್ನ ಪ್ರತಿಸ್ಪರ್ಧಿ ಟೊರೊಂಟೊಕ್ಕಿಂತಲೂ ದುಪ್ಪಟ್ಟು ಮತಗಳನ್ನು ಪಡೆದು ಏಕಮೇವಾದ್ವಿತೀಯನಾಗಿ ಮೆರೆಯಿತು. ಬಹುಶಃ ಸಮಿತಿಯ ಸದಸ್ಯರ ಹಾಗೂ ಅಧ್ಯಕ್ಷರ ರಾಜಕೀಯವನ್ನು ಕ್ರೀಡಾಕೂಟಗಳಿಂದ ದೂರವಿಡುವ ಅಚಲ ನಿರ್ಧಾರವೂ ಕೂಡ ಬೀಜಿಂಗ್‌ನ ಅರ್ಹತೆಯನ್ನು ಕ್ರೀಡಾಕೂಟಗಳಿಗೆ ಆತಿಥ್ಯ ವಹಿಸಲಿರಬೇಕಾದ ಅದರ ಯೋಗ್ಯತೆಯ ಮೇಲೆ ನಿರ್ಧರಿಸುವಲ್ಲಿ ಪ್ರಮುಖ ಪಾತ್ರ ವಹಿಸಿತ್ತು. ಎಲ್ಲಾ ರೀತಿಯ ಮೂಲ ಸೌಕರ್ಯಗಳನ್ನು ಹೊಂದಿದ್ದರೂ ಕೂಡ ಕ್ರೀಡೆಗೆ ಹೊರತಾದ ಬೇರೆ ಕಾರಣಗಳೇ ಚೀನಾಕ್ಕೆ ತೊಡಕಾಗಿದ್ದವು. ಇವೆಲ್ಲದರ ಜೊತೆಗೆ ಜಾಗತಿಕ ಮಾಧ್ಯಮಗಳ ವಾರಸುದಾರರೂ ಕೂಡ ತಾವೇನೂ ಕಮ್ಮಿ ಇಲ್ಲ ಎಂಬಂತೆ ತಮ್ಮದೇ 'ಸಂಶೋಧನೆ'ಯಿಂದ ಉದ್ಭವಿಸಿದ ಹೊಸ ಹೊಸ ತೀರ್ಮಾನಗಳಿಂದ ಬೀಜಿಂಗ್‌ನ ವಿರುದ್ಧ ಪುಂಗಿ ಊದಲು ಶುರು ಮಾಡಿದ್ದವು. ನಮ್ಮ ದೇಶದ ಮಾಧ್ಯಮಗಳೂ ಕೂಡ (ಕೆಲವೇ ಕೆಲವು ಪತ್ರಿಕೆಗಳನ್ನು ಹೊರತುಪಡಿಸಿ) ಅವುಗಳ ವರದಿಗಳನ್ನೇ ತಿದ್ದಿ ತೀಡಿ ತಮ್ಮ ಸಾಮರ್ಥ್ಯ ಸಾಬೀತುಪಡಿಸುವಲ್ಲಿ ಹೆಣಗಾಡುತ್ತಿದ್ದವು.

ಇವೆಲ್ಲ ಅಡೆತಡೆಗಳನ್ನು ಮೀರಿ ಚೀನಾ ಸಾಧಿಸಿದ ಯಶಸ್ಸು ಶ್ಲಾಘನೀಯ. ಹಿಂದೆ ನಡೆದ ಕೋಕ-ಕೋಲಾ, ಪೆಪ್ಸಿ ಒಲಂಪಿಕ್ಸ್‌ಗಳನ್ನೆಲ್ಲಾ ಮೀರಿಸುವಂತೆ ೨೦೦೮ರಲ್ಲಿ ಚೀನಾ ಜನತೆಯು ಒಲಂಪಿಕ್ಸ್ ನಡೆಸಲೆಂದು ಹಾರೈಸೋಣ. ಆದರೂ ೨೦೦೮ರ ಒಲಂಪಿಕ್ಸ್‌ನಲ್ಲಿ ಬೀಜಿಂಗ್‌ನ ಕೇಂದ್ರ ಕ್ರೀಡಾಂಗಣವಾದ 'ದುಡಿಯುವವರ ಕ್ರೀಡಾಂಗಣ'ಕ್ಕಿಂತಲೂ ತಿಯಾನ್ಮನ್ ಚೌಕವೇ ಪ್ರಮುಖ ಮಾಧ್ಯಮ ಕೇಂದ್ರವಾಗುವುದರಲ್ಲಿ ಸಂಶಯವಿಲ್ಲ. ಎಷ್ಟೆಂದರೂ ನಾಯಿ ಬಾಲ ಡೊಂಕೇ.

**ರಾಜೇಶ್ ನಾಯಕ್**
'ಶ್ರೀ ಸ್ವಾಮಿ ಕೃಪ', ವಸಂತ ನಿವಾಸ ಕಾಂಪೌಂಡ್
ಬಂಟ್ಸ್ ಹಾಸ್ಟೆಲ್ ಹತ್ತಿರ, ಮಂಗಳೂರು-೫೭೫ ೦೦೩

# ಕೇಳಿಸೆನೋ ಹಳಿ, ತಾಳಿಸೆನೋ...

ವಿಶ್ವ ಇಂದು ಎದುರಿಸುತ್ತಿರುವ ಅನೇಕ ಮಾಲಿನ್ಯಗಳ ಪೈಕಿ ಮಲಗುವ ಕೋಣೆಗೂ ಅತಿಕ್ರಮವಾಗಿ ಪ್ರವೇಶಿಸುವ, ಅತಿ ನೇರವಾಗಿ ನಮಗೆ ಹಾನಿ ಕಿರಿಕಿರಿ ಮಾಡುತ್ತಿರುವ ಮಾಲಿನ್ಯ, ಶಬ್ದ ಮಾಲಿನ್ಯ.

ನಗರೀಕರಣದಲ್ಲಿ ಶಬ್ದ ಮಾಲಿನ್ಯದಿಂದ ಪೂರ್ತಿಯಾಗಿ ಮುಕ್ತವಾಗಿರಲು ಸಾಧ್ಯವಿಲ್ಲ. WHO ವರದಿಯಂತೆ ಶಬ್ದ ಮಾಲಿನ್ಯವನ್ನು ಅತ್ಯಂತ ಸುಲಭವಾಗಿ ನಿಯಂತ್ರಿಸಬಹುದು.

ಜನರಿಗೆ ಕಿರಿಕಿರಿಯುಂಟುಮಾಡುವ ಅನಗತ್ಯ ಶಬ್ದವನ್ನು ಶಬ್ದ ಮಾಲಿನ್ಯವೆಂದು ಕರೆಯಬಹುದು. ದಿನದಿನಕ್ಕೂ ಇದರ ಹಾವಳಿ ನಗರೀಕರಣದ ನೆಪದಲ್ಲಿ ಅಧಿಕವಾಗುತ್ತಿದ್ದು ಸಾರ್ವಜನಿಕರ ಜೀವನದ ಗುಣಮಟ್ಟ ಹಾಳಾಗಲು ಪ್ರಮುಖವಾದ ಕಾರಣವಾಗಿದೆ. ಕಳೆದ ಮೂವತ್ತು ವರ್ಷಗಳಲ್ಲಿ ಸದ್ದು ಹಿಂದೆಂದಿಗಿಂತಲೂ ಅಧಿಕವಾಗಿದೆ. ನಾವು ನಿಯಂತ್ರಿಸಬಹುದಾದ ಸದ್ದನ್ನು ಕೂಡಾ ಅನಿವಾರ್ಯವೇನೋ ಎಂಬಂತೆ ಒಪ್ಪಿಕೊಂಡು ಅದರ ದುಷ್ಪರಿಣಾಮಗಳಿಗೆ ಬಲಿಯಾಗುತ್ತಿದ್ದೇವೆ.

ವಿದೇಶಗಳಲ್ಲಿ ಗದ್ದಲದ ಮೂಲಗಳು ನಮ್ಮ ದೇಶಕ್ಕಿಂತ ಭಿನ್ನವಾಗಿವೆ ಹಾಗೂ ಅವುಗಳ ನಿಯಂತ್ರಣ ಅಲ್ಲಿ ಸುಲಭವಾಗಿದ್ದು ಕಾನೂನಿನ ಚೌಕಟ್ಟಿಗೆ ಒಳಪಡುತ್ತವೆ. ಆದರೆ ಭಾರತದಲ್ಲಿ ಕೋಮು, ಜಾತಿ, ರಾಜಕೀಯಗಳಂತಹ ನಾನಾ ಕಾರಣಗಳಿಂದ ಅವುಗಳನ್ನು ನಿಯಂತ್ರಿಸುವುದು ದುಃಸ್ಸಾಹಸವಾಗುತ್ತಿದೆ ಹಾಗೂ ನಮ್ಮಲ್ಲಿ ನಾಗರಿಕ ಪ್ರಜ್ಞೆ ಅಷ್ಟಾಗಿ ಇಲ್ಲ.



ವಿದೇಶಗಳಲ್ಲಿ ಗದ್ದಲದ ಮೂಲಗಳು ವಿಮಾನ ನಿಲ್ದಾಣದಲ್ಲಿ ಏರುವ, ಇಳಿಯುವ ವಿಮಾನಗಳ ಸದ್ದು, ಲಾನ್ ಮೋವರ್, ಬೊಗಳುವ ನಾಯಿ, ಮೊಟರ್‌ರೈಸ್ಡ್ ಗರಗಸ, ಸ್ನೋ ಚದುರಿಸುವ ಯಂತ್ರ, ಜ್ಯಾಕ್ ಹ್ಯಾಮರ್, ಮೋಟರ್ ಸೈಕಲ್, ವಾಹನ ಸಂಚಾರ, ಕಾರ್ ಸ್ಟಿರಿಯೋ, ಮನೆಗಳಲ್ಲಿ ಮ್ಯೂಸಿಕ್ ಸಿಸ್ಟಂ, ಟಿವಿ (ಈ ಪಟ್ಟಿಯಲ್ಲಿ ಪಬ್ಲಿಕ್ ಅಡ್ರೆಸ್ ಸಿಸ್ಟಂ ಇಲ್ಲ!)ಗಳಾದರೆ, ನಮ್ಮ ದೇಶದಲ್ಲಿ ಶಬ್ದ ಮಾಲಿನ್ಯ ಮುಖ್ಯವಾಗಿ ಉಂಟಾಗುವುದು ಧ್ವನಿವರ್ಧಕಗಳಿಂದ, ಚುನಾವಣಾ ಪ್ರಚಾರಗಳಲ್ಲಿ, ದೇವಸ್ಥಾನ, ಮಸೀದಿ, ಚರ್ಚುಗಳಲ್ಲಿ, ಕ್ರೀಡಾಕೂಟಗಳಲ್ಲಿ, ರಾಷ್ಟ್ರೀಯ ಹಬ್ಬ, ನಾಡ ಹಬ್ಬ, ಕಡೆಗೆ ಲಾಟರಿ ಟಿಕೆಟ್ ಮಾರಲೂ ಸಹ ಧ್ವನಿವರ್ಧಕಗಳು ಅನಿವಾರ್ಯ ಎಂಬಂತಾಗಿಬಿಟ್ಟಿವೆ.

ಹೆಚ್ಚುತ್ತಿರುವ ವಾಹನ ಸಂಚಾರ, ಆಗಿಂದಾಗ್ಗೆ ಸರ್ವಿಸಿಂಗ್ ಮಾಡಿಸದ ಕಾರ್ಖಾನೆಯ ಹಳೆಯ ಮಾಡೆಲ್ ಯಂತ್ರಗಳು, ಜನರೇಟರ್‌ಗಳು, ಅಗ್ಗದ ಬೆಲೆಯ ಸದ್ದು ಮಾಡುವ ಮಿಕ್ಸಿಗಳು, ಹಾಗೂ ರೆಫ್ರಿಜಿರೇಟರ್ ಶಬ್ದ ಮಾಲಿನ್ಯಕ್ಕೆ ಪ್ರಮುಖ ಕಾರಣವಾಗಿವೆ. ಡೆಕ್ ಮತ್ತು ಮ್ಯೂಸಿಕ್ ಸಿಸ್ಟಂಗಳನ್ನು ಹೊಂದಿ ತಮ್ಮ ಅಭಿರುಚಿಯನ್ನು ಬೀದಿಗೆಲ್ಲಾ ಉಣಬಡಿಸುವ ಸಂಗೀತ ಪ್ರೇಮಿಗಳು, ವಾಹನಗಳ ಬೆಚ್ಚಿ ಬೀಳಿಸುವ ತರಹಾವರಿ ಹಾರ್ನ್‌ಗಳು ಹಾಗೂ ಅವುಗಳ ರಿವರ್ಸ್ ಇಂಡಿಕೇಟರ್‌ಗಳು, ಶಾಲಾ ಕಾಲೇಜುಗಳ ದಿನಾಚರಣೆ, ರಸ ಸಂಜೆ ಕಾರ್ಯಕ್ರಮಗಳು, ನಾಯಿಕೊಡೆ ಗಳಂತೆ ಅಂಕೆ ಸಂಖ್ಯೆ ಇಲ್ಲದೆ ಬೆಳೆದಿರುವ ವಿವಿಧ ಸಂಘಗಳ ವಾರ್ಷಿಕ ಕಾರ್ಯಕ್ರಮಗಳು, ಅಣ್ಣಮ್ಮ, ಮಾರಮ್ಮ, ಅಯ್ಯಪ್ಪ, ಶನಿ ಮುಂತಾದ ದೇವರುಗಳ ಹೆಸರಿನಲ್ಲಿ ಕಾಟ..... ಹೀಗೆ ಪಟ್ಟಿ ಕೊನೆಯಿರದೆ ಬೆಳೆಯುತ್ತದೆ.

ನಿಮ್ಮ ಮನೆಯ ಒಳಗೆ ನೀವಿದ್ದಾಗ ಹೊರಗಿನಿಂದ ಸದ್ದು ನಿಮಗೆ ಕೇಳಿಸುತ್ತಿದೆ ಎಂದರೆ, ಅವರು ತಮ್ಮ ಸಾಮ್ರಾಜ್ಯವನ್ನು ನಿಮ್ಮ ಮನೆಯೊಳಗಿನವರೆಗೂ ವಿಸ್ತರಿಸಿದಂತೆ ಅರ್ಥ. ನಮ್ಮ ಮನಸ್ಸಿಗೆ ಬಂದ ಆಲೋಚನೆಗಳನ್ನು ನಿರ್ಭಿಡೆಯಿಂದ ತಿಳಿಸಲು ನಮಗೆ ವಾಕ್ ಸ್ವಾತಂತ್ರ್ಯ ಇದ್ದಂತೆಯೇ ನಾವು ನಮ್ಮ ಮೌನವನ್ನು ಪ್ರಶಾಂತತೆಯನ್ನು ಉಳಿಸಿಕೊಳ್ಳುವ ಸ್ವಾತಂತ್ರ್ಯವೂ ಇದೆ.

**ಆರೋಗ್ಯದ ಮೇಲೆ ಪರಿಣಾಮ :** ಶಬ್ದ ಮಾಲಿನ್ಯದಿಂದ ಕಸಿವಿಸಿ, ಏಕಾಗ್ರತೆಯ ಹಾನಿ, ಮುಜುಗರ, ಅಷ್ಟೇ ಅಲ್ಲದೆ, ಶ್ರವಣ ಮಾಂದ್ಯತೆಯೂ ಉಂಟಾಗುತ್ತದೆ. ನಮ್ಮ ದೇಹ ಶಬ್ದಕ್ಕೆ ಹೊಂದಿಕೊಳ್ಳುವುದು ಬಹಳ ಕಷ್ಟಕರ.

ಶಬ್ದ ಮಾಲಿನ್ಯದಿಂದ ಕಿವುಡು ಮಾತ್ರವಲ್ಲ, ಬೇರೆ ಬೇರೆ ರೀತಿಯ ಆರೋಗ್ಯವೂ ಹಾಳಾಗಬಹುದು. ಈ ರೀತಿಯ ಖಾಯಿಲೆಗಳಲ್ಲಿ ತಾತ್ಕಾಲಿಕವಾದದ್ದೂ, ಖಾಯಂ ಆದದ್ದೂ ಇದೆ. ಹೃದ್‌ರೋಗ ಸಂಬಂಧಿ ರೋಗಗಳಾದ ಅಧಿಕ ರಕ್ತದ ಒತ್ತಡ, ಎದೆ ಢವಗುಟ್ಟುವಿಕೆ, ಗ್ಯಾಸ್ಟ್ರಿಕ್ ಸಮಸ್ಯೆ, ಚುರುಕುತನ ಮತ್ತು ನೆನಪಿನ ಶಕ್ತಿ ಕುಂಠಿತವಾಗುವುದು ಇವು ಅಲ್ಪಾವಧಿ ಸಮಸ್ಯೆಗಳಾದರೆ, ಶಬ್ದ ಮಾಲಿನ್ಯದಿಂದ ಉಂಟಾಗುವ ದೀರ್ಘಾವಧಿ ಸಮಸ್ಯೆಗಳು ನಿದ್ರಾಹೀನತೆ, ನರದೌರ್ಬಲ್ಯ, ಹೃದ್ರೋಗ, ಅಧಿಕ ರಕ್ತದೊತ್ತಡ, ಆತಂಕ, ಖಿನ್ನತೆ, ಹೊಟ್ಟೆ ನೋವು, ಜೀರ್ಣಶಕ್ತಿ ಪತನ, ಲಾಲಾರಸ ಮತ್ತು ಗ್ಯಾಸ್ಟ್ರಿಕ್ ರಸಗಳ ಅನುತ್ಪತ್ತಿ ಹಾಗೂ ಲೈಂಗಿಕ ಅಸಮರ್ಪಕತೆ.

ಒಬ್ಬ ಆರೋಗ್ಯವಂತ, ಒಳ್ಳೆಯ ಶ್ರವಣ ಶಕ್ತಿ ಉಳ್ಳ ಯುವಕನಿಗೆ ೨೦ರಿಂದ ೨೦,೦೦೦ Hz ಕಂಪನಗಳು ಕೇಳಿಸುತ್ತವೆ. ಇದರಲ್ಲಿ ೨,೦೦೦ದಿಂದ ೮,೦೦೦ Hz ಕಂಪನಗಳು ತೀರಾ ಕಿರಿಕಿರಿಯುಂಟು ಮಾಡುತ್ತವೆ. ೪೦ರಿಂದ ೪೫ ಡೆಸಿಬಲ್‌ಗಳ ವರೆಗಿನ ಶಬ್ದ ಸಹನೀಯವಾಗಿರುತ್ತದೆ. ೫೫ ಡೆಸಿಬಲ್‌ಗಳ ತೀವ್ರತೆಯ ಶಬ್ದಗಳಿಂದ ಕಿರಿಕಿರಿಯುಂಟಾಗಬಹುದು, ನಿದ್ದೆ ಕೆಡಬಹುದು ಹಾಗೂ ನಡೆವಳಿಕೆ ಆಕ್ರಮಣಕಾರಿಯಾಗಬಹುದು.

**ಸಾಮಾಜಿಕ ಕಿರಿಕಿರಿ :** ಶಬ್ದದ ತೀವ್ರತೆ ಅನೇಕ ಮನೋವೈಜ್ಞಾನಿಕ ಕಾರಣಗಳಿಂದ ಬೇರೆ ಬೇರೆ ವ್ಯಕ್ತಿಗಳಲ್ಲಿ ಭಿನ್ನಭಿನ್ನವಾದ ಪ್ರತಿಕ್ರಿಯೆಯನ್ನು ಉಂಟುಮಾಡುತ್ತದೆ. ಕೆಲವರಿಗೆ ಅದು ಗದ್ದಲ ಹಿಂಸೆ ಎನಿಸಿದರೆ, ಇನ್ನು ಕೆಲವರಿಗೆ ಅದು ಸಹನೀಯವಾಗೇ ಕಾಣುತ್ತದೆ. ರೈಲಿನ ಕೂಗು, ಆಡುವ ಮಕ್ಕಳ ಕೂಗಾಟ, ಸಂಗೀತ ಕೇಳುತ್ತಿರುವಾಗ ಯಾರದೋ ಕೆಮ್ಮು, ಸಿನಿಮಾ ಮಂದಿರದಲ್ಲಿ ಅಕ್ಕಪಕ್ಕದವರ ಮಾತು, ತೀವ್ರ ಕಿರಿಕಿರಿ ಉಂಟುಮಾಡಬಲ್ಲದು. ತಮಗೆ ಇಷ್ಟವಾದ ಸಂಗೀತವನ್ನು ತಾವೇ ಸಹನೀಯವಾದ ಮಿತಿಗಳನ್ನು ಮೀರಿ ಕೇಳುವುದರಿಂದ ಅದು ಕಿರಿಕಿರಿ ಎನಿಸುವುದಿಲ್ಲ. ಅದೇ ಸದ್ದು, ಆ ಗುಂಪಿನಲ್ಲಿ ಭಾಗಿಯಾಗದ ಇತರರಿಗೆ ಕಿರಿಕಿರಿ ಉಂಟುಮಾಡಬಹುದು. ಎಷ್ಟೋ ಬಾರಿ ನಮ್ಮ ನಿಯಂತ್ರಣದಲ್ಲಿ ಇರದ ವಸ್ತುವಿನ ಸದ್ದು ನಮಗೆ ಕಿರಿಕಿರಿ ಉಂಟುಮಾಡುತ್ತಿದ್ದರೂ ಸಹ, ಅದರ ಮೂಲ ಯಾವುದು ಎಂದು ಗೊತ್ತಾದರೆ ಅಥವಾ ಅದು ಎಷ್ಟು ಹೊತ್ತು ಇರುತ್ತದೆ ಎಂದು ಗೊತ್ತಾದರೆ ಆ ಶಬ್ದವನ್ನು ಅಷ್ಟು ಹೊತ್ತು ಸಹಿಸಿಕೊಳ್ಳಲು ಸಾಧ್ಯ.

**ಕೆಲಸ ಮಾಡುವಲ್ಲಿ ಗದ್ದಲ :** ಮೆಲ್ಲಗೆ ಮಾತನಾಡಿದರೆ ಕೇಳಿಸುವುದಿಲ್ಲವೆಂದು ಗಟ್ಟಿಯಾಗಿ ಮಾತನಾಡಬೇಕಾದಷ್ಟು ಜೋರಾದ ಗದ್ದಲವಿರುವ ಕಛೇರಿ/ಕಾರ್ಖಾನೆಗಳಲ್ಲಿ ಕನಿಷ್ಠ ೮೫ ಡೆಸಿಬಲ್‌ಗಳಷ್ಟು ಗದ್ದಲವಿರುತ್ತದೆ. ವೃತ್ತಿ ಸುರಕ್ಷೆ ಮತ್ತು ಆರೋಗ್ಯ ಕಾಯಿದೆ (OSHA : Occupational Safety and Health Act) ಇಂತಹ ವಾತಾವರಣದಲ್ಲಿ ಅನುಷ್ಠಾನಕ್ಕೆ ಬರಬೇಕು. ಕಛೇರಿ/ಕಾರ್ಖಾನೆಗಳಲ್ಲಿ ಉಂಟಾಗುತ್ತಿರುವ ಗದ್ದಲದ ಪ್ರಮಾಣವನ್ನು ಡೆಸಿಬಲ್‌ಗಳಲ್ಲಿ ಅಳೆದು, ಅದನ್ನು ಕಡಿಮೆ ಮಾಡಲು ಅಗತ್ಯವಿರುವ ಕ್ರಮಗಳನ್ನು ತೆಗೆದುಕೊಳ್ಳಬೇಕು. ಯಂತ್ರಗಳ ನವೀಕರಣ, ಕಾರ್ಮಿಕರಿಗೆ ಶ್ರವಣ ತಪಾಸಣೆ ಮಾಡಿಸಬೇಕು. ಶಬ್ದ ೫೮ ಡೆಸಿಬಲ್‌ಗಳಿಗಿಂತ ಹೆಚ್ಚಾದರೆ ಆಲೋಚನಾ ಶಕ್ತಿ ಕುಂಠಿತವಾಗಬಹುದು ಮತ್ತು ಸಂಭಾಷಣೆ ಮಾಡಲೂ ಅಡ್ಡಿಯಾಗಬಹುದು.

ಕಾರ್ಮಿಕರಿಗೆ ಎರಡು ರೀತಿಯ ಸದ್ದು ಕೇಳಿಸಬಹುದು. ಯಂತ್ರದಿಂದ ಹೊಮ್ಮುವ ನೇರ ಸದ್ದು ಹಾಗೂ ಅದರ ಸದ್ದಿಗೆ

ಡಾ॥ ಉದಯ ರವಿ ಎಸ್. ಎ.

ತತ್ತರಿಸುವ ಕಟ್ಟಡ ಮತ್ತು ಒಳಗಿನ ಇತರ ವಸ್ತುಗಳ ಕಂಪನದ ಸದ್ದು. ಓಷಾ ಶಿಫಾರ್ಸು ಮಾಡುವ ಪ್ರಕಾರ ಶಬ್ದದ ತೀವ್ರತೆ ಹೆಚ್ಚಾದಂತೆಲ್ಲ ಒಂದು ದಿನದಲ್ಲಿ ಕಾರ್ಮಿಕನ ಅದರೊಂದಿಗಿನ ಒಡನಾಟದ ಸಮಯ ಕಡಿಮೆಯಾಗಬೇಕು. ಉದಾಹರಣೆಗೆ, ಜ್ಯಾಕ್ ಹ್ಯಾಮರ್ ಬಳಸುವ ಕಾರ್ಮಿಕ ದಿನವೊಂದಕ್ಕೆ ಎರಡು ಗಂಟೆಗಳಿಗಿಂತ ಹೆಚ್ಚು ವೇಳೆ ಅದರೊಂದಿಗೆ ಕಳೆಯಬಾರದು. ಜೆಟ್ ವಿಮಾನದ ಎಂಜಿನ್ ರಿಪೇರಿ ಮಾಡುವವರು (೧೨೦ ಡೆಸಿಬಲ್‌ಗಳ ಸದ್ದಿನೊಡನೆ) ಪ್ರತಿ ಎಂಟುಗಂಟೆಗಳಿಗೆ ಕೇವಲ ಹದಿನೈದು ನಿಮಿಷಗಳ ಕಾಲ ಕಳೆಯಬೇಕು.

ಅಪಾಯದ ಮಟ್ಟವೆಂದು ಗುರುತಿಸಲಾಗಿರುವ ೯೫ ಡೆಸಿಬಲ್ ಅಥವಾ ಅಧಿಕ ಗದ್ದಲದಲ್ಲಿ ದಿನವೊಂದಕ್ಕೆ ೪ ಗಂಟೆಗಳ ಕಾಲ ಕಳೆದರೆ ಶಾಶ್ವತ ಕಿವುಡು ಉಂಟಾಗುವ ಸಾಧ್ಯತೆ ಇದೆ. ಇದೇ ಸಮೀಕ್ಷೆಯ ಪ್ರಕಾರ ಕಿವಿಗೆ ಹಾಕಿಕೊಂಡ ವಾಕ್‌ಮನ್‌ನಿಂದ ಹೊರಬರುವ ಸದ್ದು ೯೫ರಿಂದ ೧೦೦ ಡಿ.ಬಿ. ಕೆಲವೊಮ್ಮೆ ೧೨೫ ಡಿ.ಬಿ.ಗಳವರೆಗೂ ಇರುತ್ತದೆ. ಈ ಸದ್ದು ಜ್ಯಾಕ್ ಹ್ಯಾಮರ್ ಸದ್ದಿಗೆ ಸಮನಾದದ್ದು. ಓಷ ಬಹಳ ಉದಾರವಾಗಿ ಅಪಾಯದ ಮಟ್ಟ ೯೫ ಡಿ.ಬಿ. ಎಂದು ತಿಳಿಸಿದೆ. ನಿಜವಾಗಿಯೂ ೮೫ರಿಂದ ೯೦ ಡಿ.ಬಿ. ಗಳೇ ಕಿವಿಯನ್ನು ನಾಶಪಡಿಸಲು ಸಮರ್ಥವಾಗಿರುತ್ತವೆ.

ವಾಕ್‌ಮನ್‌ನಂತಹ ಪೋರ್ಟಬಲ್ ಯಂತ್ರಗಳಿಂದ ಕಿವುಡುತನ ಅಧಿಕವಾಗುತ್ತಿರುವುದು ವೈದ್ಯಕೀಯ ಸಮೀಕ್ಷೆಗಳಿಂದ ಪ್ರಮಾಣಿತವಾಗಿದೆ. 'ವಾಕ್‌ಮನ್' ಎಂಬ ಬ್ರ್ಯಾಂಡ್ ಹೆಸರಿನ ಪೋರ್ಟಬಲ್ ಟೇಪ್‌ರಿಕಾರ್ಡರ್ ಅನ್ನು ಮೊದಲ ಬಾರಿಗೆ ತಯಾರಿಸಿದ ಸೋನಿ ಸಂಸ್ಥೆ ಇದಕ್ಕೆ ತಾನು ಹೊಣೆಯಲ್ಲ ಎನ್ನುತ್ತದೆ. ದೋಷ ಯಂತ್ರದಲ್ಲಿ ಇಲ್ಲ, ಅದರ ತಪ್ಪು ಬಳಕೆಯಲ್ಲಿದೆ ಎನ್ನುತ್ತಾರೆ – ವಾಕ್‌ಮನ್‌ನಲ್ಲಿ ವಾಲ್ಯೂಂ ಕಂಟ್ರೋಲ್ ಇದೆಯಲ್ಲ! ವಾಹನ ಜೋರಾಗಿ ಚಲಾಯಿಸಿ ಅಪಘಾತವಾದರೆ ಅದು ಚಾಲಕನ ತಪ್ಪೇ ವಿನಃ ವಾಹನ ತಯಾರಿಸಿದ ಸಂಸ್ಥೆಯದಲ್ಲ.

ಕಿವಿಗೆ ಇಯರ್ ಫೋನ್ ಬಳಕೆ ಹೆಚ್ಚಾಗುತ್ತಿರುವುದು ಕಳೆದ ಇಪ್ಪತ್ತು ವರ್ಷಗಳಲ್ಲಿ ಮಾತ್ರ. ಏಕೆಂದರೆ ಜನರು ಕೇಳುವ ವಿಧಾನವನ್ನು ಬದಲಿಸಿಕೊಂಡಿದ್ದಾರೆ. ಮುಂಚೆ ನಿಶ್ಶಬ್ದ ತಾಣಗಳಲ್ಲಿ ಇತರರಿಗೆ ತೊಂದರೆಯಾಗದಿರಲಿ ಎಂಬ ಕಾರಣಕ್ಕೆ ಹೆಡ್‌ಫೋನ್ ಹಾಕಿಕೊಂಡು ಕೇಳುತ್ತಿದ್ದರು. ಈಗ, ಗದ್ದಲದ ರಸ್ತೆಗಳಲ್ಲಿ ನಡೆಯುತ್ತಾ ಓಡುತ್ತಾ ವಾಹನ ಚಲಿಸುತ್ತಾ ವಾಕ್‌ಮನ್ ಕೇಳುತ್ತಾರೆ. ರಸ್ತೆಯ ಗದ್ದಲ ಕೇಳಿಸದೆ ಸಂಗೀತ ಮಾತ್ರ ಕೇಳಿಸಲಿ ಎಂದು ವಾಲ್ಯೂಂ ಹೆಚ್ಚು ಮಾಡುತ್ತಾರೆ. ಇದರ ಪರಿಣಾಮ ಶ್ರವಣ ವೈಕಲ್ಯ.

ಅದೃಷ್ಟವಶಾತ್ ಇತ್ತೀಚಿನ ದಿನಗಳಲ್ಲಿ ಜನರಿಗೆ ಈ ಬಗ್ಗೆ ಜಾಗೃತಿ ಉಂಟಾಗುತ್ತಿದ್ದು ಶಬ್ದ ಮಾಲಿನ್ಯದ ವಿರುದ್ಧ ವಿಶ್ವಾದ್ಯಂತ ಚಳವಳಿ, ಹೋರಾಟ ನಡೆಯುತ್ತಿದೆ. ಆದರೆ ಅದರ ಪ್ರಮಾಣ ಸಾಲದು. ೧೯೮೪ರಲ್ಲಿ ಜಪಾನಿನ ಯಮಟೋದ ಯುವಕರಲ್ಲಿ ಶೇ. ೭೦ರಷ್ಟು ಜನ ಸಹಿ ಸಂಗ್ರಹಿಸಿ, ಅಮೆರಿಕದ ನೌಕಾಪಡೆಯ ತನ್ನ ವಾಯು ಹಾರಾಟಗಳನ್ನು ಆ ಪಟ್ಟಣದ ಮೇಲೆ ಮಾಡಬಾರದು ಎಂದು ಒತ್ತಾಯಿಸಿದರು.

ಜಪಾನಿನಲ್ಲಿರುವ ಅಮೆರಿಕದ ವಾಯು ನೌಕಾ ನೆಲೆ 'ಅಟ್‌ಸುಗಿ' ಯಿಂದ ೨೦ ಮೈಲಿ ದೂರದಲ್ಲಿರುವ ಈ ಪಟ್ಟಣದ ಮೇಲೆ F4, A6, E2 ನಂತಹ ನೂರಾರು ಜೆಟ್ ವಿಮಾನಗಳು ಅತಿ ತಗ್ಗಿನಲ್ಲಿ ಹಾರಾಡಿದಾಗ ಮನೆಗಳು ಹಾಗೂ ಮನೆ ಒಳಗಿನ ವಸ್ತುಗಳೆಲ್ಲಾ ಅದುರುತ್ತವೆ. ಸಂಜೆಯ ಹೊತ್ತು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಟೇಕ್‌ಆಫ್ ಮತ್ತು ಲ್ಯಾಂಡಿಂಗ್‌ಗಳಿದ್ದು ಆಗ ಶಬ್ದ ಮಾಲಿನ್ಯವು ಪರಾಕಾಷ್ಠೆ ತಲುಪುತ್ತದೆ. ಈ ವಿಮಾನ ಹಾರಾಟದ ಕಸರತ್ತು ಪೈಲಟ್‌ಗಳ ಅನುಭವ ಕ್ಷಮತೆ, ಕೌಶಲ್ಯಗಳನ್ನು ಮೊನಚಾಗಿ ಇಟ್ಟುಕೊಳ್ಳಲು (ಮತ್ತು ಈಗ ಆಫ್ಘಾನಿಸ್ತಾನದ ಮೇಲೆ ಆಕ್ರಮಣ ಮಾಡಲು) ನಡೆಯುತ್ತದೆ. ಈ ದೃಶ್ಯವು ಅಲ್ಲಿನ ನಿವಾಸಿಗಳಿಗೆ ರೋಮಾಂಚನ, ಮನರಂಜನೆಗಳನ್ನು ನೀಡುತ್ತಿಲ್ಲ, ಬದಲಿಗೆ ನಿದ್ರಾಹೀನತೆ, ಅನಾರೋಗ್ಯವನ್ನು ನೀಡುತ್ತಿದೆ. ಈ ತಾಲೀಮು ನೆಲೆಯನ್ನು ಬೇರೆಡೆಗೆ ವರ್ಗಾಯಿಸಲು ಕೋರುತ್ತಿದ್ದಾರೆ. ಆದರೆ ಎಲ್ಲಿಗೆ ? ಆ ಅನಿಷ್ಟದ ಸದ್ದು ಯಾರಿಗೂ ಬೇಡ.

**ಪರಿಹಾರಗಳು** : ನಿಮ್ಮ ದೈನಂದಿನ ಜೀವನದಲ್ಲಿ ನಿಮ್ಮ ಮೋಜು ಮನರಂಜನೆಗೆ ನೀವು ಬಳಸುವ ರೇಡಿಯೋ, ಟಿವಿ, ಮ್ಯೂಸಿಕ್ ಸಿಸ್ಟಂಗಳ ಸದ್ದು ನಿಮ್ಮ ಮನೆಯ ಗೋಡೆಗಳನ್ನು ದಾಟಿ ಹೋಗದಂತೆ ಎಚ್ಚರವಹಿಸಿ. ನಿಮ್ಮ ಮಕ್ಕಳಿಗೆ ಈ ಬಗ್ಗೆ ತಿಳಿವು ನೀಡಿ. ಸಂಗೀತ ವಾದ್ಯಗಳ ಅಭ್ಯಾಸ ಮಾಡುವುದಾದರೆ ನಿಮ್ಮ ಮನೆಯ ಕಿಟಕಿಗಳನ್ನು ಹಾಕಿಕೊಂಡು ಕನಿಷ್ಠ ಶಬ್ದ ಹೊರಬರುವಂತೆ ನೋಡಿಕೊಳ್ಳಿ. ನಿಮ್ಮ ಮನೆಯಲ್ಲಿ ವಿನಾಕಾರಣ ನಾಯಿ ಬೊಗಳುವುದು, ಮಕ್ಕಳು ಜೋರಾಗಿ ಗದ್ದಲ ಮಾಡುವುದು, ಹಿರಿಯರು ಜಗಳವಾಡುವುದು, ಮಹಡಿ ಮನೆಗಳಲ್ಲಿ ಧಿಮಿ ಧಿಮಿ ಕುಣಿಯುವುದು, ಗೋಡೆಗೆ ಅಪರಾತ್ರಿಯಲ್ಲಿ ಮೊಳೆ ಹೊಡೆಯುವುದು, ಇವುಗಳನ್ನು ತಡೆಗಟ್ಟಿ ನೆರೆಹೊರೆಯವರಿಗೆ ಉಪಕಾರ ಮಾಡಬಹುದು.

ನಿಮ್ಮ ವಾಹನಗಳನ್ನು ಪ್ರತಿ ಮುಂಜಾನೆ ಸ್ಟಾರ್ಟ್ ಮಾಡುವಾಗ ವರ್ರೋಂ ಎಂದು ಸದ್ದು ಮಾಡಿ ನೆರೆಮನೆಗಳಿಗೆ ತೊಂದರೆ ಮಾಡದಿರಿ. ಆಗಿಂದಾಗ್ಗೆ ನಿಮ್ಮ ವಾಹನಗಳನ್ನು ಸರ್ವೀಸಿಂಗ್ ಮಾಡಿಸಿ. ಅನಾವಶ್ಯಕವಾಗಿ ವಾಹನಗಳ ಹಾರ್ನ್ ಮಾಡಬೇಡಿ. ವಿಶೇಷ ದಿನಗಳಲ್ಲಿ ಸಮಾರಂಭ ಮಾಡಿದಾಗ ಧ್ವನಿವರ್ಧಕಗಳನ್ನು ಬಳಸಬೇಡಿ. ಒಂದು ವೇಳೆ ಬಳಸಿದರೂ, ನಿಮ್ಮ ಸಮಾರಂಭದ ಭಾಗಿಗಳಿಗೆ ಮಾತ್ರ ಕೇಳಿಸುವಂತೆ ಬಳಸಿ. ಧ್ವನಿವರ್ಧಕಗಳನ್ನು ಹೊರಗೆ ದಶ ದಿಕ್ಕುಗಳಿಗೂ ಮುಖ ಮಾಡಿ ನಿಮ್ಮ ಸುಖ ಸಂತೋಷವನ್ನು ಪ್ರಪಂಚಕ್ಕೇ ಹಂಚಬೇಡಿ. ಧ್ವನಿವರ್ಧಕಗಳನ್ನು ನಿಮ್ಮ ಸಭೆ ನಡೆಯುವ ಆವರಣದ ಒಳಕ್ಕೆ ಮುಖ ಮಾಡಿ, ಮುಗಿಲಿನ ಕಡೆಗೆ ಎತ್ತರಿಸದೆ, ನೆಲದ ಕಡೆಗೆ ತಗ್ಗಿಸಿ. ಆಗ ನಿಮಗೆ ಬೇಕಾಗುವಷ್ಟು ಮಾತ್ರ ಧ್ವನಿವರ್ಧನೆ ಆಗುತ್ತದೆ. ನೀವು ಔತಣ ನಡೆಸುವುದಾದರೆ, ನೆರೆಹೊರೆಯವರಿಗೆ ಆಗಬಹುದಾದ ತೊಂದರೆಯನ್ನು ಮುಂಚಿತವಾಗಿಯೇ ತಿಳಿಸಿ ಕ್ಷಮೆ ಯಾಚಿಸಿ. ನಿಮ್ಮ ಗೈರು ಹಾಜರಿಯಲ್ಲಿ ನಾಯಿ ಒಂದೇ ಸಮನೆ ಬೊಗಳುವುದಾದರೆ, ಅದನ್ನು ನೆಂಟರ/ಗೆಳೆಯರ ಮನೆಯಲ್ಲಿ ಬಿಡಿ. ಹೊಸ ಯಂತ್ರ ಕೊಳ್ಳಬೇಕಾದರೆ ಕನಿಷ್ಠ ಶಬ್ದ ಮಾಡುವ ಯಂತ್ರಗಳನ್ನು ಕೊಳ್ಳಿ. ಇದು ಸ್ವಲ್ಪ ಅಧಿಕ ಬೆಲೆಯಾದರೂ ಅಷ್ಟಕ್ಕೆ ಹಿಂದೇಟು ಹಾಕಬಾರದು.

ಮಕ್ಕಳ ಕಣ್ಣಿನ ದೃಷ್ಟಿ ಹಾಳಾಗದಂತೆ ಪೋಷಕರು ಎಚ್ಚರ ವಹಿಸುತ್ತಾರೆ. ಹತ್ತಿರದಿಂದ ಟಿವಿ ನೋಡಬೇಡಿ (ದೂರದಿಂದಲಾದರೂ ಸರಿ ಏಕೆ ನೋಡಬೇಕು?). ಎಡಭುಜದ ಮೇಲಿನಿಂದ ಪುಸ್ತಕದ ಮೇಲಕ್ಕೆ ಬೆಳಕು ಬೀಳುವಂತೆ ಕುಳಿತು ಓದಿ, ಪುಸ್ತಕವನ್ನು ಕಣ್ಣಿಗೆ ತೀರಾ ಹತ್ತಿರ ಹಿಡಿದು ಓದಬೇಡಿ, ಎಂದೆಲ್ಲಾ ನೀವು ಹೇಳಿಕೊಡುವಂತೆ ಶ್ರವಣ ಸಭ್ಯತೆಯನ್ನೂ ಕಲಿಸಬೇಕು. ಹೀಗೆ ಮಾಡಿದರೆ ಮುಂದಿನ ತಲೆಮಾರಿನಲ್ಲಿ ತಲೆದೋರಬಹುದಾದ ಭಾರೀ ಪ್ರಮಾಣದ ಶ್ರವಣ ಮಾಂದ್ಯತೆಯನ್ನು ತಡೆಗಟ್ಟಬಹುದು.

ನಿಮ್ಮ ಮನೆ ಮುಂದೆ ಗಿಡಮರಗಳನ್ನು ಬೆಳೆಸಿದರೆ, ಅದು ಸದ್ದನ್ನು ಹೀರಿಕೊಂಡು ತೀವ್ರತೆಯನ್ನು ಕಡಿಮೆ ಮಾಡುತ್ತದೆ. ಕಿಟಕಿ, ಬಾಗಿಲುಗಳಿಗೆ ದಪ್ಪನೆಯ ಕರ್ಟನ್ ಹಾಕಿ, ನೆಲಕ್ಕೆ ರಗ್ ಅಥವಾ ಕಾರ್ಪೆಟ್‌ಅನ್ನು ಹಾಕಿ ಸದ್ದು ಪ್ರತಿಫಲಿಸುವುದನ್ನು ಕಡಿಮೆ ಮಾಡಬಹುದು. ಮನೆ ಕಟ್ಟುವಾಗ ನಿಮ್ಮ ನಿವೇಶನದ ಅಕ್ಕಪಕ್ಕ ಈಗಾಗಲೇ ಶಬ್ದ ಮಲಿನ ಮಾಡುವ ಮೂಲಗಳು ಇದ್ದಲ್ಲಿ ಆ ಕಡೆಗೆ ಕಾರಿಡಾರ್, ಮೆಟ್ಟಿಲು, ಬಾತ್‌ರೂಂ, ಅಡಿಗೆ ಮನೆ, ಇಂತಹ ದೀರ್ಘಕಾಲ ಇರದ ಮನೆಯ ಭಾಗಗಳು ಬರುವಂತೆ ಕಟ್ಟಿದರೆ, ಓದುವ ಕೋಣೆ, ಮಲಗುವ ಕೋಣೆಗಳನ್ನು ನಿಮ್ಮ ನಿವೇಶನದ ಪ್ರಶಾಂತ ಭಾಗಗಳಲ್ಲಿ ಕಟ್ಟಬಹುದು.

ತುಂಬಾ ಸದ್ದು ಮಾಡುವ ಯಂತ್ರಗಳು ನಿಮ್ಮ ಕಾರ್ಖಾನೆಗಳಲ್ಲಿ ಇದ್ದರೆ ಅದನ್ನು ಶಬ್ದ ನಿರೋಧಕ ಕೋಣೆಗಳಲ್ಲಿ ಇಡಬೇಕು. ಶಬ್ದ ನಿರೋಧಿಸುವ ಗೋಡೆಗಳನ್ನು ಕಟ್ಟಲು ದುಬಾರಿ ಯಾಗುತ್ತದೆ ನಿಜ, ಆದರೆ, ನಿಮ್ಮ ನೌಕರರ ಆರೋಗ್ಯಕ್ಕಿಂತ ದುಬಾರಿಯಾದುದಲ್ಲ. ನೀವು ಯಂತ್ರಗಳ ವಿನ್ಯಾಸಕರಾಗಿದ್ದರೆ ನಿಮ್ಮ ಯಂತ್ರಗಳು ಕನಿಷ್ಠ ಶಬ್ದವುಂಟುಮಾಡುವಂತೆ ವಿನ್ಯಾಸಗೊಳಿಸಿ. ಈ ಕಾರಣದಿಂದ ಆ ಯಂತ್ರದ ಬೆಲೆ ಸ್ವಲ್ಪ ಹೆಚ್ಚಾದರೂ ಅದು ನಿಮ್ಮ ಯಂತ್ರದ ವೈಶಿಷ್ಟ್ಯತೆ ಎಂದು ಜಾಹೀರಾತುಗಳಲ್ಲಿ ಪ್ರಚಾರ ಮಾಡಿ ನಿಮ್ಮ ವಸ್ತುವನ್ನು ಮಾರಾಟ ಮಾಡಬಹುದು.

ವೈಯಕ್ತಿಕ ವಾಹನಗಳನ್ನು ಬಳಸಿ ಒಬ್ಬೊಬ್ಬರೂ ಶಬ್ದ ಮಾಲಿನ್ಯಕ್ಕೆ ತಮ್ಮ ಕೊಡುಗೆ ನೀಡುವ ಬದಲು, ಸಾರ್ವಜನಿಕ ವಾಹನಗಳನ್ನು ಬಳಸಬಹುದು. ಕಛೇರಿಗಳು ನೌಕರರ ಮನೆಗಳ ಸಮೀಪವೇ ಇದ್ದರೆ ಅಥವಾ ತಮ್ಮ ಮನೆಗಳಿಂದಲೇ ಇಂಟರ್‌ನೆಟ್ ಅಥವಾ ದೂರವಾಣಿಗಳ ಸಹಾಯದಿಂದ ನಿಭಾಯಿಸಲು ಸಾಧ್ಯವಾಗುವಂತಿದ್ದರೆ ಆಫೀಸಿಗೆ

## ಗೊರಕೆಯೂ ಶಬ್ದ ಮಾಲಿನ್ಯವೇ !

ನಿದ್ರಿಸುವಾಗ ಉಸಿರಾಟದಿಂದ ಶಬ್ದವಾದರೆ ಅದನ್ನು ಗೊರಕೆ ಎನ್ನುತ್ತಾರೆ. ಇದರಿಂದ ಸನಿಹದಲ್ಲಿ ನಿದ್ರಿಸುವವರಿಗೆ ಭಾರೀ ತೊಂದರೆ ಆಗಬಹುದು. ಗೊರಕೆ ಎರಡು ವಿಧವಾಗಿ ಉಂಟಾಗುತ್ತದೆ: ೧) ಬಾಯೊಳಗಿನ ಅಂಗಳ (ಪ್ಯಾಲೆಟ್) ನಿಂದ ೨) ಉಸಿರೆಳೆದುಕೊಳ್ಳುವಾಗ ಕಿರು ನಾಲಿಗೆಯ ಬಳಿ ಇರುವ ತೆಳು ಚರ್ಮದ ಕಂಪನದಿಂದ ಹಂದಿ ಮಾಡುವಂತಹ ಶಬ್ದ ಉಂಟಾಗುತ್ತದೆ. ನಾಲಿಗೆಯ ಹಿಂದಿನ ಸಂಕುಚಿತ ಜಾಗದಲ್ಲಿ ಗಾಳಿ ಚಲಿಸುವಾಗ ಶಬ್ದವಾಗುತ್ತದೆ. ಜೊತೆಗೆ ಶ್ವಾಸಕೋಶಕ್ಕೆ ತಲುಪಬೇಕಾದ ಗಾಳಿ (ಆಮ್ಲಜನಕ) ಪ್ರಮಾಣವೂ ಕಡಿಮೆಯಾಗುತ್ತದೆ. ವಿಮಾನಗಳಲ್ಲಿ ಪ್ರಯಾಣಿಸುವಾಗ, ಸಾಮೂಹಿಕವಾಗಿ ದೊಡ್ಡ ಹಾಲುಗಳಲ್ಲಿ ಅನೇಕರು ಮಲಗುವಾಗ, ಇತರರಿಗೆ ಕಿರಿ ಕಿರಿ ಉಂಟಾಗುತ್ತದೆ. ಇದರಿಂದ ವಿದೇಶಗಳಲ್ಲಿ ವಿವಾಹ ವಿಚ್ಛೇದನಗಳೂ ನಡೆದಿವೆ!

ಗೊರಕೆಯ ಪರಿಸ್ಥಿತಿ ವಿಷಮವಾಗುವುದು :

ಮೇಲ್ಮುಖವಾಗಿ ಮಲಗಿದರೆ

ಮದ್ಯಪಾನ, ತಂಬಾಕು, ನಿದ್ರೆ ಮಾತ್ರೆ, ಮಾದಕ ವಸ್ತು ಸೇವಿಸಿದರೆ, ರಾತ್ರಿ ಹೊತ್ತು ಭಾರೀ ಊಟ ಮಾಡಿದರೆ ತುಂಬಾ ಬಸವಳಿದಿದ್ದರೆ ದೇಹದ ಭಾರ ಹೆಚ್ಚಿದ್ದರೆ

ಹೋಗುವಷ್ಟು ಸಮಯ, ವಾಹನದಟ್ಟಣೆ, ವಾಯು, ಶಬ್ದ ಪ್ರದೋಷಗಳು ತಪ್ಪುತ್ತವೆ.

ಸತತವಾಗಿ ಉಂಟಾಗುವ ಶಬ್ದಗಳಿಗೆ ಅಷ್ಟೇ ತರಂಗಾಂತರಗಳ 'ಪ್ರತಿ ಶಬ್ದ' ಪ್ರಯೋಗಿಸಿ ಆ ಗದ್ದಲಗಳನ್ನು ಪರಸ್ಪರ ಕ್ಯಾನ್ಸೆಲ್ ಆಗುವಂತೆ ಮಾಡಬಹುದಾದರೂ, ಈ (Active Control) ವಿಧಾನ ಬಹಳ ದುಬಾರಿ ಹಾಗೂ ಇನ್ನೂ ಪ್ರಯೋಗಾಲಯಗಳಲ್ಲಿ ಮಾತ್ರ ಯಶಸ್ವಿಯಾಗುತ್ತಿದೆ. ನಿಮ್ಮ ಮನೆಗಳನ್ನು ಶಬ್ದ ನಿರೋಧಕಗಳನ್ನು (Acoustical tiles) ಬಳಸಿ ಕಟ್ಟಿ ಎಂದು ಹೇಳಿದರೆ ಅದು ತಪ್ಪಾಗುತ್ತದೆ. ಏಕೆಂದರೆ ಗದ್ದಲ ಮಾಡುವವರನ್ನು ತಮ್ಮ ಪಾಡಿಗೆ ತಾವು ಗದ್ದಲ ಮಾಡಲು ಬಿಟ್ಟುಬಿಡಿ ಎಂದು ಹೇಳಿದಂತಾಗುತ್ತದೆ.

ಹೀಗಾಗಿ ನೀವೇನು ಮಾಡಬೇಕು ? ನಿಮ್ಮ ಹಕ್ಕುಗಳ ಬಗ್ಗೆ ಹಾಗೂ ನೆರೆಹೊರೆಯವರ ಕರ್ತವ್ಯಗಳ ಬಗ್ಗೆ ತಿಳಿದಿರಿ. ವಿನಯದಿಂದ ಎಷ್ಟೋ ವಿಜಯಗಳನ್ನು ಸಾಧಿಸಬಹುದು. ನಿಮ್ಮ ನೆರೆಯವರ ಬಳಿ ಅವರ ಮನೆಯ ಟೇಪ್‌ರೆಕಾರ್ಡರ್ ಸದ್ದಿನಿಂದ ತೊಂದರೆ ಆಗುತ್ತಿದೆ ಎಂದು ಅವರಿಗೆ ತಿಳಿಸಬೇಕು. ಎಷ್ಟೋ ಬಾರಿ ತಮ್ಮಿಂದ ತೊಂದರೆಯಾಗುತ್ತಿದೆ ಎಂಬ ಅರಿವು ಹೀಗೆ ತಿಳಿಸಿದಾಗ ಮಾತ್ರ ಆಗುತ್ತದೆ. ಅಂತಹವರು ತಕ್ಷಣ ಸದ್ದು ಕಡಿಮೆ ಮಾಡುತ್ತಾರೆ (ಕ್ಷಮೆ ಯಾಚಿಸಲೂಬಹುದು!)

ನೆನಪಿರಲಿ, ಕಟ್ಟಡದ ಕೆಲಸಗಳನ್ನು ಬೆಳಿಗ್ಗೆ ೭ ರಿಂದ ಸಂಜೆ ೬ರ ಒಳಗೆ ಮಾತ್ರ ನಡೆಸಬೇಕು. ಬಾರ್, ಹೋಟೆಲ್, ಕ್ಲಬ್‌ಗಳಿಂದ ಹೊಮ್ಮುವ ಶಬ್ದ, ನೈಟ್ ಕ್ಲಬ್, ಕ್ಯಾಸೆಟ್ ಅಂಗಡಿ, ಅನಧಿಕೃತವಾಗಿ ಬಳಸುವ ಹೊರಗಿನ ಧ್ವನಿ ವರ್ಧಕಗಳು, ಇವುಗಳನ್ನು ರಾತ್ರಿ ೮ರ ನಂತರ ಮತ್ತು ಬೆಳಿಗ್ಗೆ ೮ರವರೆಗೂ ಬಳಸಕೂಡದು. ಹಗಲು ಹೊತ್ತು ಇದನ್ನು ಬಳಸುವಾಗಲೂ ಸಂಬಂಧಪಟ್ಟ ಪೊಲೀಸ್ ಠಾಣೆಯಿಂದ ಅನುಮತಿ ಪಡೆದು ನಿಯಂತ್ರಿತ ಧ್ವನಿಯಲ್ಲಿ ಬಳಸಬೇಕು. ನಮ್ಮ ನಗರವನ್ನು ವಾಸಯೋಗ್ಯ ತಾಣವಾಗಿಸುವುದು ನಮ್ಮ ಕೈಗಳಲ್ಲಿದೆ.

**ಶಬ್ದ ವಿರೋಧಿ ಸಂಘ :** ಯಾವುದೋ ಶಬ್ದ ಮೂಲದಿಂದ ನಿಮಗೆ ಹೇಗೆ ತೊಂದರೆ ಆಗುತ್ತಿದೆಯೋ ಹಾಗೆಯೇ ಅದೇ ಶಬ್ದ ಮೂಲದಿಂದ ಬೇರೆಯವರಿಗೂ ತೊಂದರೆ ಆಗುತ್ತಿರಬಹುದು. ಅವರೊಂದಿಗೆ ಮಾತನಾಡಿ ಒಂದು ಸಣ್ಣ ಸಭೆ ಮಾಡಿ. ನಿಮ್ಮ ಸಂಘಕ್ಕೆ ಒಂದು ಹೆಸರನ್ನು ಕೊಡಿ. ಎಷ್ಟು ಹೆಚ್ಚು ಸಹಿಗಳನ್ನು ಸಂಗ್ರಹಿಸಿದರೂ ನಿಮ್ಮ ದೂರು ಪತ್ರಕ್ಕೆ ಅಷ್ಟು ಮಾನ್ಯತೆ. ಪತ್ರದಲ್ಲಿ 'ನಾನು' ಎಂದು ಎಂದಿಗೂ ಬಳಸಬೇಡಿ. ಈಗಾಗಲೇ ಅಸ್ತಿತ್ವದಲ್ಲಿ ಇರುವ ಸಂಘ ಸಂಸ್ಥೆಗಳ ಅಂಗ ಸಂಸ್ಥೆಗಳಾಗಿ ದುಡಿದರೆ ನಿಮ್ಮ ಕೆಲಸ ಹೆಚ್ಚು ಸುಲಭವಾಗುತ್ತದೆ.

ಪದೇ ಪದೇ ಗದ್ದಲವುಂಟಾದರೆ, ಒಂದು ಪುಸ್ತಕದಲ್ಲಿ ಅದರ ಕಾಲಾವಧಿ, ದಿನಾಂಕ, ಸಮಯ, ಹಾಗೂ ಕಾರಣವನ್ನು ನಿಖರವಾಗಿ ದಾಖಲು ಮಾಡಿಕೊಳ್ಳಿ. ಅಗ್ಗವಾಗಿ ಸಿಗುವ ಡೆಸಿಬಲ್ ಮೀಟರ್ ಕೊಂಡು ಗದ್ದಲದ ತೀವ್ರತೆಯನ್ನು ದಾಖಲು ಮಾಡಿಕೊಳ್ಳಿ. ಈ ಸಮಸ್ಯೆ ಬಗೆಹರಿಸಲು ಕಾನೂನು ನಿಯಮ ಇದೆಯೇ ವಿಚಾರಿಸಿ. ಪತ್ರಿಕೆ ಮತ್ತಿತರ ಮಾಧ್ಯಮ ಬಳಸಿ ನಿಮ್ಮ ಸಮಸ್ಯೆಗಳಿಗೆ ಪ್ರಚಾರ ನೀಡಿ. ಸಣ್ಣ ಪ್ರಮಾಣದ ಸ್ಥಳೀಯ ಪತ್ರಿಕೆಗಳನ್ನೂ ಕಡೆಗಣಿಸದಿರಿ.

ರಾತ್ರಿ ೮ ರಿಂದ ಬೆಳಿಗ್ಗೆ ೮ರವರೆಗೆ ರಸ್ತೆಯಲ್ಲಿ ಧ್ವನಿ ವರ್ಧಕಗಳನ್ನು ಬಳಸುವುದು ನಿಷೇಧಿಸಲಾಗಿದೆ. (ಪೊಲೀಸ್, ಆ್ಯಂಬುಲೆನ್ಸ್ ಮತ್ತು ಅಗ್ನಿ ಶಾಮಕಕ್ಕೆ ರಿಯಾಯಿತಿ ಇದೆ). ಇದಲ್ಲದೆ ಉಳಿದ ಸಮಯದಲ್ಲಿ ಅನುಮತಿ ಪಡೆದು ಮಾತ್ರ ಧ್ವನಿ ವರ್ಧಕಗಳನ್ನು ಬಳಸಬಹುದು. ಜಾಹಿರಾತಿಗೆ, ಚುನಾವಣಾ ಪ್ರಚಾರಕ್ಕೆ ಅನುಮತಿ ಇಲ್ಲ.

**ಕಾನೂನು :** ವಾಕ್ ಸ್ವಾತಂತ್ರ್ಯ ನಮ್ಮ ದೇಶದ ಸಂವಿಧಾನ ನಮಗೆ ನೀಡಿರುವ ಮೂಲಭೂತ ಹಕ್ಕು ನಿಜ. ಧ್ವನಿ ವರ್ಧಕಗಳನ್ನು ಬಳಸುವುದನ್ನು ನಿಷೇಧಿಸಿದರೆ ವಾಕ್ ಸ್ವಾತಂತ್ರ್ಯವನ್ನು ಕಿತ್ತುಕೊಂಡಂತೆ ಆಗಬಹುದು. ಆದ್ದರಿಂದ ಮೈಕ್ ಮತ್ತು ಲೌಡ್ ಸ್ಪೀಕರ್ ಬಳಕೆ ನಿಷೇಧಿಸುವುದು ಅಸಾಧ್ಯ. Art. 19(2) (Ananthaprabhu Vs DC 1974 KLT 291). ಧ್ವನಿ ವರ್ಧಕ ಬಳಸುವುದು ಮೂಲಭೂತ ಹಕ್ಕಲ್ಲ. ಆದರೆ ಶಬ್ದ ಮಾಲಿನ್ಯ ಮಾಡದಿರುವುದು ಮೂಲಭೂತ ಕರ್ತವ್ಯ. ಸಾಮಾಜಿಕ ಸುವ್ಯವಸ್ಥೆ, ಸಭ್ಯತೆ, ನೈತಿಕತೆಯನ್ನು ಕಾಪಾಡುವ ಸಲುವಾಗಿ ಒಬ್ಬನ ಸ್ವಾತಂತ್ರ್ಯವನ್ನು ಮೊಟಕುಗೊಳಿಸಲು ಸಾಧ್ಯವಿದೆ.

**ಭಾರತ ಸಂವಿಧಾನದ** Art. 19 ರಂತೆ ಧ್ವನಿವರ್ಧಕ ಬಳಸುವ ಹಕ್ಕು ಮೂಲಭೂತ ಹಕ್ಕಲ್ಲ. 'ವಾಕ್' ಸ್ವಾತಂತ್ರ್ಯ ಇದ್ದ ಮೇಲೆ 'ಮೌನ'ಕ್ಕೂ ಸ್ವಾತಂತ್ರ್ಯ ಇರಬೇಕು. ಅಂದರೆ, ಒಬ್ಬರು ಸೃಷ್ಟಿಸುವ ಗದ್ದಲವನ್ನು ಮತ್ತೊಬ್ಬರಿಗೆ ಬಲವಂತವಾಗಿ ಉಣಬಡಿಸುವುದು ಅಪರಾಧ. ಯಾವುದೇ ಸ್ವಾತಂತ್ರ್ಯವು ಶಾಂತಿ ಮತ್ತು ವ್ಯವಸ್ಥೆಗೆ ಅಧೀನವಾಗಿಯೇ ಇರಬೇಕು.

ಗಟ್ಟಿಯಾದ ಸದ್ದಿಗೆ ಕಿವಿಗೊಡುವುದು ಅಪಾಯಕಾರಿ ಎಂಬುದು ಸರ್ವ ವಿದಿತ. ಅದರಿಂದ, ದೈಹಿಕ, ರಾಸಾಯನಿಕ ಮಾರ್ಪಾಡುಗಳು, ರಕ್ತದ ಒತ್ತಡ, ಕೊಲೆಸ್ಟ್ರಾಲ್, ಬಿಳಿ ರಕ್ತ ಕಣಗಳು, ಲಿಂಫೋಸೈಟ್‌ಗಳ ಏರುಪೇರು ಉಂಟಾಗುತ್ತದೆ ಎಂದು ವೈಜ್ಞಾನಿಕವಾಗಿ ಸಾಬೀತಾಗಿದೆ. ದುರಂತವೆಂದರೆ, ನಮ್ಮ ದೇಶದ ಸಮಸ್ಯೆಗಳು ಪಾಶ್ಚಾತ್ಯ ದೇಶಗಳ ಸಮಸ್ಯೆಗಳಷ್ಟು ನೇರ, ಸರಳವಾದುವಲ್ಲ. ಇಲ್ಲಿ ಯಾವುದೇ ಕ್ರಮ, ಕಾಯಿದೆ ಅನುಷ್ಠಾನಕ್ಕೆ ತರಬೇಕಾದರೂ ಜಾತಿ, ಕೋಮು, ಧರ್ಮ, ರಾಜಕೀಯಗಳ ಕ್ಷುದ್ರ ಆಯಾಮಗಳು ಕಲೆಹಾಕಿ ಸಮಸ್ಯೆ ಜಟಿಲವಾಗಿ ಬಗೆಹರಿಯದ ಕಗ್ಗಂಟಾಗೇ ಉಳಿದುಬಿಡುತ್ತವೆ.

ಶಬ್ದ ಮಾಲಿನ್ಯ ಕಾಯಿದೆ ಆರ್ಟಿಕಲ್ ೧೯,೧೯(೧)(ಎ) ಮತ್ತು (೨೫) ಧ್ವನಿ ವರ್ಧಕ ಬಳಸುವ ನಿಷೇಧ ಮಸೀದಿಯಲ್ಲಿ ಆಝಾನ್ ಕೂಗಿಗೆ ಅನ್ವಯವಾಗುವುದಿಲ್ಲ. ಇಮಾಂ ತನ್ನ ಧ್ವನಿಯಲ್ಲೇ ಕೂಗಬೇಕು (ಟೇಪ್ ರಿಕಾರ್ಡರ್, ಬಳಸಬಾರದು) - ಇದು ಪ್ರಚಾರವಲ್ಲ. ತಮ್ಮ ಧರ್ಮದ ಪ್ರಾರ್ಥನಾ ಸಮಯವಾಗಿದೆ ಬನ್ನಿ ಎಂದು ಕರೆಯುವ ಪರಿ ಎಂದು ಸಮರ್ಥಿಸಲಾಗಿದೆ. ಧ್ವನಿ ವರ್ಧಕಗಳನ್ನು ಕಂಡುಹಿಡಿಯುವ ಮುನ್ನ ಧರ್ಮ ಏನನ್ನು ಬಳಸುತ್ತಿತ್ತು ? ಇದು ದೇವಸ್ಥಾನಗಳು, ಚರ್ಚುಗಳು ಉಂಟುಮಾಡುವ ಶಬ್ದಕ್ಕೂ ಅನ್ವಯಿಸುತ್ತದೆ.

ಒಂದು ಸ್ಥಳದ ಸಹಜ, ಸಾಧಾರಣ ಸದ್ದಿನ ಮಟ್ಟಕ್ಕಿಂತ ೧೦ ಡೆಸಿಬಲ್‌ಗಳಷ್ಟು ಪ್ರಮಾಣ ಮೀರಿದರೆ, ದೂರು ಸಲ್ಲಿಸಬಹುದು. ಹೀಗೆ, ಪೊಲೀಸ್ ಠಾಣೆಗೆ ಅಥವಾ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಕೊಟ್ಟ ದೂರಿನಲ್ಲಿ ಹುರುಳಿದ್ದರೆ, ಸುತ್ತಮುತ್ತಲಿನ ನಿವಾಸಿಗಳಿಗೆ ಕಿರಿಕಿರಿಯುಂಟಾಗುತ್ತಿದೆ ಎಂದು ಅನಿಸಿದರೆ, ಆ ಸದ್ದು ಮಾಡುವ ಯಂತ್ರವನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಬಹುದು. ರಾತ್ರಿ ೯ ರಿಂದ ಬೆಳಿಗ್ಗೆ ೭ ರವರೆಗೆ ಮೌನವನ್ನು ಕಾಪಾಡಬೇಕು. ಆಸ್ಪತ್ರೆ, ವಿದ್ಯಾಲಯ, ಕೋರ್ಟುಗಳ ಸುತ್ತಮುತ್ತ ನೂರು ಮೀಟರ್‌ಗಳ ವ್ಯಾಪ್ತಿಯನ್ನು ಸೈಲೆಂಟ್ ಜೋನ್ ಎಂದು ಪರಿಗಣಿಸಲಾಗಿದೆ.

೧೯೯೯ರಲ್ಲಿ ಶಬ್ದಮಾಲಿನ್ಯ ತಡೆಗೆ ನಿಯಮಗಳ ಕರಡು ಮಸೂದೆಯನ್ನು ಭಾರತ ಸರ್ಕಾರದ ನೋಟಿಫಿಕೇಷನ್‌ನಲ್ಲಿ ಪ್ರಕಟಿಸಿ, ಸಾರ್ವಜನಿಕರಿಂದ ಸಲಹೆ ಸೂಚನೆಗಳನ್ನು ಪಡೆದು, ಪರಿಸರ ಸಂರಕ್ಷಣಾ ಕಾಯಿದೆ ೧೯೮೬ರ ಸೆಕ್ಷನ್ ೬ ಮತ್ತು ೨೫ರ ಸಬ್ ಸೆಕ್ಷನ್‌ಗಳಾಗಿ ಮಾಡಲಾಯಿತು. ಇದರಲ್ಲಿ ಇರುವ ಕಾನೂನುಗಳಲ್ಲಿ ಕೊರತೆ ಇದ್ದು, ಇನ್ನೂ ಹೆಚ್ಚಿನ ನಿಬಂಧನೆಗಳನ್ನೂ, ಉಗ್ರ ಶಿಕ್ಷೆಯನ್ನೂ ರೂಪಿಸಬೇಕಿತ್ತು. ಅದರಲ್ಲಿ ನಮೂದಿಸಿರುವ ನಿಗದಿತ ambient air quality standard ಅನ್ನು ಅಳೆಯುವುದಾಗಲೀ, ಅಥವಾ ಒಂದು ನಿರ್ದಿಷ್ಟ ಪ್ರಸಂಗದಲ್ಲಿ ಆ ಗುಣಮಟ್ಟವನ್ನು ಮೀರಿದೆ ಎಂದು ಸಾಬೀತುಪಡಿಸುವುದಾಗಲಿ ಬಹಳ ಕಷ್ಟ.

ಧ್ವನಿ ವರ್ಧಕಗಳನ್ನು ಲಿಖಿತ ಅನುಮತಿ ಇಲ್ಲದೆ ಬಳಸುವಂತಿಲ್ಲ ಎಂದಿದೆ. ಇದರ ಜೊತೆಗೆ ಪಬ್ಲಿಕ್ ಅಡ್ರೆಸ್ ಸಿಸ್ಟಂಗಳನ್ನು ಬಾಡಿಗೆಗೆ ಕೊಡುವ ಅಂಗಡಿಯವರಿಗೆ ಖಡಾ ಖಂಡಿತವಾಗಿ ಪೊಲೀಸ್ ಅನುಮತಿ ಪಡೆದಿರುವ ಪತ್ರ ತೋರಿಸಿದರೆ ಮಾತ್ರ ಬಾಡಿಗೆಗೆ ಕೊಡಬೇಕು ಎಂಬ ನಿಬಂಧನೆ ಹಾಕಬೇಕು. ಗಣೇಶ ಉತ್ಸವ, ರಾಜ್ಯೋತ್ಸವ, ಅಣ್ಣಮ್ಮ, ಮಾರಮ್ಮ, ಅಯ್ಯಪ್ಪ, ರಾತ್ರಿ ಇಡೀ ಶನಿ ಕಾಟ, ಇದೆಲ್ಲವೂ ಅಲ್ಲದೆ ರಸ ಸಂಜೆಗಳು, ರಾಷ್ಟ್ರೀಯ ಹಬ್ಬಗಳು, ಇತರ ಕೋಮಿನವರ ವಿಶೇಷ ಹಬ್ಬಗಳು ವರ್ಷ ಪೂರ್ತಿ ಬಿಡುವಿಲ್ಲದೆ ಒಂದರ ಹಿಂದೆ ಒಂದು ಕೆಲವು ಬಾರಿ ಜೊತೆ ಜೊತೆಯಾಗಿ ಬಂದು ಹಿಂಸೆ ಕೊಡುತ್ತವೆ. ಇವರೆಲ್ಲರಿಗೂ ಸಮಾರಂಭ ತಮ್ಮ ಮಟ್ಟಿಗೆ ಮಾಡಿಕೊಳ್ಳುವ ಉದ್ದೇಶವಿಲ್ಲ. ಸಾರ್ವಜನಿಕರ ಹತ್ತಿರ ಚಂದಾ ಎತ್ತಿ ಇಂತಹ ಸಮಾರಂಭಗಳನ್ನು ನಡೆಸುವುದರಿಂದ ಕೃತಜ್ಞತೆ ತೋರಿಸಲು ಎಲ್ಲರಿಗೂ ಕೇಳಿಸುವಂತೆ ಧ್ವನಿ ವರ್ಧಕಗಳನ್ನು ಹಾಕುತ್ತಾರೆ. ಸಿನಿಮಾ ಹಾಡುಗಳಿಲ್ಲದಿದ್ದರೆ ದೇವರು ಸುಪ್ರಸನ್ನೋ ಭವ, ವರದೋ ಭವ ಆಗುವುದು ಹೇಗೆ? ಎಷ್ಟು ಜೋರಾಗಿ ಹಾಡುಗಳನ್ನು ಹಾಕಿದರೆ ಅಷ್ಟು ಗ್ರ್ಯಾಂಡಾಗಿ ಸಮಾರಂಭ ನಡೆಸುತ್ತಿದ್ದಾರೆ ಎಂಬ ಭ್ರಮೆ ಇರುತ್ತದೆ.

ಯಾರಿಗಾದರೂ ಧ್ವನಿ ತಗ್ಗಿಸಲು ಹೇಳಿದರೆ, ನಾವು ಜಾತಿವಾದಿಗಳು, ಮತಾಂಧರು, ಅಲ್ಪ ಸಂಖ್ಯಾತರನ್ನೂ, ದಲಿತರನ್ನೂ ಶೋಷಿಸುತ್ತಿರುವ ದೇಸೀ ರಾಕ್ಷಸರಾಗಿ ಕಾಣುತ್ತೇವೆ. ಪರಿಸ್ಥಿತಿ ಹೀಗಿರುವಾಗ ಅಮಾಯಕ ಜನರ ಕಿವಿ ತಮಟೆ, ಆರೋಗ್ಯವನ್ನು ಉಳಿಸಲು ನಿಷ್ಪಕ್ಷಪಾತವಾದ ವೈಜ್ಞಾನಿಕವಾದ ಸಮಾನ ಕಾನೂನು ಹಾಗೂ ಅದನ್ನು ಕಟ್ಟುನಿಟ್ಟಾಗಿ ಪಾಲಿಸುವ ಜವಾಬ್ದಾರಿಯುತ ಅಧಿಕಾರಿಗಳು ಮಾತ್ರ ನೆರವಾಗಬಲ್ಲರು.

ಆಗಂತುಕರು ನಮ್ಮ ಮನೆಯ ಕಿಟಕಿಯ ಬಳಿ ಬಂದು ಇಣುಕಿನೋಡುತ್ತಿದ್ದರೆ ನಮ್ಮ ಸ್ವಾತಂತ್ರ್ಯಕ್ಕೆ ಅಡ್ಡಿಯುಂಟಾಗುತ್ತಿದೆ ಎಂದು ನಮಗೆ ಕಿರಿಕಿರಿಯಾಗುತ್ತದೆ. ನಿಮ್ಮ ಖಾಸಗಿಯ ಸ್ವಾತಂತ್ರ್ಯ ನಿಮಗಿದೆ. ಇದನ್ನು Right to Visual Privacy ಎನ್ನುತ್ತಾರೆ. ಹಾಗೆಯೇ ನಿಮ್ಮ ಮನೆಯ ಮೌನ, ಶಾಂತಿ ಉಳಿಸಿಕೊಳ್ಳುವ ಹಕ್ಕೂ ನಿಮಗಿದೆ. ಇದನ್ನು Right to Acoustic Privacy ಎನ್ನುತ್ತಾರೆ.

'ಜೀವನದ ಮಟ್ಟ' ಉತ್ತಮಗೊಳ್ಳುವುದು ಎಂದರೆ ಆರ್ಥಿಕ ಅಭಿವೃದ್ಧಿ, ಉತ್ತಮ ಗುಣ ಮಟ್ಟದ ಆಹಾರ, ಆಧುನಿಕ ಯಂತ್ರೋಪಕರಣಗಳು, ಹಾಗೂ ವಾಹನಗಳು... ಇವಿಷ್ಟೇ ಅಲ್ಲ, ಉತ್ತಮವಾದ ಮಾಲಿನ್ಯ ರಹಿತ ಪರಿಸರದಲ್ಲಿ ಬಾಳುವುದೂ ಸಹ ಒಂದು ಪ್ರಮುಖ ಅಂಶ.

**ಡಾ|| ಉದಯ ರವಿ, ಎಸ್. ವಿ.**
ಶ್ರೀರಕ್ಷಾ, ೫೧೨, ನಾಲ್ಕನೆಯ ತಿರುವು, ಒಂಭತ್ತನೆಯ ಬ್ಲಾಕ್, ನಾಗರ ಬಾವಿ
ಎರಡನೆಯ ಹಂತ, ಬೆಂಗಳೂರು-೫೬೦ ೦೭೨

ತಿಳಿವು




**ಜೀ**ವನವೆಂಬ ಪಯಣದಲ್ಲಿ ಏಕಿಷ್ಟು ಅವಸರ, ಏಕಿಷ್ಟು ಧಾವಂತ ? ದಿನ ಬೆಳಗಾದರೆ ಮನೆ, ಮಂದಿರ, ಆಫೀಸು, ಕಚೇರಿ, ಬಸ್‌ಸ್ಟ್ಯಾಂಡ್, ರೈಲ್ವೆ ಸ್ಟೇಷನ್ ಎಲ್ಲಿ ನೋಡಿದರಲ್ಲಿ ಅವಸರ ಅವಸರದಿಂದ ಓಡುವ ಜನ. ಗಡಿಬಿಡಿಯಲ್ಲಿ ಮುನ್ನುಗ್ಗುವ ಜನ. ಕರೆದರೂ ಕೇಳದಂತೆ ಓಡುವ ಜನ. ಕರ್ತವ್ಯಕ್ಕೆ ಲೋಪ ಆಗಬಾರದು ಎಂಬ ಉದ್ದೇಶದಿಂದಲೋ ಸಮಯ ನಷ್ಟ ಆಗಬಾರದು ಎಂಬ ಭಾವನೆಯಿಂದಲೋ, ಮೇಲಧಿಕಾರಿಗಳಿಂದ ಕಿರಿಕಿರಿ ಆಗಬಾರದು ಎಂಬ ವಿಚಾರದಿಂದಲೋ ಬೇಗ ಬೇಗ ಮನೆ ಅಥವಾ ಆಫೀಸು ತಲುಪಿ ಕೆಲಸದಲ್ಲಿ ತೊಡಗಬಹುದು ಎಂಬ ಧೋರಣೆಯಿಂದ ಓಡುತ್ತಿರಬಹುದೆ ? ಎಲ್ಲವೂ ಯಾಂತ್ರಿಕ ಬದುಕಿನ ಪವಾಡ. 'ಓಟವೇ ಗುರಿ, ಗಡಿಯಾರವೇ ದೇವರು.' ಚಿಂತನೆಗೆ ಅವಕಾಶವಿಲ್ಲ (ಇದ್ದಲ್ಲೇ ಇರಲೂ ಬೇಗ ಬೇಗನೆ ಓಡಬೇಕು). ಎಲ್ಲವೂ ಬೇಗ ಬೇಗ ಆಗಬೇಕು. ಕ್ರಮ ತೆಗೆದುಕೊಳ್ಳುವುದು, ಕಾನೂನು ಜಾರಿ ಮಾಡುವುದು, ವಾಹನ ಚಾಲನೆ, ಕೃತಿರಚನೆ ಮಾಡಿ ಪ್ರಕಟಣೆಗಾಗಿ ಕಾಯುವುದು, ಪ್ರಬಂಧ ಬರೆದು ಮುಖ್ಯವಾದ ವಿಷಯವನ್ನು ಮರೆತು ವಿಮರ್ಶಕರ ಟೀಕೆಗಳಿಗೆ ತುತ್ತಾಗುವುದು, ಹೀಗೆ. ಎಲ್ಲಾ ಅವಸರದಲ್ಲೇ. ಐದು ವರುಷ ತುಂಬುವ ಮೊದಲೇ ಮಕ್ಕಳನ್ನು ಮುಂದಿನ ತರಗತಿಗೆ ಸೇರಿಸುವ ತವಕ. ವಿರಾಮದ ವೇಳೆಯಲ್ಲಿ ರೇಡಿಯೋ ಕೊಂಚ ತಿರುಗಿಸಿ ಸಂಗೀತ ಕೇಳಲು ಹೊರಡುವುದು. ಒಂದೆರಡು ನಿಮಿಷ ಬಿಟ್ಟು ಅಲ್ಲಿಗೇ ರೇಡಿಯೋ ನಿಲ್ಲಿಸಿ ವಾಚನಾಲಯದಿಂದ ತಂದ ಪುಸ್ತಕವನ್ನೋ ವರ್ತಮಾನ ಪತ್ರಿಕೆಯನ್ನೋ ಪೂರ್ಣ ಓದಲು ಆಗಲಿಲ್ಲ ಎಂದು ಕೊರಗುವುದು. ಓದುವ ಶಾಸ್ತ್ರ ಮಾಡಿ ಬದಿಗೆ ಇರಿಸುವುದು. ಛೇ, ಬೋರ್, ಬೇಸರ, ಆಯಾಸ ಎನ್ನುವ ಸ್ವಗತದ ಮಾತುಗಳು. ಆದರೂ ಬೇಗ ಬೇಗ ಎನ್ನುವ ಪಲ್ಲವಿ ಅನು ಪಲ್ಲವಿಯ ಹಾಡು. ಏಕಕಾಲದಲ್ಲಿ ದಶದಿಕ್ಕುಗಳ ಕಡೆಗೆ ಓಡುವಂತಿದೆ ಇಂತಹವರ ಅವಸ್ಥೆ.

ವಿದ್ಯಾರ್ಥಿಗಳ ಅವಸರ ಇನ್ನೊಂದು ತರಹ. ಪರೀಕ್ಷೆ ಬಂತೆಂದರೆ ಸರಿ ಆತುರ, ಆವೇಶ, ಗೊಂದಲ. ಎಲ್ಲ ವಿಷಯವನ್ನು ಅರ್ಧಂಬರ್ಧ ಓದಿ ಯಾವುದರಲ್ಲೂ ಸಾಧನೆ ಮಾಡಲಾಗದೆ ದುಗುಡ ಪಡುವ ಈ ಸಮುದಾಯಕ್ಕೆ ಕವಿ ಎಸ್.ವಿ.ಪಿ. ಅವರು ತಮ್ಮ ಕವನದ ಈ ಸಾಲುಗಳ ಮೂಲಕ ಹೊಸ ದಾರಿಯನ್ನು ತೋರಿಸಿದ್ದಾರೆ:

'ಒಂದೆಡೆಯೊಳು ತೋಡು ಹತ್ತಡಿಯಷ್ಟನ್ನು
ಚಿಮ್ಮುವುದು ಉದಕವು ನೋಡ'

ಎನ್ನುವ ಈ ಸಾಂಗತ್ಯದಲ್ಲಿ ಯಾವುದೇ ಕೆಲಸವಾಗಲಿ ಅದನ್ನು ಪೂರ್ಣಗೊಳಿಸಬೇಕೆಂಬ ಆಶಯ ಇದೆ.

ಹಾಗೆಯೆ ತರುಣ ಜನಾಂಗದ ಕಡೆಗೆ ಗಮನ ಹರಿಸಿದರೆ ಅವರ ಓಟ ಇನ್ನೊಂದು ರೀತಿ. ಗುರಿಯೆತ್ತ ನೆಲೆಯೆತ್ತ ಎಂಬ ಅರಿವಿಲ್ಲದೆ ತಾರುಣ್ಯದ ಉತ್ಸಾಹದಲ್ಲಿ ಓಟವೇ ಅವರ ಗುರಿ. ಬದುಕಿನ ಅವಸರದ ಪಯಣದಲ್ಲಿ ಒಂದಿಷ್ಟು ನಿಂತು ಕ್ರಮಿಸುವ ತಾಳ್ಮೆಯಿಲ್ಲ. ಬದುಕನ್ನು ವಿಮರ್ಶಿಸಿ ಮುನ್ನಡೆಯುವ ಪ್ರಜ್ಞೆ ಇಲ್ಲ. "ಪಯಣದಲ್ಲಿ ಆಗಾಗ ನಿಂತು ನಡೆವ ಜನರೆಲ್ಲ ನಿರ್ಗತಿಕರಲ್ಲ. ಓ ತರುಣ ಮಿತ್ರ ಒಲಿದಿತ್ತ ನೋಡು ಚಲಿಸುವುದೆಲ್ಲ ಭೂಮಿಯೇ ಸುಸ್ಥಿತಿಯಲ್ಲಿ ಉರುಳುತ್ತಿದೆ." ಅವಸರಪಡದೆ ಭೂಮಿಯಂತೆ ಕರ್ತವ್ಯ ನಿರ್ವಹಿಸಿ ತಾಳ್ಮೆಯಿಂದ ನಿಧಾನವಾಗಿ ಒಂದೇ ಗತಿಯಲ್ಲಿ ಸಾಗಿದರೆ ಗುರಿ ಮುಟ್ಟಬಹುದೆಂಬ ಮುನ್ಸೂಚನೆ ಈ ಸಾಲಿನಲ್ಲಿದೆ. ಎಲ್ಲದಕ್ಕೂ ಮನಸ್ಸೇ ಕಾರಣವಾದ್ದರಿಂದ ಅದನ್ನು ಹತೋಟಿಯಲ್ಲಿಟ್ಟುಕೊಂಡು, ಆತುರ, ಗೊಂದಲ, ಉದ್ವೇಗ, ಗಲಿಬಿಲಿಗಳಿಗೆ ಎಡೆಗೊಡದೆ, ಇಡೀ ಶರೀರವನ್ನು ದಣಿಸದೆ ಅವಸರಕ್ಕೆ ವಿದಾಯ ಹೇಳೋಣವೇ ?

**ನಾರಾಯಣ ಹೆಗಡೆ**
ಅಧ್ಯಾಪಕರು, ಶ್ರೀ ಸೀತಾರಾಘವ ಪ. ಪೂ. ವಿದ್ಯಾಲಯ, ಅಂಚೆ : ಪೆರ್ನಾಜೆ , ತಾ : ಪುತ್ತೂರು (ದ. ಕ.)

## ಸ್ವಧರ್ಮೇ ನಿಧನಮ್ ಶ್ರೇಯಃ

**ಭ**ಗವದ್ಗೀತೆಯ ಈ ನುಡಿ ಅಪವ್ಯಾಖ್ಯಾನಗಳಿಗೆ ಈಡಾಗಿರುವುದೇ ಹೆಚ್ಚು. "ಯಾವ ಧರ್ಮದಲ್ಲಿ ಹುಟ್ಟಿರುತ್ತಾರೋ ಆ ಧರ್ಮದಲ್ಲೇ ನಿಧನರಾಗುವುದು ಶ್ರೇಯಸ್ಕರ" ಎಂದು ಸಾರುತ್ತಾ ಮತೀಯವಾದಿಗಳು ತಮ್ಮ ಸ್ವಾರ್ಥದ ಬೇಳೆ ಬೇಯಿಸಿಕೊಳ್ಳುತ್ತಿರುವುದು ಅಪರಿಚಿತವೇನಲ್ಲ. 'ಸ್ವಧರ್ಮ'ವೆಂದರೆ ಯಾವುದೆಂಬುದನ್ನು ವಿಚಾರಶಕ್ತಿಯಿಂದ ಸುಸ್ಪಷ್ಟವಾಗಿ ಗ್ರಹಿಸಬೇಕಾಗುತ್ತದೆ. 'ಸ್ವಧರ್ಮ'ವನ್ನು ಜನ್ಮಾಧಾರಿತ ಜಾತಿ ಮತ್ತು ಧರ್ಮಗಳಂತೆ ವ್ಯಾಖ್ಯಾನಿಸುವುದು ಯಾರಿಗೆ ಲಾಭವೆಂದು ತಿಳಿದುಕೊಂಡರೆ ಅಪವ್ಯಾಖ್ಯಾನಗಳ ಸ್ವರೂಪವೇನೆಂಬುದು ಮನದಟ್ಟಾಗುತ್ತದೆ.

ಆಧುನಿಕ ಸಂದರ್ಭದಲ್ಲಿ ವಿಕೃತವಾದ ವ್ಯಾಖ್ಯಾನಗಳಿಗೆ ಒಳಗಾಗಿರುವ ಶಬ್ದಗಳಲ್ಲಿ 'ಧರ್ಮ'ವು ಅಗ್ರಗಣ್ಯವೆನಿಸುತ್ತದೆ. ಧಾರ್ಮಿಕ ಜನರ ಆಚಾರ ವಿಚಾರಗಳು ಮತ್ತು ಧರ್ಮಾಂಧರ ಕುರುಡುನಂಬಿಕೆಗಳು ವ್ಯವಸ್ಥಿತವಾದ ಸಂಘಟನೆಯಾಗಿ ವಿಸ್ತರಿಸಿಕೊಳ್ಳುತ್ತಿರುವುದರಿಂದ 'ಸ್ವಧರ್ಮ'ವೆಂದರೆ 'ಅವರವರ ಮತಧರ್ಮ' ಎಂಬರ್ಥವನ್ನು ಪಡೆದುಕೊಳ್ಳುವುದು ಅಚ್ಚರಿಯೇನಲ್ಲ! ಆದರೆ, 'ಧರ್ಮ'ದ ನಿಜಸ್ವರೂಪವೇನೆಂಬುದನ್ನು ಪದೇ ಪದೇ ಮನದಟ್ಟು ಮಾಡಿಕೊಳ್ಳಬೇಕಾದ ಅಗತ್ಯವಿದೆ. ಉದಾಹರಣೆಗೆ, ಗಾಂಧಿ ಹೇಳುವ 'ಹಿಂದ್'ಗೂ ಮತೀಯವಾದಿಗಳು ಹೇಳುವ 'ಹಿಂದೂ'ಗಳಿಗೂ ವ್ಯತ್ಯಾಸವಿದೆ. ಕ್ರಿಸ್ತ ಬೇರೆ - ಕ್ರೈಸ್ತರು ಬೇರೆ, ಪ್ರವಾದಿ ಮಹಮ್ಮದ್ ಬೇರೆ - ಮಹಮ್ಮದೀಯರು ಬೇರೆ, ಬುದ್ಧ ಬೇರೆ- ಬೌದ್ಧರು ಬೇರೆ, ಜಿನ ಬೇರೆ - ಜೈನರು ಬೇರೆ ಎಂಬುದನ್ನಿಲ್ಲಿ ಮರೆಯಬಾರದು. ನಾಯಕರಿಗೂ ಅನುಯಾಯಿಗಳಿಗೂ ಬಹುದೊಡ್ಡ ಅಂತರವಿದೆ. ಕ್ರಿಸ್ತ, ಮಹಮ್ಮದ್, ಬುದ್ಧ ಜಿನ ಇವರೆಲ್ಲರೂ ಬೆಂಕಿ ಇದ್ದಂತೆ ! ಆದರೆ ಕ್ರೈಸ್ತರು, ಮಹಮ್ಮದೀಯರು, ಬೌದ್ಧರು, ಜೈನರು ಬಿಸಿನೀರಿದ್ದಂತೆ. ನೀರು ಎಷ್ಟೇ ಬಿಸಿಯಾದರೂ ಬೆಂಕಿ ಎನಿಸಿಕೊಳ್ಳಲಾರದು. ಅಲ್ಲಮನ ಮಾತಿನಲ್ಲೆ ಹೇಳುವುದಾದರೆ, "ಬೆಂಕಿಯೊಳಗುಳ್ಳ ಗುಣ ಬಿಸಿನೀರಲುಂಟೆ?"

ಪ್ರಸ್ತುತ, 'ಮತಧರ್ಮ'ಗಳಿಗೆ ಸಂಬಂಧಪಟ್ಟಂತೆ ಮಾತ್ರವಲ್ಲದೆ 'ಧರ್ಮ'ಕ್ಕೆ ಪೂರ್ವಪದವಾಗಿ ಸೇರಿಕೊಳ್ಳುವ ವಿವಿಧ ಶಬ್ದ ಸಂಯೋಜನೆಗಳನ್ನು ಗಮನಿಸೋಣ: ಆತ್ಮಧರ್ಮ, ಮನೋಧರ್ಮ, ಕಾವ್ಯಧರ್ಮ, ಲೋಕಧರ್ಮ, ನಿಸರ್ಗಧರ್ಮ ಮುಂತಾದ ಶಬ್ದಸಂಯೋಜನೆಗಳನ್ನೊಮ್ಮೆ ಪರಿಶೀಲಿಸಿದರೆ ಧರ್ಮದ ಸುವಿಶಾಲ ವ್ಯಾಪ್ತಿಯೇನೆಂಬುದು ಸುಸ್ಪಷ್ಟವಾಗುತ್ತದೆ. ಆತ್ಮಧರ್ಮ- ಮನೋಧರ್ಮ- ಸ್ವಧರ್ಮಗಳನ್ನು ಒಟ್ಟಿಗೆ ಪರಿಶೀಲಿಸಿದರೆ ಈ ಮೂರೂ ಪರ್ಯಾಯ ಶಬ್ದಗಳೆಂದು ಯಾರಿಗಾದರೂ ಹೊಳೆಯುತ್ತದೆ. ಸ್ವಧರ್ಮವನ್ನು ಆತ್ಮಧರ್ಮ ಅಥವಾ ಮನೋಧರ್ಮ ಎಂಬರ್ಥದಲ್ಲೇ ಬಳಸಿರುವುದಕ್ಕೆ ನಮ್ಮ ಕಾವ್ಯ ಮತ್ತು ನಾಟಕಾದಿಗಳಲ್ಲಿ ಸಾಕಷ್ಟು ನಿದರ್ಶನಗಳಿವೆ.

ಪ್ರತಿಮಾ ನಾಟಕದಲ್ಲಿ ರಾಮನೊಂದಿಗೆ ಕಾಡಿಗೈತರಲು ತವಕಿಸುವ ಸೀತೆಯನ್ನು ಕಂಡು ಸ್ವತಃ ರಾಮನೇ ತಡೆಯುವಂತೆ ಲಕ್ಷ್ಮಣನಿಗೆ ಹೇಳುತ್ತಾನೆ. "ಹೊಗಳಬೇಕಾದ ಸಮಯದಲ್ಲಿ ಪೂಜ್ಯಳನ್ನು ತಡೆಯಲು ನಾನು ಮುಂದಾಗುವುದಿಲ್ಲ"ವೆಂದು ನುಡಿಯುವ ಲಕ್ಷ್ಮಣನು "ಬರ್ಕೆಯಿವಳ್ ಸ್ವಧರ್ಮಮೆಸಗಲ್ ಪತಿನಾಥೆಯರಲ್ತೆ ಕಾಂತೆಯರ್" (ಅನುವಾದ: ಕೆ. ಕೃಷ್ಣಮೂರ್ತಿ) ಎನ್ನುತ್ತಾನೆ. ರಾಮನೊಟ್ಟಿಗೆ ವನವಾಸಕ್ಕೆ ಅಡಿಯಿಡುತ್ತಿರುವ ಸೀತೆಯ ಸಂಕಲ್ಪವನ್ನು 'ಸ್ವಧರ್ಮಾಚರಣೆ'ಯೆಂದು ಲಕ್ಷ್ಮಣನು ವ್ಯಾಖ್ಯಾನಿಸುತ್ತಿದ್ದಾನೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಹೇಳುತ್ತಿರುವುದು ಕೂಡ ಇಂಥ ಸ್ವಧರ್ಮಾಚರಣೆಯನ್ನೇ ! ಕುರುಕ್ಷೇತ್ರದಲ್ಲಿ ಗುರುಹಿರಿಯರು ಬಂಧುಬಳಗವನ್ನು ಕಂಡು ವಿಷಾದಯೋಗದಿಂದ ಆಯುಧಗಳನ್ನು ನೆಲಕ್ಕೆ ಚೆಲ್ಲಿದ ಅರ್ಜುನನಿಗೆ ತಿಳಿಹೇಳುತ್ತಾ ಶ್ರೀಕೃಷ್ಣನು 'ಸ್ವಧರ್ಮೇ ನಿಧನಮ್ ಶ್ರೇಯಃ" ಎನ್ನುತ್ತಿದ್ದಾನೆ. ಅರ್ಜುನನ ಕರ್ತವ್ಯ ವಿಮುಖತೆಯನ್ನು ಮನಗಂಡು 'ಸ್ವಧರ್ಮಾಚರಣೆ'ಯನ್ನಿಲ್ಲಿ ದೃಢವಾಗಿ ಪ್ರತಿಪಾದಿಸಲಾಗಿದೆ. ಆದ್ದರಿಂದ, ಸ್ವಧರ್ಮವೆಂದರೆ ಆತ್ಮಧರ್ಮ ಅಥವಾ ಮನೋಧರ್ಮವೆಂದು ವ್ಯಾಖ್ಯಾನಿಸಿಕೊಳ್ಳುವುದೇ ಹೆಚ್ಚು ಶ್ರೇಯಸ್ಕರ.

ಸ್ವಾಮಿ ವಿವೇಕಾನಂದರನ್ನು ಮತೀಯವಾದಿಗಳು 'ಹಿಂದೂಧರ್ಮದ ವಕ್ತಾರ'ನೆಂಬಂತೆ ಪ್ರತಿಪಾದಿಸುವುದುಂಟು. ಶಿಕಾಗೋದಲ್ಲಿ ನಡೆದ ಸರ್ವಧರ್ಮ ಸಮ್ಮೇಳನದಲ್ಲಿ ಅವರು ಹಿಂದೂಧರ್ಮದ ಪ್ರತಿನಿಧಿಯಾಗಿ ಭಾಗವಹಿಸಿದ್ದರೆಂಬುದು ಸಣ್ಣ ಮಾತಾಗುತ್ತದೆ. ಎಲ್ಲ ಧರ್ಮಗಳನ್ನು ನದಿಗಳೆಂದು ಕರೆದು, ಇವೆಲ್ಲವೂ ಹರಿಯುತ್ತಾ ಐಕ್ಯವಾಗುವ 'ಮಹಾಸಮುದ್ರ'ದ ಕಾಣ್ಕೆಯನ್ನು ನೀಡಿದ ವಿವೇಕಾನಂದರು ಸರ್ವಧರ್ಮ ಸಮ್ಮೇಳನವನ್ನು 'ವಿಶ್ವಧರ್ಮ' ಸಮ್ಮೇಳನದ ಎತ್ತರಕ್ಕೇರಿಸಿದ ಮಹಾನ್ ದಾರ್ಶನಿಕರೆಂದೇ ಹೇಳಬಹುದು. ಶ್ರೀ ರಾಮಕೃಷ್ಣ ಪರಮಹಂಸ ಮತ್ತು ಸ್ವಾಮಿ ವಿವೇಕಾನಂದರಿಂದ ಬಹುವಾಗಿ ಪ್ರಭಾವಿತಗೊಂಡ ಕವಿ ಕುವೆಂಪು ತಮ್ಮ ಬದುಕಿನುದ್ದಕ್ಕೂ ವಿಶ್ವಧರ್ಮ ಮತ್ತು ವಿಶ್ವಮಾನವ ಕಲ್ಪನೆಯನ್ನು 'ಕಾವ್ಯಧರ್ಮ'ವೆಂದು ಬಗೆದು, ಬದಲಾಗದ ತತ್ವನಿಷ್ಠೆಯಿಂದ ಅದನ್ನೊಂದು 'ಸ್ವಧರ್ಮಾಚರಣೆ'ಯೆಂಬಂತೆ ಬಲವಾಗಿ ಪ್ರತಿಪಾದಿಸಿದ್ದಾರೆ. ಜಗದ ಉಳಿವಿಗೆ ಅಗತ್ಯವಾದ ಈ 'ಲೋಕಧರ್ಮ'ವೇ ಯುಗಯುಗಗಳ ಸಂಭವವನ್ನು ಸಾಧ್ಯವಾಗಿಸುವ 'ನಿಸರ್ಗಧರ್ಮ'ವೂ ಆಗಿದೆ. ಇದೇ 'ಋತ' (= ಸತ್ಯ), ಉಳಿದದ್ದೆಲ್ಲ 'ಅನೃತ' (= ಅಸತ್ಯ). ಕುವೆಂಪು ಹೇಳುವಂತೆ "ಋತುಮೊಂದೆ ಗೆಲ್ವುದು ಅನೃತಮಲ್ತು."

**ವಿ. ಚಂದ್ರಶೇಖರ ನಂಗಲಿ**
೨೮೮೪, ಪಿ. ಸಿ. ಬಡಾವಣೆ, ಕೋಲಾರ - ೫೬೩ ೧೦೧

**HOSATHU** Kannada Monthly / December 2001 Rs. 10
RNI Regn. No. KARKAN/1999/614 REGD. CPMG / KA / BGE – 7 / 2001 Licenced to post without prepayment. Licence No. WPP-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna